**ಸಂಪುಟ – ೦೬**

# ಅಂತರ್ವಾಣಿ

**(ಕನ್ನಡ ಸಾಹಿತ್ಯ ಮತ್ತು ಸಮಾಜ ವಿಜ್ಞಾನ ವಿಷಯಗಳ ಸಂಶೋಧನ ಲೇಖನಗಳ ಸಂಗ್ರಹ)**

ಪ್ರಧಾನ ಸಂಪಾದಕರು

**ಜಗದೀಶ ಮುಗಳಿ**

ಸಹ ಸಂಪಾದಕರು

**ನೇಮಿನಾಥ ಬ. ತಪಕೀರೆ**

**ಗುರುದೇವಿ ಪಿ.**




**ಪ್ರಕಾಶಕರು**

**ಇಂದನೀಲಮಣಿಂ ಪ್ರಕಾಶನ, ಚಿಕ್ಕೋಡಿ – ೫೯೧೨೨೨**

**ANTARVANI –** This book is collection of research articles. Written by various Scholars in Kannada Literature and Social Science Subjects.

Volume : 06

Published By : **INDANEELAMANIM PUBLICATIONS, CHIKODI–591222**

E-Mail : indpub108@gmail.com
jnbresearch99@gmail.com

Page : vi + 127 = 133

First Impression: 2019

**www.indpub.webs.com**

**ISBN** : **978–81–938840–4–1**

**© Publisher**

**Price** : **Rs. 150/–**

Cover Page : **Neminath Tapakeere**
Laxminagar, Belkud,
neminathbt@gmail.com
Mob: 9008771277

---

**ಅಂತರ್ವಾಣಿ -** ವಿವಿಧ ಲೇಖಕರಿಂದ ಬರೆಯಲ್ಪಟ್ಟ ಕನ್ನಡ ಸಾಹಿತ್ಯ ಮತ್ತು ಸಮಾಜ ವಿಜ್ಞಾನ ವಿಷಯಗಳ ಸಂಶೋಧನ ಲೇಖನಗಳ ಸಂಗ್ರಹ.

ಸಂಪುಟ:೦೫

**ಪ್ರಕಾಶಕರು** : ಇಂದಣೀಲಮಣಿಂ ಪ್ರಕಾಶನ, ಚಿಕ್ಕೋಡಿ–೫೯೧೨೨೨

ಪುಟಗಳು : ೧೩೩

**ಹಕ್ಕುಗಳು** : ಪ್ರಕಾಶಕರವು

**ಪ್ರಥಮ ಮುದ್ರಣ** : ೨೦೧೯

**ಬೆಲೆ** : ರೂ.೧೫೦/–

**ಮುಖಪುಟ** : ನೇಮಿನಾಥ ತಪಕೀರೆ

**ಮುದ್ರಕರು** : **ಬಿ. ಜಿ. ಪ್ರಿಂಟರ್ಸ್,** ಕ.ವಿ.ವ. ಸಂಘ ಕಾಂಪ್ಲೆಕ್ಸ್,
ಧಾರವಾಡ.



# ಮುನ್ನುಡಿ

ಕನ್ನಡ ಸಾಹಿತ್ಯ ಮತ್ತು ಇತಿಹಾಸದ ಎಳೆಗಳಲ್ಲಿ ಹೆಣೆದುಕೊಂಡಿರುವ ಹಾಗೂ ಹುದುಗಿಕೊಂಡಿರುವ ಸಾಂಸ್ಕೃತಿಕ ಮನೋಧೋರಣೆಗಳನ್ನು ಅನಾವರಣಗೊಳಿಸುವ ಕಾರ್ಯ ಬಹುಮುಖ್ಯ ಸಂಗತಿಯೆನಿಸುತ್ತದೆ. ಕಾಲ, ದೇಶ ಮತ್ತು ಪರಿಸರದ ಸನ್ನಿವೇಶಗಳಿಗನುಸಾರ ಸಾಮಾಜಿಕ ವಿಕಾಸವು ಚಲನಶೀಲಗೊಳ್ಳುತ್ತದೆ. ಭರತಖಂಡದ ಐತಿಹಾಸಿಕತೆಯನ್ನು ಒಳನೋಟಗಳಿಂದ ಅವಲೋಕಿಸಿದಾಗ ಆಯಾ ಪ್ರದೇಶದ ರಾಜರುಗಳು ಅನುಸರಿಸಿದ ಮತಧರ್ಮಗಳಿಗೆ ಅನುಸಾರವಾಗಿ ಜನಜೀವನ ರೂಪುಗೊಂಡಿರುವುದು ದೃಗ್ಗೋಚರವಾಗುತ್ತದೆ. ಜೊತೆಗೆ ಕಲಾ ಚಟುವಟಿಕೆಗಳೂ ಸಹ ಮತಧರ್ಮಗಳ ಜೊತೆಗೆ ಅನುಸಂಧಾನಗೊಂಡ ಸಂಗತಿ ಕಂಡುಬರುತ್ತದೆ. ಈ ಹಿನ್ನೆಲೆಯಲ್ಲಿ ಕನ್ನಡ ನಾಡಿನತುಂಬ ಸಾಹಿತ್ಯ, ಸಂಗೀತ ಕಲೆಮತ್ತು ವಾಸ್ತುಶಿಲ್ಪ ಜೀವಂತಿಕೆಯಿಂದ, ಚೈತನ್ಯದಾಯಕವಾಗಿ ಅರಳಿ ನಿಂತಿವೆ. ಕನ್ನಡ ಸಾಹಿತ್ಯ ಮತ್ತು ಇತಿಹಾಸ ವಿಷಯದ ನಿಕ್ಷಿಪ್ತಗಳಲ್ಲಿ ಕುಳಿತಿರುವ ಅನನ್ಯ ಸಂಗತಿಗಳನ್ನು ವೈಚಾರಿಕತೆಯ ದೃಷ್ಟಿಯಿಂದ ಪ್ರಸ್ತುತ ಕಾಲಕ್ಕೆ ಬರಮಾಡಿಕೊಳ್ಳುವ ಜರೂರು ಇದೆ. ಸಮಕಾಲೀನ ವಿದ್ಯಮಾನಗಳಿಗೆ ಮುಖಾಮುಖಿಯಾಗಿಸುವ ಅಗತ್ಯವಿದೆ. ಆ ಕುರಿತಾಗಿ ಅಧ್ಯಯನ, ಅಧ್ಯಾಪನ ಮಾಡುತ್ತಿರುವ ವಿದ್ವಾಂಸರ ಮತ್ತು ಯುವ ಸಂಶೋಧಕರ ಮೌಲಿಕ ಲೇಖನಗಳನ್ನು ಆಯ್ದುಕೊಂಡು ದಾಖಲುಗೊಳಿಸುವ ಉದ್ದೇಶ ಒಂದು ಬಗೆಯದಾದರೆ; ಅಲ್ಲಿನ ಮೂಲ ದನಿಗಳನ್ನು, ಹೊಸ ಸಂವೇದನೆಗಳನ್ನು ಗುರುತಿಸುವ ಕಾರ್ಯ ಇನ್ನೊಂದು ಬಗೆಯದಾಗಿದೆ.

ಪ್ರಸ್ತುತ ಸಂದರ್ಭದ ಜಾಗತೀಕರಣ, ಉದಾರೀಕರಣ ಮತ್ತು ಖಾಸಗೀಕರಣದ ಆಧುನಿಕ ಕಾಲಘಟ್ಟದಲ್ಲಿ ಮುಖ್ಯವಾಗಿ ಜೀವನ ಮೌಲ್ಯಗಳು ನಶಿಸುತ್ತಿರುವುದು ಕಂಡುಬರುತ್ತಿದೆ. ಜೀವಮುಖಿ, ಜೀವನಮುಖಿ ಮತ್ತು ಸಮಾಜಮುಖಿ ಚಿಂತನ–ಮಂಥನ ಮಾಡುವ ಅಗತ್ಯತೆಯ ದೊಡ್ಡ ಜವಾಬ್ದಾರಿಯೊಂದು ನಮ್ಮ ಮುಂದಿದೆ. ವಿವಿಧ ದಿಕ್ಕಿನಿಂದ ಹರಿದು ಬರುವ ವಿಶಿಷ್ಟ ಜ್ಞಾನಧಾರೆಗಳನ್ನು ಹಿಡಿದಿಟ್ಟುಕೊಂಡು, ಅರಿವಿನ ದಿಗಂತವನ್ನು ವಿಸ್ತರಿಸುವ ಕಾರ್ಯ ಬಹುಮುಖ ಆಯಾಮದ್ದಾಗಿದೆ. ವಿವಿಧ ಜ್ಞಾನ ಶಿಸ್ತುಗಳಲ್ಲಿನ ಅನನ್ಯತೆಯ ಜೀವಸೆಲೆಯನ್ನು ಗುರುತಿಸುವುದು ಕೂಡ ಅಷ್ಟೇ ಮಹತ್ವದ ವಿಚಾರವಾಗಿದೆ. ನಮ್ಮ ಅರಿವಿನ ಮಿತಿಯೊಳಗೆ ವಸ್ತುನಿಷ್ಠವೂ, ಸಂವಹನಶೀಲವೂ ಆದ ಐತಿಹಾಸಿಕ, ಸಮಕಾಲೀನ ಮತ್ತು ಸಕಾಲಿಕವಾದ ವಿಚಾರಗಳ ಜೀವಂತ ವಿದ್ಯಮಾನಗಳನ್ನು ಕಟ್ಟಿಕೊಡುವುದರ ಜೊತೆಗೆ ಸಂಗ್ರಹಿಸುವ ಪ್ರಯತ್ನವನ್ನು ಮಾಡಲಾಗಿದೆ.

ಪ್ರಾಚೀನ ಕಾಲದಿಂದಲೂ ಕರ್ನಾಟಕದಲ್ಲಿ ಅನೇಕ ಧರ್ಮಗಳು ರಾಜಾಶ್ರಯದಲ್ಲಿ ಬೆಳೆದು ಬಂದಿವೆ. ಅವು ಜನಬದುಕಿನ ಮೇಲೆ ರಾಜಕೀಯ, ಸಾಮಾಜಿಕ ಮತ್ತು ಧಾರ್ಮಿಕ ಪ್ರಭಾವವನ್ನು ಉಂಟು ಮಾಡಿವೆ. ಆಯಾ ಧರ್ಮಗಳ ಹಿನ್ನೆಲೆಯಲ್ಲಿ ದೇವಾಲಯಗಳು ಮತ್ತು ಬಸದಿಗಳು ನಿರ್ಮಾಣಗೊಂಡಿವೆ. ಅವುಗಳಲ್ಲಿನ ಶಿಲ್ಪಕಲೆಗಳ ರಚನೆ ಮತ್ತು ನಿರ್ಮಾಣದ ಉದ್ದೇಶವನ್ನು ಅರಿಯುವುದರ ಜೊತೆಗೆ ಅವುಗಳ ಜೀವಂತಿಕೆ ಮತ್ತು ಸೌಂದರ್ಯದಿಂದ ಉಂಟು ಮಾಡುವ ಮನದಾನಂದದ ಹಿಂದಿರುವ ಸೂಕ್ಷ್ಮ ಮನೋಧೋರಣೆಗಳನ್ನು ಅರಿಯುವುದು ಮುಖ್ಯವೆನಿಸುತ್ತದೆ. ಆ ಕಾರಣಕ್ಕಾಗಿಯೇ ಮಹೋನ್ನತ ಪರಂಪರೆಯ ಮೇಲೆ ಬೆಳಕು ಚೆಲ್ಲುವ ಉದ್ದೇಶ ಇಲ್ಲಿನ ಸಂಶೋಧನ ಲೇಖನಗಳದ್ದಾಗಿದೆ. ಪರಂಪರೆಯ ಐತಿಹಾಸಿಕತೆಯನ್ನು ಅರಿಯಲು ಆಕರಗಳ ಪಾತ್ರ ಮುಖ್ಯವಾದುದು.

ಜನಪದ ಸಂಸ್ಕೃತಿಯ ದಾಖಲೆಗಳಾದ ಕಥೆ, ಗೀತೆ, ಗೇಯಗಳ ಅಂತರಾಳಗಳನ್ನೊಳಗೊಂಡು ವೈಜ್ಞಾನಿಕ ತಳಹದಿಯ ತಾತ್ತ್ವಿಕತೆಯನ್ನು ಪ್ರತಿಪಾದಿಸುವ ಲೇಖನಗಳೊಂದಿಗೆ ಕನ್ನಡ ಸಾಹಿತ್ಯ ಮತ್ತು ಸಮಾಜ ವಿಜ್ಞಾನ ವಿಷಯಗಳಲ್ಲಿ ಅಡಗಿರುವ ಹಲವಾರು ತಾದಾತ್ಮ್ಯಗಳನ್ನು ಗುರುತಿಸುವ ಪ್ರಯತ್ನವನ್ನು ಅಂತರ್ವಾಣಿ ೭ನೆಯ ಸಂಪುಟದಲ್ಲಿ ಮಾಡಲಾಗಿದೆ. ನಾಡಿನ ಹಲವಾರು ಹಿರಿಯ ಹಾಗೂ ಕಿರಿಯ ಸಂಶೋಧಕರು ಬರೆದಿರುವ ಸಂಶೋಧನ ಲೇಖನಗಳ ಸಂಗ್ರಹ ಇದಾಗಿದೆ.

**ಜಗದೀಶ ಮುಗಳಿ,**
ಭೆಂಡವಾಡ.

## ಪರಿವಿಡಿ



# ಜನಪದ ಕಥನಗೀತೆ : ಹಿರಿದಿಮ್ಮವ್ವ

✍ **ಶ್ರೀಮತಿ. ಗುರುದೇವಿ ಪಡಸಾಲಿ**

ಕನ್ನಡ ಸಾಹಿತ್ಯ ಲೋಕವು ಅಪೂರ್ವವಾದುದು. ಪ್ರತಿಯೊಂದು ಸಾಹಿತ್ಯದ ತಾಯಿಬೇರಾಗಿರುವ ಜನಪದ ಸಾಹಿತ್ಯವು ಕನ್ನಡ ಸಾಹಿತ್ಯವೂ ಒಡಮೂಡಿಬರಲು ಕಾರಣೀಭೂತವಾದುದು. ಜನರ ಬಾಯಿಯಿಂದ ಬಾಯಿಗೆ ಹರಿದುಬಂದು ಮಹಾಗುರುತನ್ನು ಮೂಡಿಸಿದೆ. ಇದರ ಬೇರುಗಳು ಪ್ರಾಚೀನ ಕಾಲದಿಂದ ಇಂದಿನವರೆಗೂ ಹಸಿರಾದ ಸಾಹಿತ್ಯ ಚಿಗುರು ಮೂಡುವಂತೆ ಮಾಡಿದೆ. ಅದಕ್ಕಾಗಿಯೇ 'ಜನವಾಣಿ ಬೇರು ಕವಿವಾಣಿ ಹೂವು!' ಎಂಬ ಉಕ್ತಿವಾಕ್ಯ ಬಂದಿರುವುದು. ಸಾಹಿತ್ಯವು ಜೀವನದ ಹಲವಾರು ಘಟ್ಟಗಳನ್ನು ತನ್ನಲ್ಲಿ ಒಳಗೊಂಡಿರುತ್ತದೆ. ಅಂತಹ ಜನಪದ ಸಾಹಿತ್ಯವು ಕಥೆ, ಕಾವ್ಯ, ಕಥನಗೀತಗಳ ರೂಪದಲ್ಲಿ ತನ್ನನ್ನು ಗುರುತಿಸಿಕೊಂಡಿದೆ. ಹಲವಾರು ಬಾರಿ ಪಂಡಿತ ಕವಿಗಳಿಂದ ಅವಹೇಳನಕ್ಕೆ ಒಳಗಾದರೂ ತನ್ನ ಇರುವಿಕೆಯಲ್ಲಾಗಲೀ, ತನ್ನ ನೆಲೆಯಲ್ಲಾಗಲೀ ಯಾವುದೇ ಕುಂದುಂಟಾಗದಂತೆ ಜನಪದ ಸಾಹಿತ್ಯವು ತನ್ನದೇಯಾದ ಅಸ್ಮಿತೆಯನ್ನು ರೂಪಿಸಿಕೊಂಡಿದೆ. ಹೀಗಾಗಿ ಅದು ಜನಮಾನಸದಲ್ಲಿ ಅಚ್ಚಳಿಯದಂತೆ ನೆಲೆಯಾಗಿದೆ. ಇಲ್ಲಿ ಒಡಮೂಡಿಬಂದಿರುವುದು ತರ್ಕಕ್ಕೆ ನಿಲುಕಲಾರದ ವಿಷಯವೆಂದೇ ಹೇಳಬಹುದು. ಜನಪದರು ಅತೀರಂಜಿತ ವಿಷಯಗಳಲ್ಲಿಯೇ ಸತ್ಯ ಸೌಂದರ್ಯವನ್ನು ಪಡೆಮೂಡಿಸಿದವರು.

ಕಥನಗೀತೆಗಳ ಸಂಗ್ರಾಹಕ ಸಂಪಾದಕರಾದ ಡಾ. ಜೀ. ಶಂ. ಪರಮಶಿವಯ್ಯ ಅವರು ಸಂಗ್ರಹಿಸಿದ 'ಚಿಕ್ಕೋಳು ಹಿರಿದಿಮ್ಮವ್ವ' ಎಂಬ ಕಥೆಯು ಒಂದು ಆಂತರಿಕ ಸೂತ್ರ ಸಂಬಂಧವನ್ನೇರ್ಪಡಿಸಿದೆ. ಮನೋಜ್ಞವಾದ ಈ ಕಥನಗೀತೆಯು ವಿಶೇಷವಾಗಿ ಹೆಣ್ಣುಮಕ್ಕಳನ್ನು ಆಕರ್ಷಿಸುತ್ತದೆ. ಏಳು ಜನ ಅಣ್ಣಂದಿರ ಮುದ್ದಿನ ತಂಗಿ ಹಿರಿದಿಮ್ಮವ್ವ. ಏಳುಗೂಡಿನ ದನ ಕಾಯುವಾಗ ಮರದ ಮೇಲಿನ ಪರದೇಶಿ ಬೆತ್ತಲೆ ಹುಡುಗ ಬೊಮ್ಮಲಿಂಗನನ್ನು ನೋಡುತ್ತಾಳೆ. ಬೇಡರವನಾದ ಅವನನ್ನು ಆಕೆಯ ಅಣ್ಣಂದಿರು ಬೇಡವೆಂದರೂ ಅವನ ಸ್ಥಿತಿಗೆ ಮರುಗಿ ತನ್ನ ಮನೆಗೆ ಕರೆದುಕೊಂಡು ಹೋಗುತ್ತಾಳೆ. ಒಂದು ದಿನ ಹೊಲಕ್ಕೆ ಹೋಗಿರುವ ಅಣ್ಣಂದಿರಿಗೆ ಊಟ ಕೊಂಡೊಯ್ಯುವಾಗ ಕಗ್ಗಲ್ಲ ಕಣಿವೆಯಲ್ಲಿ ಬೊಮ್ಮಲಿಂಗನು ಹಿರಿದಿಮ್ಮವ್ವನ ಮಜರುಗಳನ್ನು ಹಿಡಿದೆಳೆಯುತ್ತಾನೆ. ಅಲ್ಲಿಂದ ಹೇಗೋ ಪಾರಾಗಿ ಬಂದ ಇವಳಿಗೆ ಅಣ್ಣಂದಿರು ಕೇಳಿದಾಗ 'ಕಣಿವೆಯಲ್ಲಿ ಕರಡಿಯನ್ನು ತಪ್ಪಿಸಿಕೊಂಡು ಬರುವಾಗ ಜಡೆ ಮುಳ್ಳಿಗೆ ಸಿಕ್ಕಿಕೊಂಡಿತು' ಎಂದು ಹೇಳಿ ಮೊಮ್ಮಲಿಂಗನ ತಪ್ಪನ್ನು ಮರೆಮಾಚಿದಳು. ಮತ್ತೊಂದು ದಿನ ಋತಿಮತಿಯಾದ ನಂತರ ಏಳು ಜನ ಅಣ್ಣಂದಿರ ಒಬ್ಬಳೇ ತಂಗಿಯಾದ ಈಕೆಯ ಸೋಬಾನೆ ಕಾರ್ಯವನ್ನು ಮನೆಯ ಮುಂದೆ ಚಪ್ಪರಹಾಕಿ ಸಂಭ್ರಮದಿಂದ ಆಚರಿಸುತ್ತಾರೆ. ಈ ಏಳು ಜನ ಅಣ್ಣಂದಿರ ಕಾವಲು ಇರುವಾಗಲೂ ಇವಳ ಮೇಲೆ ಮನಸಿಟ್ಟ ಬೊಮ್ಮಲಿಂಗ ಕೊಬ್ಬರಿ, ಬೆಲ್ಲದುಂಡೆಗಳನ್ನು ಎಸೆಯುತ್ತಾನೆ. ಅವಳು ಅವುಗಳನ್ನು ಮರಳಿ ಎಸೆಯುವಾಗ ಆಕೆಯ

ಕೈಬಳೆಗಳ ಸದ್ದಾಗುತ್ತದೆ. ಎದ್ದ ಅಣ್ಣಂದಿರು ಏನೆಂದು? ಕೇಳಿದಾಗ 'ತುಪ್ಪದ ಜಿಡ್ಡಿಗೆ ಇರುವೆ ಹತ್ತಿವೆ' ಎಂದು ಹೇಳಿ ನಿಜಸಂಗತಿಯನ್ನು ಮರೆಮಾಚುತ್ತಾಳೆ. ಸೋಬಾನದ ನಂತರ ಒಂದು ತಿಂಗಳಿದ್ದು, ಗಂಡನ ಮನೆಗೆ ಹೊರಡುತ್ತಾಳೆ. ಆಕೆ ತನ್ನ ಗಂಡನನ್ನನುಸರಿಸಿ ಮುಂದೆ ಸಾಗುತ್ತಾಳೆ. ಅವಳ ಜೊತೆಯಲ್ಲಿ ಸಾಕಿದ ನಾಯಿಯೂ ಹೊರಡುತ್ತದೆ. ಬೇಡವೆಂದರೂ ಬೊಮ್ಮಲಿಂಗನು ಆಕೆಯನ್ನು ಹಿಂಬಾಲಿಸುತ್ತಾನೆ. ದಾರಿಮಧ್ಯದಲ್ಲಿ ಬೊಮ್ಮಲಿಂಗನಿಗೂ, ಗಂಡನಿಗೂ ಉಣ್ಣಲಿಕ್ಕುವಾಗ, ಇವಳ ಮೇಲೆ ವ್ಯಾಮೋಹಕ್ಕೊಳಗಾದ ಬೊಮ್ಮಲಿಂಗನು ಹಿರಿದಿಮ್ಮವ್ವನ ಗಂಡನನ್ನು ಕೊಲ್ಲುತ್ತಾನೆ. ಈ ಅಪಾಯದ ಸ್ಥಿತಿಯಲ್ಲಿ ಧೈರ್ಯಗುಂದದ ಇವಳು 'ನಿನ್ನ ಪತ್ನಿ ನಾನು' ಎಂದು ನಂಬಿಸಿ ಉಣ್ಣಲಿಕ್ಕುತ್ತಾಳೆ. ಸಮಯ ಸಾಧಿಸಿ ಪತಿಯನ್ನು ಕೊಂದ ಬೊಮ್ಮಲಿಂಗನನ್ನು ಅಲ್ಲಿಯೇ ಕೊಲ್ಲುತ್ತಾಳೆ. ಇವಳೊಂದಿಗೆ ಹೋದ ನಾಯಿ ರಕ್ತದೋಕುಳಿಯೊಡನೆ ಮನೆಗೆ ಬಂದು ಸುದ್ದಿ ತಲುಪಿಸುತ್ತದೆ. ಏಳೂ ಜನ ಅಣ್ಣಂದಿರು ಆಶ್ಚರ್ಯದಿಂದ ತಂಗಿ ಹೋದ ಕಡೆಗೆ ದಾರಿ ಹಿಡಿದು ಹೊರಟಾಗ, ಉಡಿಯಲ್ಲಿ ಗಂಡನ ರುಂಡ ಕಟ್ಟಿಕೊಂಡು ಕಾಲಲ್ಲಿ ಬೊಮ್ಮಲಿಂಗನ ರುಂಡವನ್ನು ಒದೆಯುತ್ತ ಬರುತ್ತಾಳೆ. ನಂತರ ಅಣ್ಣಂದಿರು ಎಷ್ಟೇ ಹೇಳಿದರೂ ಕೇಳದೆ ಕೊಂಡಹಾದು ಪ್ರಾಣತ್ಯಾಗ ಮಾಡುತ್ತಾಳೆ.

ಮನೋಜ್ಞವಾದ ಈ ಕಥನಗೀತೆಯು ಹೆಣ್ಣುಮಕ್ಕಳನ್ನು ವಿಶೇಷವಾಗಿ ಆಕರ್ಷಿಸುವುದಲ್ಲದೇ ಹೆಣ್ಣಿನ ಅನಂತ ಸಂತಾಪ, ಸಂಕಷ್ಟಗಳನ್ನು ತನ್ನಲ್ಲಿ ಕಟ್ಟಿಕೊಡುತ್ತದೆ. ಇಂತಹ ತ್ಯಾಗ, ಬಲಿದಾನಗಳನ್ನು ತಿಳಿಸುವ ಸಾಕಷ್ಟು ಕಥಾನಕಗಳು ಜನಪದ ಸಾಹಿತ್ಯದಲ್ಲಿ ದೊರೆಯುತ್ತವೆ. ಇವು ಸ್ತ್ರೀ ಜೀವನದ ಸಾರ್ಥಕತೆಯನ್ನು ನಿರೂಪಿಸುವವು. ಒಂದು ರೀತಿಯಲ್ಲಿ ಬದುಕನ್ನು ಒಪ್ಪಿ ಅದರೊಂದಿಗೆ ಒಪ್ಪಂದ ಮಾಡಿಕೊಂಡು ತನ್ನ ಬಲಿದಾನವನ್ನಾದರೂ ಕೊಟ್ಟು ಮೌಲ್ಯವನ್ನು ಕಾಪಾಡಿಕೊಂಡು ಬರುವುದರೊಂದಿಗೆ ಪುರುಷನಿಗೆ ತನ್ನನ್ನು ಅರ್ಪಿಸಿಕೊಂಡು ಜೀವನದ ಸಾರ್ಥಕತೆಯನ್ನು ಕಂಡುಕೊಳ್ಳುವುದಾಗಿದೆ. ಅಂತಹದರಲ್ಲಿ ಕೆಲವೊಮ್ಮೆ ಅಸಹಜವೂ, ಅನಿವಾರ್ಯವೂ ಎನಿಸುವ ಘಟನೆಗಳು ಘಟಿಸುತ್ತವೆ. ಆಗ ಅವುಗಳನ್ನು ಹೆಣ್ಣುಮಗಳು ಹೇಗೆ ದಿಟ್ಟವಾಗಿ ಎದುರಿಸಿ ನಿಲ್ಲುತ್ತಾಳೆ ಎಂಬುದನ್ನು ಚಿತ್ರಿಸುವ ಕಥನಗೀತೆಗಳಲ್ಲಿ ಇದೂ ಒಂದಾಗಿದೆ.

ಉತ್ತರದೇವಿಯಿಂದ ಕೊಂತೆಮ್ಮದೇವಿಯವರೆಗೆ ಇಂತಹ ಕಥನಗಳು ಹೆಣ್ಣಿನ ಜೀವನಕ್ಕೆ ಮೀಸಲಾಗಿವೆ. ಯಾವುದೋ ಕಾರಣಕ್ಕೆ ಶೀಲದ ಸಂಶಯಕ್ಕೊಳಗಾದ ಉತ್ತರದೇವಿ, ಗಂಡನ ಮನೆಯಿಂದ ತಿರಸ್ಕೃತಳಾಗಿ ಸ್ತ್ರೀಯು ಬದುಕಿನಲ್ಲಿ ಏನೇನು ಕಷ್ಟಗಳನ್ನು ಅನುಭವಿಸುತ್ತಾಳೆ ಎಂಬುದನ್ನು ನಿರೂಪಿಸುತ್ತದೆ. ಪಾತಿವ್ರತ್ಯವನ್ನು ಕಾಪಾಡಿಕೊಂಡು ಬಂದ ಸ್ತ್ರೀ ಪತಿಮರಣದ ನಂತರ ಸಹಗಮನ ಯಾವ ಪ್ರಲೋಭನೆಗೂ ಒಳಗಾಗದೆ ಮಡಿದಳು ಎಂಬುದನ್ನು ಚಿತ್ರಿಸುತ್ತದೆ. ಈ ರೀತಿ ಬಾಲ್ಯವಿವಾಹದ ದುಷ್ಟ ಸಂಪ್ರದಾಯಕ್ಕೆ ತುತ್ತಾಗಿ ಪತಿಮುಖವನ್ನು ಕಾಣದ ನಾಗಮ್ಮ ಮದುವೆಯಾಗಬೇಕಾದ ಸಂದರ್ಭದಲ್ಲಿಯೇ ಗಂಡನು ಮರಣಹೊಂದಿದ್ದರಿಂದ ಹೊಂಡದೊಂದಿಗೆ ಮದುವೆಯಾಗುತ್ತಾಳೆ. ಪತಿಮರಣದ ನಂತರದ ಸ್ತ್ರೀಯ ಗೋಳನ್ನು ತಿದ್ದಿಸುವ ಸತಿಪದ್ಧತಿ ಮುಖ್ಯವಾಗಿರುವುದರಿಂದ ಪತಿಮನೆಯ ಹೊಸ್ತಿಲನ್ನು ತುಳಿಯದೇ ಬಾಲೆಯನ್ನು ಸಹ ತನಗೆ ಬಲಿಯಾಗಿಸಿಕೊಳ್ಳುತ್ತದೆ. ಅಂತಹ ಸತಿಹೋದ ಘಟನೆಗಳ ಕಿಥನಗೀತೆಗಳಿವೆ.



ಇಲ್ಲಿ ಬಂಜೆತನದ ನೋವನ್ನು ಚಿತ್ರಿಸುವ ಪೌರಾಣಿಕ ವಸ್ತುವಿನ ಛಾಯೆಯನ್ನು ಹೊಂದಿದ್ದರೂ ಸಾಮಾನ್ಯ ಬದುಕನ್ನು ಹೃದಯಂಗಮವಾಗಿ ಪ್ರತಿಬಿಂಬಿಸುವ ಬಡತನದ ನೋವನ್ನು ಹಾಡಾಗಿಸುವ ಮತ್ತೆ ಸಮಾಜಕ್ಕಾಗಿ ತನ್ನನ್ನೇ ಬಲಿಕೊಟ್ಟು ಸ್ತ್ರೀಯರ ಹಿರಿಮೆಯಲ್ಲಿ ಹೊಗಳುವ ಗೀತೆಗಳಿಗೂ ಆಸ್ಪದವಿದೆ. ಇಲ್ಲಿ ಹೀಗೆ ಸ್ತ್ರೀ ಜೀವನದ ವಿವಿಧ ಮುಖಗಳನ್ನು ದುಃಖ ಸಂಕಷ್ಟಗಳನ್ನು ಚಿತ್ರಿಸುವ ಹಲವಾರು ಕಥನಗಳು ಕಾಣಸಿಗುತ್ತವೆ.

**ಪರಾಮರ್ಶನ ಗ್ರಂಥಗಳು:**

೧. ಜನಪದ ಕಥನಗೀತೆಗಳು : ಮುತ್ತಿನ ಹಾರ ; ಖಂಡೋಬಾ. ಪಿ. ಕೆ. ; ಕರ್ನಾಟಕ ಸಾಹಿತ್ಯ ಅಕಾಡೆಮಿ; ೧೯೯೬

೨. ಜನಪದ ಚಾರಿತ್ರಿಕ ಕಥನಗೀತೆಗಳು ; ಡಾ. ಬಿ. ಎಸ್. ತಲ್ವಾಡಿ ; ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು; ೧೯೯೮

೩. ಕನ್ನಡ ಜನಪದ ಕಥೆಗಳು ; ಜೀ. ಶಂ. ಪರಮಶಿವಯ್ಯ ; ನವಕರ್ನಾಟಕ ಪ್ರಕಾಶನ, ಬೆಂಗಳೂರು ; ೨೦೦೦



# ತತ್ತ್ವಾರ್ಥಸೂತ್ರಾವಲೋಕನ

ನೇಮಿನಾಥ ತಪಕೀರೆ

ಭಾರತೀಯ ಸೈದ್ಧಾಂತಿಕ, ತಾತ್ತ್ವಿಕ ಹಾಗೂ ಧಾರ್ಮಿಕ ವೈಚಾರಿಕತೆಗಳಲ್ಲಿ ಜೈನಧರ್ಮವು ತನ್ನದೇಯಾದ ತತ್ತ್ವಗಳ ಪ್ರತಿಪಾದನೆಯೊಂದಿಗೆ ಉಚ್ಚ್ರಾಯ ಸ್ಥಿತಿಯನ್ನು ತಲುಪಿ, ಐತಿಹಾಸಿಕ ಹಾಗೂ ಪಾರಂಪರಿಕ ನೆಲೆಯನ್ನು ಕಂಡುಕೊಂಡಿದೆ. ವೃಷಭಾದಿಯಾದಿ ಪಾರ್ಶ್ವನಾಥರವರೆಗೆ ೨೩ ಜನ ತೀರ್ಥಂಕರರ ತಾತ್ತ್ವಿಕ ವಿಚಾರಗಳೊಂದಿಗೆ ಶ್ರೀಮಂತಗೊಂಡು ೨೪ನೆಯ ತೀರ್ಥಂಕರ ಮಹಾವೀರರಿಂದ ಇನ್ನಷ್ಟು ಉನ್ನತಿಯನ್ನು ಕಂಡುಕೊಂಡಿತು. ಕ್ರಿ.ಪೂ. ೬ನೇ ಶತಮಾನದಲ್ಲಿ ವೈಶಾಲಿಯ ರಾಜಕುಮಾರನಾಗಿದ್ದ ವರ್ಧಮಾನ ಮಹಾವೀರರು ತಮ್ಮ ೩೦ನೇ ವಯಸ್ಸಿನಲ್ಲಿ ಸಾಂಸಾರಿಕ ಭೋಗೋಪಭೋಗಗಳನ್ನು ತೊರೆದು ವಿರಕ್ತರಾಗಿ, ಸಮಸ್ತ ಪರಿಗ್ರಹಗಳನ್ನು ತ್ಯಜಿಸಿ ಹನ್ನೆರಡು ವರ್ಷಗಳಷ್ಟು ಕಾಲ ಕಠಿಣವಾದ ದಿಗಂಬರ ತಪಸ್ಸಾಚರಿಸಿದ ಫಲಸಿಂದ ಘಾತಿಕರ್ಮಗಳನ್ನು ಜಯಿಸಿ, ಜ್ಞಾನಸಂಪನ್ನರಾದರು. ಅದರಿಂದ ಜಗತ್ತಿನ ಸಮಸ್ತ ಜೀವಕೋಟಿಯ ಸಮ್ಮುನ್ನತಿಗಾಗಿ ತ್ರಿಕಾಲಾಬಾಧಿತ ಧರ್ಮತತ್ತ್ವಗಳನ್ನು ಅನೇಕಾಂತ ದೃಷ್ಟಿಕೋನಗಳಿಂದ ಬೋಧಿಸಿದರು. ಅವರ ಬೋಧನೆಗಳು ನೈಜವಾದವುಗಳು. ಪ್ರಾಕೃತಿಕವಾದವುಗಳು. ಅವುಗಳನ್ನೇ "ಅವರ ಶಿಷ್ಯರಾದ ಇಂದ್ರಭೂತಿ ಗೌತಮ ಗಣಧರರು ಪ್ರಾಕೃತವೆಂದು ಕರೆದರು. ಪ್ರಾಕೃತವು ಒಂದು ಜನಸಾಮಾನ್ಯರ ಭಾಷೆಯಾಗಿದ್ದಿತು. ವರ್ಧಮಾನ ಮಹಾವೀರರ ಉಪದೇಶಗಳು ಸಮಸ್ತ ಮುನಿ, ಆರ್ಯಿಕೆ, ಶ್ರಾವಕ, ಶ್ರಾವಕಿಯರಿಗೂ ಸಮರೂಪದಲ್ಲಿ ಪ್ರಾಪ್ತವಾಗುತ್ತಿತ್ತು. ಸುಮಾರು ಮೂರು-ನಾಲ್ಕು ಶತಮಾನಗಳವರೆಗೆ ಅವರ ವಚನಾಮೃತಗಳು ಶ್ರುತಿರೂಪದಲ್ಲಿ ಹರಿದು ಬಂದವು." ನಂತರದಲ್ಲಿ ಅದನ್ನು ಗೌತಮಗಣಧರರು ಹನ್ನೆರಡು ಅಂಗಗಳಲ್ಲಿ ಸಂಗ್ರಹಿಸಿದರು. ದ್ವಾದಶಾಂಗರೂಪದ ಜ್ಞಾನವನ್ನು ಪೂರ್ಣವಾಗಿ ಅರಿತವರನ್ನು ಕೇವಲಿಗಳು ಮತ್ತು ಶ್ರುತಕೇವಲಿಗಳು ಎಂದು ಎರಡು ರೀತಿಯಲ್ಲಿ ಹೇಳಲಾಗುತ್ತದೆ. ಸರ್ವಪ್ರತ್ಯಕ್ಷ ಜ್ಞಾನಿಗಳನ್ನು ಕೇವಲಿ (ಸ್ವತಃ ಜ್ಞಾನೋದಯ ಪಡೆದವರು)ಗಳೆಂದೂ, ಸರ್ವಪರೋಕ್ಷ ಜ್ಞಾನಿಗಳನ್ನು ಶ್ರುತಕೇವಲಿ (ಉಪದೇಶಾಮೃತವನ್ನು ಕೇಳಿಸಿಕೊಂಡು ಜ್ಞಾನೋದಯ ಪಡೆದವರು)ಗಳೆಂದು ಕರೆಯಲಾಗುತ್ತದೆ.

ಹೀಗೆ ಮಹಾವೀರರ ಪರಿನಿರ್ವಾಣದ ನಂತರದ ಕಾಲದಲ್ಲಿ ಇಂದ್ರಭೂತಿ ಗೌತಮರು, ಸುಧರ್ಮಾಚಾರ್ಯರು ಮತ್ತು ಜಂಬೂಸ್ವಾಮಿಗಳು ಅನುಕ್ರಮವಾಗಿ ಸುಮಾರು ಎರಡುನೂರು ವರ್ಷಗಳವರೆಗೆ ತೀರ್ಥಂಕರರ ತತ್ತ್ವೋಪದೇಶಗಳನ್ನು ಪ್ರಚುರಪಡಿಸಿದರು. "ಭಗವಾನ್ ಶ್ರೀ ಮಹಾವೀರರಿಂದ ಪುನರುತ್ಥಾನಗೊಂಡ ಜೈನಧರ್ಮವು ಕೇವಲಿ, ಶ್ರುತಕೇವಲಿ ಹಾಗೂ ಆಚಾರ್ಯಪ್ರವರುಗಳ ಮೂಲಕ ಪರಂಪರಾಗತವಾಗಿ ಪ್ರವಹಿಸಿ, ವಿಶ್ವದ ಜನಕೋಟಿಯನ್ನು ಹಿಂಸೆಯಿಂದ ಅಹಿಂಸೆಯೆಡೆಗೆ, ಅಶಾಂತಿಯಿಂದ ಶಾಂತಿಸುಭಿಕ್ಷೆಯ ಕಡೆಗೆ ಅಜ್ಞಾನದಿಂದ ಸುಜ್ಞಾನದೆಡೆಗೆ ಸಾಗಿಸುತ್ತ ಬಂದಿದೆ. ಅಂತೆಯೇ ತೀರ್ಥಂಕರರ ದಿವ್ಯವಾಣಿಯು ನಾಲ್ಕುನೂರು ವರ್ಷಗಳವರೆಗೆ ಶ್ರುತಿರೂಪದಲ್ಲಿದ್ದು, ತದನಂತರದಲ್ಲಿ ಪ್ರಾತಃಸ್ಮರಣೀಯರಾದ ಆಚಾರ್ಯ ಶ್ರೀ ಪುಷ್ಪದಂತ ಭೂತಬಲಿ, ಆಚಾರ್ಯ ಶ್ರೀ ಶಿವಕೋಟಿ, ಕುಂದಕುಂದಾಚಾರ್ಯರು, ಗಣಧರಾಚಾರ್ಯರು ಮುಂತಾದ ಮಹಾನ್ ದಾರ್ಶನಿಕರ ಮೂಲಕ ಷಟ್‌ಖಂಡಾಗಮ, ಮೂಲಾರಾಧನಾ, ಸಮಯಸಾರ, ಪ್ರವಚನಸಾರ, ಪಂಚಾಸ್ತಿಕಾಯ, ಅಷ್ಟಪಾಹುಡ ಮುಂತಾದ ಪ್ರಾಕೃತಭಾಷೆಯ ಗ್ರಂಥಗಳಲ್ಲಿ ಲಿಪಿಬದ್ಧಗೊಂಡವು. ಕುಂದಕುಂದಾಚಾರ್ಯರ ಸಮಕಾಲೀನರಾದ 'ಶ್ರೀ ಉಮಾಸ್ವಾಮಿ' ಆಚಾರ್ಯರು ತಮ್ಮ ಪೂರ್ವಾಚಾರ್ಯಕೃತ ಪ್ರಾಕೃತ ಗ್ರಂಥಗಳನ್ನು ಆಮೂಲಾಗ್ರವಾಗಿ ಅಧ್ಯಯನ ಮಾಡಿ, ಪ್ರಥಮಬಾರಿಗೆ ಮಹಾವೀರರ ಉಪದೇಶದ ಮೂಲತತ್ತ್ವಗಳನ್ನು ಸಂಸ್ಕೃತ ಭಾಷೆಯಲ್ಲಿ ಸೂತ್ರಗಳ ರೂಪದಲ್ಲಿ ಸಂಗ್ರಹಿಸಿದರು. ಅದು 'ತತ್ತ್ವಾರ್ಥಸೂತ್ರ' ಅಥವಾ 'ಮೋಕ್ಷಶಾಸ್ತ್ರ'ವೆಂದು ಕರೆಯಲ್ಪಟ್ಟಿತು."

**"ಸಮ್ಯಗ್‌ದರ್ಶನ-ಜ್ಞಾನ-ಚಾರಿತ್ರಾಣಿ ಮೋಕ್ಷಮಾರ್ಗಃ ॥೧.೧ ॥ (ಸಂ)"**

ಸಮ್ಯಗ್ದರ್ಶನ, ಸಮ್ಯಕ್‌ಜ್ಞಾನ, ಸಮ್ಯಕ್‌ಚಾರಿತ್ರಗಳು ಮೋಕ್ಷಮಾರ್ಗವನ್ನು ತೋರುತ್ತವೆ. ತತ್ತ್ವಗಳಲ್ಲಿ ಶ್ರದ್ಧೆಯನ್ನಿಡುವುದೇ ಸಮ್ಯಗ್ದರ್ಶನ. ಇದರಲ್ಲಿ ಎರಡು ಭೇದಗಳು. ಒಂದು ಆತ್ಮಪ್ರೇರಿತ ಇನ್ನೊಂದು ಅನ್ಯಪ್ರೇರಿತ. ಜೀವ, ಅಜೀವ, ಆಸ್ರವ, ಬಂಧ, ಸಂವರ, ನಿರ್ಜರ, ಮೋಕ್ಷ ಎಂಬ ಏಳು ಪದಾರ್ಥಗಳಿವೆ. ಅವುಗಳನ್ನು ಸಪ್ತತತ್ತ್ವಗಳು ಎಂದು ಕರೆಯಲಾಗುತ್ತದೆ. ನಾಮ, ಸ್ಥಾಪನಾ, ದ್ರವ್ಯ, ಭಾವ ಈ ನಾಲ್ಕು ಯೋಗಗಳಿಂದ ಸಮ್ಯಗ್ದರ್ಶನದ ಹಿನ್ನೆಲೆಯಲ್ಲಿ ಸಿದ್ಧವಾಗುವುದು. ಪ್ರತ್ಯಕ್ಷ ಹಾಗೂ ಪರೋಕ್ಷ ಪ್ರಮಾಣಗಳಿಂದಲೂ ಶಾಸ್ತ್ರಗಳ ಆಧಾರಗಳಿಂದಲೂ ತತ್ತ್ವಗಳ ಜ್ಞಾನವುಂಟಾಗುವುದು. ಈ ಜ್ಞಾನ ಸಾಧನೆಗೆ ನಿರ್ದೇಶ, ಸ್ವಾಮಿತ್ವ, ಸಾಧನ, ಅಧಿಕರಣ, ಸ್ಥಿತಿ ಹಾಗೂ ವಿಧಾನಗಳೆಂದು ಆರು ಅಂಗಗಳಿವೆ. ಇವುಗಳಲ್ಲಿ ಸಂಖ್ಯಾ, ಕ್ಷೇತ್ರ, ಸ್ಪರ್ಶ, ಅಂತರ, ಭಾವಗಳೆಂದು ಉಪಾಂಗಗಳು. ಇವುಗಳ ಫಲವಾಗಿ ಮತಿ, ಶ್ರುತ, ಅವಧಿ, ಮನಃಪರ್ಯಯ ಹಾಗೂ ಕೇವಲಜ್ಞಾನಗಳೆಂದು ಐದು ರೀತಿಯ ಜ್ಞಾನವುಂಟಾಗುವುದು. ಅವಗ್ರಾಹ, ಈಹಾ, ಅವಾಯ, ಧಾರಣ ಎಂದು ನಾಲ್ಕು ಪ್ರಕಾರಗಳಲ್ಲಿ ಮತಿಜ್ಞಾನವುಂಟಾಗುವುದು. ಮತಿಜ್ಞಾನದ ನಂತರ ಶ್ರುತಜ್ಞಾನವುಂಟಾಗುವುದು. ಇದರಲ್ಲಿ ಅಂಗಬಾಹ್ಯ ಹಾಗೂ ಅಂಗಪ್ರವಿಷ್ಟ ಎಂದು ಭೇದಗಳಿವೆ. ದೇವ, ಮಾನವ, ನಾರಕವಾಸಿಗಳು ಹಾಗೂ ತಿರ್ಯಂಚಗಳೆಂಬ ಚತುರ್ಗತಿ ಜೀವಿಗಳಿಗೂ ಅವಧಿಜ್ಞಾನ ಉಂಟಾಗಬಹುದು. ಮನಃಪರ್ಯಯ ಜ್ಞಾನವು ಋಜುಮತಿ ಹಾಗೂ ವಿಪುಲಮತಿ ಎಂದು ಎರಡು ಬಗೆಯಲ್ಲಿ ಉಂಟಾಗುವುದು. ಋಜುಮತಿ ಜ್ಞಾನವು ನಷ್ಟವಾಗಬಹುದು. ಆದರೆ ವಿಪುಲಮತಿ ಜ್ಞಾನವು ನಷ್ಟವಾಗದು. ಅದು ಶುದ್ಧವೂ, ಶ್ರೇಷ್ಠವೂ ಆಗಿದೆ. ಸರ್ವಾರ್ಥ ಜ್ಞಾನವನ್ನು ಅರಿಯುವುದೇ ಅವಧಿ ಜ್ಞಾನವಾಗಿದೆ.

ಇನ್ನೂ ಜೀವಗಳ ಕುರಿತಾಗಿ, ಉಪಭೋಗವೇ ಜೀವಗಳ ಲಕ್ಷಣವಾಗಿದೆ. ಜೀವಗಳಲ್ಲಿ 'ಸಂಸಾರಿ' ಮತ್ತು 'ಮುಕ್ತ'ರು ಎಂದು ಎರಡು ಭೇದಗಳು. ಸಂಸಾರಿಗಳಲ್ಲಿ ತ್ರಸ ಹಾಗೂ ಸ್ಥಾವರಗಳೆಂದು ಎರಡು ಪ್ರಕಾರಗಳು. ಸ್ಥಾವರ ಜೀವಿಗಳಲ್ಲಿ ಪೃಥ್ವಿ, ಅಪ್, ತೇಜ, ವಾಯು ಹಾಗೂ ವನಸ್ಪತಿಯೆಂದು ಐದು ಭೇದಗಳು. ಅಂತೆಯೇ ತ್ರಸಜೀವಿಗಳಲ್ಲಿ ದ್ವೀಂದ್ರಿಯ, ತ್ರೀಂದ್ರಿಯ, ಚಂತುರಿಂದ್ರಿಯ ಹಾಗೂ ಪಂಚೇಂದ್ರಿಯಗಳೆಂದು ನಾಲ್ಕು ಭೇದಗಳಿವೆ. ಜೀವಿಗಳಲ್ಲಿ ಮಾನಸಿಕ ದೃಷ್ಟಿಯಿಂದ ದ್ರವ್ಯೇಂದ್ರಿಯ ಮತ್ತು ಭಾವೇಂದ್ರಿಯಗಳೆಂದು ಎರಡು ವಿಧಗಳು.

**"ಆ ಇಂದ್ರಿಯಗಳಾವ ಸ್ವರೂಪಮಪ್ಪ ಪೆಸರನುಳ್ಳುವೆಂದೊಡೆ ಪೇಳ್ವುದೀ ಸೂತ್ರಂ :**
**ಸ್ಪರ್ಶ ರಸ ಗಂಧ ವರ್ಣ ಚಕ್ಷುಃ ಶ್ರೋತ್ರಾಣಿ ॥ ೨.೧೯ ॥"**

ಜೀವಿಗಳು ಸ್ಥೂಲದೇಹ ಬಿಟ್ಟಾಗ ಸೂಕ್ಷ್ಮದೇಹವೊಂದಿರುತ್ತದೆ. ಅದು ಜೀವ ಅಥವಾ ಆತ್ಮನೆನಿಸಿಕೊಳ್ಳುತ್ತದೆ. ಅದರಿಂದ ಪುನರ್ಜನ್ಮವಾಗುವವರೆಗಿನ ಅವಧಿಯಲ್ಲಿಯೂ ಆಸ್ರವವುಂಟಾಗುತ್ತದೆ. ಜೀವವು ಆಕಾಶಗಾಮಿಯಾಗಿರುತ್ತದೆ. ಮುಕ್ತಜೀವಗಳ ಗತಿಯು ಸರಳವಾಗಿರುತ್ತದೆ. ಪುನರ್ಜನ್ಮವು ಸಮ್ಮೂರ್ಛನ, ಗರ್ಭ, ಉಪಪಾದವೆಂದು ಮೂರು ರೂಪಗಳಲ್ಲಿ ಉಂಟಾಗುತ್ತದೆ. ಇದರಲ್ಲಿ ಜರಾಯುಜ, ಅಂಡಜ ಹಾಗೂ ಪೋತಜ ಎಂದು ತ್ರಿವಿಧ ಜನ್ಮವನ್ನು ಪಡೆಯುವ ಸಾಧ್ಯತೆಗಳಿರುತ್ತದೆ. ಇಂತಹ ಜೀವಿಗಳಿಗೆ ತೈಜಸ, ಕರ್ಮಣ ದೇಹಸಂಬಂಧವು ಅನಾದಿಯಾದುದು. ಇವು ಎಲ್ಲ ಸಂಸಾರಿಜೀವಿಗಳಿಗಿರುತ್ತವೆ.

ನಾರಕ:

ಅಧೋಲೋಕದಲ್ಲಿ ಶರ್ಕರಪ್ರಭ, ಪಂಕಪ್ರಭ, ರತ್ನಪ್ರಭ ಮುಂತಾಗಿ ಸಪ್ತಲೋಕಗಳಿವೆ. ಅವುಗಳು ಘನೋದದಿ, ಘನವಾತ, ತನುವಾತಗಳೆಂಬ ಮೂರು ರೀತಿಯ ವಾಯುವಿನ ಆಧಾರದ ಮೇಲೆ ನಿಂತಿವೆ. ಈ ಏಳೂ ನರಕಗಳಲ್ಲಿ ೮೪ ಲಕ್ಷ ಬಿಲಗಳಿವೆ. ಮೊದಲ ನರಕದಲ್ಲಿ ಅತೀಹೆಚ್ಚು ಬಿಲಗಳಿದ್ದು, ಕೆಳಗೆ ಹೋದಂತೆ ಕಡಿಮೆಯಾಗುತ್ತ ಹೋಗುತ್ತವೆ. ಇವನ್ನೇ ಆಧುನಿಕ ವಿಜ್ಞಾನಿಗಳು ಕಪ್ಪುಕುಗಳೆಂದು ಗುರುತಿಸುತ್ತಾರೆ. ಅಲ್ಲಿರುವ ಜೀವಿಗಳು ಒಂದಕ್ಕೊಂದು ತೊಂದರೆ ಕೊಡುತ್ತಲೇ ಜೀವಿಸುತ್ತವೆ.

ಮಾನವ:

ಜೀವಿಗಳ ಲೋಕದಲ್ಲಿ ಜಂಬೂದ್ವೀಪ ಮೊದಲಾಗಿ ಅನೇಕ ದ್ವೀಪಗಳಿದ್ದು ಅವುಗಳು ಲವಣಸಮುದ್ರಗಳಿಂದ ಆವೃತವಾಗಿವೆ. ಇಲ್ಲಿ ಹಲವಾರು ತ್ರಸ ಜೀವಿಗಳು ಜೀವಿಸುತ್ತವೆ. ಅಂತೆಯೇ ಮಾನವ ಕೂಡ. ಮಾನವರಲ್ಲಿ ಮ್ಲೇಚ್ಛರು ಮತ್ತು ಆರ್ಯರೆಂದು ಎರಡು ಭೇದಗಳಿವೆ. ಜಂಬೂದ್ವೀಪವು ಲಕ್ಷ ಯೋಜನ ವಿಸ್ತಾರ ಹೊಂದಿದ್ದು ಇದರಲ್ಲಿ ಭರತ, ಹೈಮವತ, ಹರಿವರ್ಷ, ವಿದೇಹ, ರಮ್ಯಕ, ಹೈರಣ್ಯವತ ಹಾಗೂ ಐರಾವತಗಳೆಂದು ಸಪ್ತಕ್ಷೇತ್ರಗಳಿವೆ. ಇವುಗಳನ್ನು ಆರು ಕುಲಪರ್ವತಗಳು ವಿಭಾಗಿಸುತ್ತವೆ. ಈ ಕುಲಪರ್ವತಗಳ ಮೇಲೆ ಪ್ರತಿಯೊಂದರಲ್ಲೂ ಒಂದೊಂದು ಕಮಲಗಳಿವೆ. ಅವುಗಳಲ್ಲಿ ಶ್ರೀ, ಹ್ರೀ, ಧೃತಿ, ಕೀರ್ತಿ, ಬುದ್ಧಿ, ಲಕ್ಷ್ಮೀಯರು ನೆಲೆಸಿರುತ್ತಾರೆ. ಈ ಪರ್ವತಳಿಂದ ಹದಿನಾಲ್ಕು ಮಹಾನದಿಗಳು ಹರಿಯುತ್ತವೆ. ಇವುಗಳಿಗೆ ಲೆಕ್ಕವಿರದಷ್ಟು ಉಪನದಿಗಳಿವೆ. ಇವುಗಳು ಪೂರ್ವ ಹಾಗೂ ಪಶ್ಚಿಮದ ಸಮುದ್ರಗಳನ್ನು ಸೇರಿಕೊಳ್ಳುತ್ತವೆ. ಭರತ ಮತ್ತು ಐರಾವತ ಕ್ಷೇತ್ರಗಳಲ್ಲಿ ಉತ್ಸರ್ಪಿಣಿ ಮತ್ತು ಅವಸರ್ಪಿಣಿ ಕಾಲಗಳು ಘಟಿಸುತ್ತವೆ. ಇನ್ನುಳಿದ ಕ್ಷೇತ್ರಗಳಲ್ಲಿ ಸ್ಥಿರವಾಗಿರುತ್ತದೆ. ಆದರೆ ಆಯುವಿನ ಕ್ರಮದಲ್ಲಿ ಏರುಪೇರುಗಳಾಗುತ್ತವೆ.

ದೇವತೆಗಳು:

ಮಧ್ಯಲೋಕದ ಮೇಲೆ ಏಳು ಲೋಕಗಳಿವೆ. ಅದನ್ನೇ ಊರ್ಧ್ವಲೋಕವೆನ್ನುವರು. ಇಲ್ಲಿ ದೇವತೆಗಳು ನೆಲೆಸಿರುತ್ತಾರೆ. ದೇವತೆಗಳಲ್ಲಿ ಭವನವಾಸಿ, ವ್ಯಂತರ, ಜ್ಯೋತಿಷ್ಕ ಮತ್ತು ವೈಮಾನಿಕರೆಂದು ನಾಲ್ಕು ಭೇದಗಳು. ಇವರಲ್ಲಿ ಜ್ಯೋತಿಷ್ಕ ದೇವತೆಗಳನ್ನು ಹೊರತುಪಡಿಸಿ ಇನ್ನುಳಿದ ಮೂರು ಭೇದಗಳಲ್ಲಿ ಮತ್ತೇ ಹತ್ತು ಉಪಭೇದಗಳಿವೆ. ಜ್ಯೋತಿಷ್ಕರಲ್ಲಿ ಮಾತ್ರ ಎಂಟು ಭೇದಗಳಿವೆ. ಜ್ಯೋತಿಷ್ಕ ದೇವತೆಗಳು ನಿರಂತರವಾಗಿ ಮೇರುಪರ್ವತವನ್ನು ಸುತ್ತುತ್ತಿರುವರು. ಚಂದ್ರ, ತಾರೆ, ಸೂರ್ಯರು ಇವರ ಗಣದಲ್ಲಿ ಬರುತ್ತಾರೆ. ಇವರು ಮಾನವ ಲೋಕಕ್ಕೆ ನಿಕಟವಾಗಿರುತ್ತಾರೆ. ಇನ್ನುಳಿದ ದೇವತೆಗಳು ಸ್ಥಿರವಾಗಿರುತ್ತಾರೆ.

ತಿರ್ಯಂಚ:

ದೇವ, ಮಾನವ, ನಾರಕ ಜೀವಿಗಳನ್ನು ಹೊರತುಪಡಿಸಿ ಇನ್ನುಳಿದ ಜೀವಿಗಳೆಲ್ಲವೂ ತಿರ್ಯಂಚಗಳೆನಿಸಿಕೊಳ್ಳುತ್ತವೆ.

ಧರ್ಮ, ಅಧರ್ಮ, ಆಕಾಶ ಪುದ್ಗಲಗಳು ದ್ರವ್ಯವೆನಿಸಿವೆ. ಇವುಗಳಲ್ಲಿ ಪುದ್ಗಲವು ಮೂರ್ತರೂಪದಲ್ಲಿದ್ದರೆ, ಉಳಿದವುಗಳೆಲ್ಲವೂ ಅಮೂರ್ತವಾದವುಗಳು. ಆದರೂ ಸಹ ಇವುಗಳ ಇರುವಿಕೆಗೆ ಯಾವ ಧಕ್ಕೆಯೂ ಇಲ್ಲ. ಆಕಾಶವು ಸುವಿಶಾಲವಾದುದು. ಇದರಲ್ಲಿ ಲೋಕಾಕಾಶ, ಅಲೋಕಾಕಾಶಗಳೆರಡು. ಧರ್ಮ, ಅಧರ್ಮಗಳೆರಡು ಲೋಕಾಕಾಶದಲ್ಲಿರುತ್ತವೆ. ಧರ್ಮವು ಜೀವ ಪುದ್ಗಲಗಳಿಗೆ ಅನುಕೂಲಕಾರಿ. ಎಲ್ಲ ದ್ರವ್ಯಗಳಿಗೂ ಆಶ್ರಯ ಕೊಡುವುದು ಆಕಾಶ. ಜೀವಕ್ಕೆ ಶರೀರ, ಮನ, ವಚನ, ಶ್ವಾಸ ಕೊಡುವುದು ಪುದ್ಗಲ ದ್ರವ್ಯ. ಹೀಗಾಗಿ ಜೀವ ಹಾಗೂ ಅಜೀವ ದ್ರವ್ಯಗಳು ಪರಸ್ಪರ ಅವಲಂಬಿತವಾಗಿವೆ. ಪುದ್ಗಲಗಳಿಗೆ ಸ್ಪರ್ಶ, ರಸ, ಗಂಧ, ವರ್ಣ ಗುಣಗಳಿರುತ್ತವೆ. ಇವುಗಳನ್ನು ಅಣು, ಸ್ಕಂದಗಳೆಂದು ವಿಭಾಗಿಸಲಾಗುತ್ತದೆ. ಸ್ಕಂದವು ಕಣ್ಣಿಗೆ ಕಾಣಿಸಿದರೆ, ಅಣುವು ಕಾಣಿಸುವುದಿಲ್ಲ. ಸತ್ ಎಂಬುದು ದ್ರವ್ಯದ ಲಕ್ಷಣ. ಕಣ್ಣಿಗೆ ಕಾಣದ ಅಣುಗಳು ಸೇರಿ ಸ್ಕಂದಗಳಾಗಿವೆ. ಇವು ರೂಕ್ಷ ಮತ್ತು ಸ್ನಿಗ್ಧ ಎಂದು ರೂಪಗಳಲ್ಲಿ ಉಂಟಾಗುತ್ತವೆ. ಇದನ್ನೇ ಬಂಧವೆನ್ನಲಾಗುತ್ತದೆ. ಬಹುಗುಣದ ಪುದ್ಗಲವು ಅಲ್ಪಗುಣದ ಪುದ್ಗಲವನ್ನು ಸೇರಿಸಿಕೊಂಡರೆ ಬಹುಗುಣದ ಬಂಧವೇರ್ಪಡುತ್ತದೆ. ಇದು ವಿಜ್ಞಾನದ ಮೂಲವಸ್ತು ಮತ್ತು ಸಂಯುಕ್ತ ವಸ್ತುಗಳ ರೂಪವನ್ನೇ ಪ್ರತಿನಿಧಿಸುತ್ತದೆ. ಎರಡು ಭಿನ್ನವಾದ ಮೂಲವಸ್ತುಗಳು ಸೇರುವುದರಿಂದ ಇನ್ನೊಂದು ಸಂಯುಕ್ತವಸ್ತು ಉತ್ಪತ್ತಿಯಾಗುವುದೇ ಸ್ಕಂದರೂಪವಾಗಿದೆ.

ಆತ್ಮನು ತಂತಮ್ಮ ಜೀವಗಳನ್ನು ದಾಟುತ್ತ ಕ್ರಮೇಣವಾಗಿ ಅರವತ್ತಾರು ಸಾಗರೋಪಮ ಆಯುಷ್ಯವನ್ನು ಕಳೆಯುತ್ತಾನೆ. ಇಂತಹ ಆತ್ಮಕ್ಕೆ ಸಮ್ಯಕ್‌ದರ್ಶನವು ಸಾಮಾನ್ಯರೀತಿ ಹಾಗೂ ನಿಸರ್ಗದತ್ತವಾಗಿ ಎರಡು ರೀತಿಯಲ್ಲಿ ಉಂಟಾಗುತ್ತದೆ. ಇದರಲ್ಲಿ ಔಪಶಮಿಕ, ಕ್ಷಾಯಿಕ, ಕ್ಷಾಯೋಪಶಮಿಕ ಎಂದು ಭೇದಗಳು. ಮತ್ತೇ ಅವುಗಳಲ್ಲಿ ಆಜ್ಞಾ, ಮಾರ್ಗ, ಉಪದೇಶ, ಸೂತ್ರ, ಬೀಜ, ಸಂಕ್ಷೇಪ, ವಿಸ್ತಾರ, ಅರ್ಥ, ಅವಗಾಢ ಹಾಗೂ ಪರಮಾವಗಾಢ ಎಂದು ಹತ್ತು ಭೇದಗಳುಂಟು. ಶ್ರದ್ಧೆಯನ್ನವಲಂಬಿಸಿ ಇವುಗಳ ಸಂಖ್ಯಾವಿಕಲ್ಪವಾಗುತ್ತದೆ. ಹೀಗೆ ನಿರ್ದೇಶಾನುಗತವಾಗಿ ಸಮ್ಯಕ್‌ಜ್ಞಾನ, ಸಮ್ಯಕ್‌ಚಾರಿತ್ರಗಳು ಜೀವಾದಿ ತತ್ತ್ವಗಳಲ್ಲಿ ಆಗಮಾನುಸಾರವಾಗಿ ನೆಲೆಯಾಗುವವು.

ಜೀವನು ಗುಣಸ್ಥಾನ, ಮಾರ್ಗಸ್ಥಾನ, ಸ್ವಸ್ಥಾನ ಸಮುದ್ಘಾತಗಳನ್ನವಲಂಬಿಸಿ ಪ್ರಮಾಣಬದ್ಧ ಅಸ್ತಿತ್ವವನ್ನು ಪಡೆಯುತ್ತಾನೆ. ವೇದನೆ ಮುಂತಾದ ನಿಮಿತ್ತಗಳಿಂದಾಗಿ ಜೀವವು ತನ್ನ ಮೂಲ ಶರೀರವನ್ನು ಬಿಡದೇ ಕೇವಲ ಅದರ ಕೆಲವು ಆತ್ಮ ಪ್ರದೇಶಗಳು ಮಾತ್ರ ಹೊರಗೆ ಹೊರಡುತ್ತವೆ. ಅದನ್ನೇ ಸಮುದ್ಘಾತ ಎನ್ನುವರು. ಸ್ವಸ್ಥಾನಾದಿ ಪರಪರಿಣತಗಳಾದ ಜೀವಗಳು ಅತೀತ, ವರ್ತಮಾನ, ಅನಾಗತಗಳನ್ನು ಮುಟ್ಟಿದೆಡೆಯಲ್ಲಿ

ಪರ್ಯಾಯವಸ್ಥಾಕಾಲದಿಂದ ಔಪಶಮಿಕಾದಿ ಭಾವಗಳು ಉಂಟಾಗುವುದನ್ನು ಅದನ್ನು ಅಧಿಗಮ ಸಮ್ಯಕ್ತ್ವ ಎನ್ನಲಾಗುತ್ತದೆ. "ಇಂತು ಸಮ್ಯಕ್‌ದರ್ಶನಮಂ ಪೇಳ್ದು" ಹೀಗೆ ನಾನಾ ಬಗೆಯಲ್ಲಿ ಸಮ್ಯಕ್ ದರ್ಶನಗಳು ಉಂಟಾಗುತ್ತವೆ ಎಂದು ಗ್ರಂಥಕಾರರು ತಿಳಿಸುತ್ತಾರೆ.

ಧರ್ಮ, ಅಧರ್ಮ, ಆಕಾಶ, ಪುದ್ಗಲ ಹಾಗೂ ಕಾಲಗಳಿಂದ ಉಂಟಾಗುವ ಕರ್ಮವು ಜೀವವನ್ನು ಸುತ್ತಿಕೊಳ್ಳುತ್ತದೆ; ಆತ್ಮಪ್ರದೇಶವನ್ನು ಸೇರಿಕೊಳ್ಳುತ್ತದೆ. ಅದುವೇ ಆಸ್ರವ. ಈ ಒಳಬರುವ ಕರ್ಮಗಳನ್ನು ಜ್ಞಾನ ದರ್ಶನಗಳ ಮೂಲಕ ಒಳಬರದಂತೆ ತಡೆಯುವುದು ಸಂವರ. ಒಳಬಂದಿರುವ ಕರ್ಮಗಳನ್ನು ತಪನಿಷ್ಠೆಗಳಿಂದ ಕಳೆದುಕೊಳ್ಳುವುದು ನಿರ್ಜರ. ಕರ್ಮಬಂಧಗಳನ್ನೆಲ್ಲ ಕಳೆದುಕೊಂಡಮೇಲೆ ಸಲ್ಲೇಖನ ವ್ರತದ ಮೂಲಕ ದೇಹತ್ಯಾಗ ಮಾಡುವುದೇ ಮೋಕ್ಷವಾಗಿದೆ. ಈ ಮೋಕ್ಷ ಸಾಧನೆಯಿಂದ ಆತ್ಮದ ಆವರ್ತನವು ಮುಗಿಯುತ್ತದೆ. ಪುನರ್ಜನ್ಮವು ನಿಲ್ಲುತ್ತದೆ. ಹೀಗೆ ತತ್ತ್ವಾರ್ಥಸೂತ್ರವು ಸಪ್ತ ತತ್ತ್ವಗಳನ್ನು ಪ್ರತಿಪಾದಿಸುತ್ತದೆ.

**ಕೊನೆಟಿಪ್ಪಣಿಗಳು:**

೧. ತತ್ತ್ವಾಥಸೂತ್ರಾನುಗತ ಕರ್ಣಾಟ ಲಘುವೃತ್ತಿ : ಡಾ. ಹಂಪ ನಾಗರಾಜಯ್ಯ : ಪು. ೭
೨. ಅದೇ ; ಪುಟ. ೯
೩. ಅದೇ : ಪು. ೧ (ಪ್ರಥಮೋಧ್ಯಾಯಃ)
೪. ತತ್ತ್ವಾಥಸೂತ್ರಾನುಗತ ಕರ್ಣಾಟ ಲಘುವೃತ್ತಿ : ಡಾ. ಹಂಪ ನಾಗರಾಜಯ್ಯ : ಪು. ೨೨
೫. ದಶಭಕ್ತಿ ; ಮಿರ್ಜಿ ಅಣ್ಣಾರಾಯರು ; ಪುಟ. ೮೪



## ಶ್ರೀ ಸೋಂದಾ ಮಹಾಸಂಸ್ಥಾನ

✍ ಗಣೇಶ ಹೆಗಡೆ

ವೈಷ್ಣವ, ಸ್ಮಾರ್ಥ, ಜೈನ, ವೀರಶೈವ ಧಾರ್ಮಿಕ ಕ್ಷೇತ್ರವಾಗಿ ಮೆರೆದ, ಐತಿಹಾಸಿಕ ಹಿನ್ನೆಲೆ ಹೊಂದಿರುವ, ಭಕ್ತಿಯ ತ್ರಿವೇಣಿ ಸಂಗಮದಿಂದ ಪುಣ್ಯಕ್ಷೇತ್ರವಾಗಿ ಮಾರ್ಪಾಡಾಗಿರುವ, ಪ್ರಕೃತಿ ಮಡಿಲಲ್ಲಿ ಶಾಲ್ಮಲಾ ನದಿಯ ದಂಡೆಯ ಮೇಲೆ ಇರುವ ಶ್ರೀ ಕ್ಷೇತ್ರವೇ ಸೋಂದಾ. ಇಲ್ಲಿಗೆ ಬರುವ ಭಕ್ತಾದಿಗಳಿಗೆ ಮತ್ತು ಪರಿಸರ ಪ್ರೇಮಿಗಳಿಗೆ, ಪುಣ್ಯಕ್ಷೇತ್ರವನ್ನು ನೋಡಿ ಪಾವನರಾಗಲು ಮತ್ತು ಪ್ರಕೃತಿದತ್ತ ಸೌಂದರ್ಯವನ್ನು ಆಸ್ವಾದಿಸಿ ಪುಳಕಿತರಾಗಲು ಸೋಂದಾ ಒಂದು ವಿಶೇಷ ಸ್ಥಳ. ಶ್ರೀ ವಾದಿರಾಜರು ತಪಗೈದಿರುವ ಪುಣ್ಯಸ್ಥಳ. ಶಿರಸಿ ಬಳಿಯಿರುವ ಸೋಂದಾ ಅಥವಾ ಸೋದೆ ವಾದಿರಾಜ ಭಕ್ತರಿಗೆ ಮಾತ್ರವಲ್ಲ ಪರಿಸರ ಪ್ರೇಮಿಗಳಿಗೆ ಮಲೆನಾಡಿನ ಮಡಿಲಲ್ಲಿರುವ ಅದ್ಭುತ ಸುಂದರ ತಾಣ. ನಗರದಿಂದ ದೂರ ಪ್ರಕೃತಿಯ ಮಡಿಲಿಗೆ ಹತ್ತಿರವಾಗಿರುವ ಈ ತಪೋಭೂಮಿಗೆ ಕರ್ನಾಟಕ ಮಾತ್ರವಲ್ಲದೇ ದೇಶದ ವಿವಿಧ ಮೂಲೆಗಳಿಂದಲೂ ಪ್ರವಾಸಿಗರು, ಭಕ್ತರು ಬರುತ್ತಾರೆ. ಸೋಂದಾ ಇದು ಉತ್ತರಕನ್ನಡ ಜಿಲ್ಲೆಯ ಶಿರಸಿ ತಾಲೂಕಿನಲ್ಲಿರುವ ಪ್ರದೇಶವಾಗಿದೆ. ಶಿರಸಿಯಿಂದ ಇಪ್ಪತ್ತೈದು ಕಿ.ಮೀ ದೂರದಲ್ಲಿರುವ ಸೋದೆಗೆ, ಸೋಂದಾ ಅಥವಾ ಸ್ವಾದಿ ಎಂದು ಕರೆಯುತ್ತಾರೆ.

**ಇತಿಹಾಸ:**

ಶಾರ್ವರಿ ಫಾಲ್ಗುಣ ಕೃಷ್ಣಪಕ್ಷ ತೃತೀಯ ಶಾಲಿವಾಹನ ಶಕ ೧೫೫೨ನೇ ಬುಧವಾರ ಸ್ವಾತಿ ನಕ್ಷತ್ರದಲ್ಲಿ ಶ್ರೀ ವಾದಿರಾಜರು ಮೊದಲೇ ನಿರ್ಮಾಣಗೊಂಡು ಪೂಜಿತರಾದ ಪಂಚ ವೃಂದಾವನಗಳಲ್ಲಿ ಶ್ರೀ ಹಯಗ್ರೀವ ದೇವರನ್ನು ಹಾಗೂ ಶ್ರೀ ವೇದವ್ಯಾಸ ದೇವರನ್ನು ಆರಾಧಿಸುತ್ತಾ, ಮಧ್ಯ ವೃಂದಾವನದಲ್ಲಿ ಪ್ರವೇಶಮಾಡಿ ಕುಳಿತರು. ತಮ್ಮ ಕೈಯಲ್ಲಿರುವ ಜಪಮಣಿ ಸರಿದಾಡುವುದು ನಿಂತಕೂಡಲೇ ಮುಂಭಾಗದ ಶಿಲೆಯನ್ನು ಮುಚ್ಚಲು ಅಪ್ಪಣೆ ಇತ್ತು ವೃಂದಾವನದೊಳಗೆ ಕುಳಿತು ಧ್ಯಾನ ಮಗ್ನರಾದರು. ಮರುದಿನ ಶಾಲಿವಾಹನ ಶಕೆ ೧೫೨೨ನೇ ಶಾರ್ವರಿ ಪಾಲ್ಗುಣ ಕೃಷ್ಣ ಪಕ್ಷ ತೃತೀಯ ಮಂಗಳವಾರ ಸ್ವಾತಿ ನಕ್ಷತ್ರದಲ್ಲಿ ಶ್ರೀ ಮದ್ವಾದಿ ತೀರ್ಥ ಪರಮಹಂಸಕುಲತಿಲಕರ ಹಸ್ತದಿಂದ ಜಪಸರವು ಕೆಳಗೆ ಬಿದ್ದಿತು. ಕೂಡಲೇ ವೃಂದಾವನವನ್ನು ಮುಚ್ಚಲಾಯಿತು. ಆಗ ಮಿಂಚುವ ಪುಷ್ಪಕ ವಿಮಾನದಲ್ಲಿ ಶ್ರೀಗಳು ಕುಳಿತಕೂಡಲೆ ಅದು ಮೇಲಕ್ಕೆ ಹೊರಡಲ್ಪಟ್ಟಿತು. ಭಕ್ತವೃಂದದವರ ಆರ್ತಧ್ವನಿಯನ್ನು ಆಲಿಸಿದ ಶ್ರೀಗಳು ಕರುಣೆಯಿಂದ ಪಾದುಕೆ ಮತ್ತು ತಾವು ಹೊದ್ದಿದ್ದ ಶಾಟಿಯನ್ನು ಭಕ್ತರ ಕಡೆಗೆ ಹಾಕಿ, ನಾನು ಇಲ್ಲಿಯೇ ವೃಂದಾವನದಲ್ಲಿ ಸನ್ನಿಹಿತನಾಗಿ ಶ್ರೀ ಭೂತರಾಯರ ಸೇವೆ ಕೈಗೊಂಡು, ಭಕ್ತರ ಇಷ್ಟಾರ್ಥಗಳನ್ನು ನೆರವೇರಿಸುತ್ತೇನೆ ಎಂದು ಹೇಳಿ ಪುಷ್ಪಕ ವಿಮಾನದ ಜೊತೆ ಅದೃಶ್ಯರಾದರು ಎನ್ನುವುದು ಇತಿಹಾಸ.

ಕ್ಷೇತ್ರ ಕಾರಣಿಕ ಎಂದರೆ ಕ್ಷೇತ್ರವನ್ನು ಮುನ್ನಡೆಸುತ್ತಿರುವವರು ಎಂದು ನಂಬಲಾದ ದೈವಶಕ್ತಿ ಈ ಶ್ರೀ ಭೂತರಾಜರು. ಇಲ್ಲಿ ಹೋಳಿ ಹುಣ್ಣಿಮೆಯ ಸಂದರ್ಭದಲ್ಲಿ ಆರಾಧನಾ

ಮಹೋತ್ಸವ ಜರುಗುತ್ತದೆ. ಮಠದಲ್ಲಿ ಊಟದ ವ್ಯವಸ್ಥೆ ಇಲ್ಲದಿದ್ದಲ್ಲಿ ಭಟ್ಟರ ಮನೆಯಲ್ಲಿ ಸಮೃದ್ಧ ಭೋಜನ ಸಿಗುತ್ತದೆ. ಉಡುಪಿಯ ಅಷ್ಟ ಮಠಗಳಲ್ಲಿ ಇದೂ ಒಂದು.

**ಸೋಂದಾದ ಪಕ್ಷಿ ನೋಟ:**

**ಶ್ರೀ ವಾದಿರಾಜ ಮಠ–**

ಕ್ರಿ.ಶ ೧೫೫೫ ರಿಂದ ೧೫೯೮ರಲ್ಲಿ ವಿಜಯನಗರದ ಸಾಮಂತರಾಜನಾದ ಅರಸಪ್ಪ ನಾಯಕನ ಆಳ್ವಿಕೆಗೆ ಸೋಂದಾ ಸೇರಿತ್ತು. ಶಿರಸಿ ಗ್ರಾಮದ ಸುತ್ತಮುತ್ತಲಿನ ಪ್ರದೇಶವನ್ನು ಅರಸನಾದ ಅರಸಪ್ಪ ನಾಯಕನು ಆಳುತ್ತಿದ್ದನು. ಅರಸಪ್ಪ ನಾಯಕನು ಶ್ರೀ ವಾದಿರಾಜರ ಬಳಿ ತನ್ನ ಹಾಗೂ ರಾಜ್ಯದ ಉನ್ನತಿಗಾಗಿ ವೈಷ್ಣವ ದೀಕ್ಷೆ ಪಡೆದು ವಾದಿರಾಜರ ಆದೇಶದ ಮೇರೆಗೆ ಪುಣ್ಯಕ್ಷೇತ್ರದ ಗುಡಿಗಳನ್ನು ಕಟ್ಟಿಸಿದನೆಂದು ಇತಿಹಾಸ ಹೇಳುತ್ತದೆ. ಪ್ರಮುಖವಾಗಿ ಹಯಗ್ರೀವ ಸಮುದ್ರ, ಧವಳ ಗಂಗೆ, ಭೂತರಾಜ, ಮುಖ್ಯ ಪ್ರಾಣದೇವರು, ಗೋಶಾಲೆ ಭಕ್ತರು ನೋಡಲೇ ಬೇಕಾದಂಥ ಪುಣ್ಯಸ್ಥಳಗಳು.

**ಶ್ರೀ ಸ್ವರ್ಣವಲ್ಲೀ ಮಠ–**

ಶಿರಸಿ ನಗರದ ಉತ್ತರದ ೧೬ ಕಿ.ಮೀ ದೂರದಲ್ಲಿ ಶಾಲ್ಮಲಾ ನದಿ ದಂಡೆಯ ಮೇಲೆ ಸುಂದರವಾದ ಸ್ವರ್ಣವಲ್ಲೀ ಮಠವನ್ನು ಕಾಣಬಹುದು. ಈ ಮಠವನ್ನು ಹವ್ಯಕರು ಹೊನ್ನಳ್ಳಿ ಮಠವೆಂದು ಕರೆಯುತ್ತಾರೆ. ಶ್ರೀ ಶಂಕರಾಚಾರ್ಯರ ಆಶೀರ್ವಾದದೊಂದಿಗೆ ಅವರ ಶಿಷ್ಯರಾದ ಭಾಸ್ಕರೇಂದ್ರ ಸರಸ್ವತಿಯವರಿಂದ ಕಾಶಿಯಲ್ಲಿ ಸ್ಥಾಪಿಸಲ್ಪಟ್ಟಿತು. ಮಠವು ಕಾಲಾಂತರದಲ್ಲಿ ತನ್ನ ಪೀಠಸ್ಥಾನವನ್ನು ವಿಸ್ತಾರ ಮಾಡುತ್ತಾ ಕಾಳಿ, ಉಜ್ಜೈನಿ, ಗೋಕರ್ಣ, ಕಡತೋಕ ಮತ್ತು ಸಹಸ್ರಲಿಂಗ ಪ್ರದೇಶದಲ್ಲಿ ಸ್ಥಾಪಿಸಲ್ಪಟ್ಟಿತು. ೧೫ನೇ ಶತಮಾನದ ಪೂರ್ವವೇ ಸಹಸ್ರಲಿಂಗ ಪ್ರದೇಶದಲ್ಲಿ ಸ್ಥಾಪನೆಯಾಗಿದ್ದ ಮಠವನ್ನು ೧೫೫೬ರಲ್ಲಿ ಸೋದೆಯ ಇಮ್ಮಡಿ ಅರಸಪ್ಪ ನಾಯಕ ಗೋಸೂರು ಅರಣ್ಯವನ್ನು ಕಡಿಸಿ ಸ್ವರ್ಣವಲ್ಲೀ ಎಂಬ ನೂತನ ಮಠವನ್ನು ಕಟ್ಟಿಸಿ ಹೊನ್ನೇಹಳ್ಳಿ ಎಂಬ ಗ್ರಾಮದ ತೋಟವನ್ನು ದಾನ ಮಾಡಿದ ಬಗ್ಗೆ ದಾಖಲೆಗಳಿವೆ. ಇಲ್ಲಿ ಪ್ರತಿನಿತ್ಯ ಶ್ರೀ ಲಕ್ಷ್ಮೀನರಸಿಂಹ ದೇವರು, ಶ್ರೀ ರಾಜರಾಜೇಶ್ವರಿದೇವಿ, ಶ್ರೀ ಚಂದ್ರಮೌಳೇಶ್ವರ, ಗಣಪತಿ, ವ್ಯಾಸ ಮತ್ತು ಶಂಕರಾಚಾರ್ಯರನ್ನು ಪೂಜಿಸುತ್ತಾರೆ. ಇದು ಅದ್ವೈತ ಮತೀಯರ ಪವಿತ್ರ ಪೀಠ. ಶ್ರೀ ರಾಜರಾಜೇಶ್ವರಿ ಪಾಠಶಾಲೆ, ವೇದಶಿಕ್ಷಣ ಮತ್ತು ಊಟ–ವಸತಿಯನ್ನು ಉಚಿತವಾಗಿ ನೀಡುತ್ತಿದೆ. ಈ ಮಠವು ೧೬ ಸೀಮೆಯ ಶಿಷ್ಯ ಸಮುದಾಯವನ್ನು ಹೊಂದಿದೆ. ಪ್ರತಿವರ್ಷ ವಿಶೇಷ ದಿನಗಳಲ್ಲಿ ಪೂಜಾ ಕೈಂಕರ್ಯಗಳನ್ನು ಕೈಗೊಳ್ಳಲಾಗುತ್ತದೆ.

**ಶ್ರೀ ಸ್ವಾದಿ ಜೈನ ಮಠ:**

ಶಿರಸಿ ಪಟ್ಟಣದಿಂದ ಸುಮಾರು ೩೨ ಕಿ.ಮೀ. ದೂರದಲ್ಲಿರುವ ಸ್ವಾದಿ ಜೈನ ಮಠ ಸೋಂದಾದ ಅತಿ ಪುರಾತನವಾದ ಮಠ. ಜೈನ ಇತಿಹಾಸದ ಪ್ರಕಾರ ಕ್ರಿ.ಶ. ೨ನೇ ಶತಮಾನದಿಂಲೇ ಕುರುಹುಗಳು ದೊರೆಯುತ್ತವೆ. ೮ನೇ ಶತಮಾನದಲ್ಲಿ ಆಚಾರ್ಯ ಅಕಳಂಕರು ಜೈನ ಆಚಾರ್ಯ ಪೀಠ ಪರಂಪರೆ ಸ್ಥಾಪಿಸಿರುವುದು ಕಂಡುಬರುತ್ತದೆ. ಸ್ವಾದಿ ಮಠವು ಅಕಳಂಕ ಜೈನ ಮಠವೆಂದು ಪ್ರಸಿದ್ಧಿಯಾಗಿದೆ. ಇಲ್ಲಿ ಸಮೀಪದಲ್ಲಿಯೇ ೧೦೦೮ ಶ್ರೀ ಆದಿನಾಥ ದೇವಸ್ಥಾನ, ಕ್ಷೇತ್ರಪಾಲ ಬ್ರಹ್ಮಯಕ್ಷ ದೇವಸ್ಥಾನ, ಪಾರ್ಶ್ವನಾಥ ಬಸದಿ, ಮುತ್ತಿನಕೆರೆ, ವೆಂಕಟರಮಣ ದೇವಸ್ಥಾನಗಳನ್ನು ಕಾಣಬಹುದಾಗಿದೆ.



ಪ್ರತಿನಿತ್ಯ ವಿಶೇಷ ಪೂಜೆಯ ಜೊತೆಗೆ ವಿಶೇಷ ದಿನಗಳಲ್ಲಿ ಅನೇಕ ದೇವ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಲಾಗುತ್ತದೆ. ಬಂದ ಭಕ್ತರಿಗೆ ಭೋಜನದ ವ್ಯವಸ್ಥೆಗಳನ್ನು ಏರ್ಪಾಡು ಮಾಡಲಾಗುತ್ತದೆ. ಮಠದ ವತಿಯಿಂದ ಅನೇಕ ಸಾಮಾಜಿಕ ಸೇವಾ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಲಾಗುವುದು.

**ಮುತ್ತಿನಕೆರೆ:**

ಇಲ್ಲಿ ಆಯತಾಕಾರದ ಕಲ್ಲು ಮೆಟ್ಟಿಲುಗಳನ್ನು ಕೆರೆಯ ಸುತ್ತ ಕಾಣಬಹುದಾಗಿದೆ. ಕೆರೆಯ ಒಂದು ಮೂಲೆಯಲ್ಲಿ ಮಂಟಪವನ್ನು ಕಾಣಬಹುದಾಗಿದೆ. ಭೈರಾದೇವಿ ಎನ್ನುವ ರಾಣಿಯು ಅವಳ ಗಂಡನ ರೋಗ ನಿವಾರಣೆಯಾದರೆ ತನ್ನ ಮುತ್ತಿನ ಮೂಗುತಿಯ ಹರಾಜಿನಿಂದ ಬರುವ ಸಂಪತ್ತಿನಿಂದ ಕಲ್ಲಿನಕೆರೆಯನ್ನು ಕಟ್ಟಿಸಿಕೊಡುವುದಾಗಿ ಹರಕೆ ಹೊತ್ತಿದ್ದಳು. ಈ ಹರಕೆಯಂತೆ ಪತಿಯು ಅನಾರೋಗ್ಯದಿಂದ ಪಾರಾದಾಗ ಕೆರೆ ಕಟ್ಟಿಸಿದಳು ಎನ್ನುವ ಪ್ರತೀತಿ ಇದೆ. ನಂತರ ಇದು ಮುತ್ತಿನಕೆರೆ ಎಂದೇ ಪ್ರಸಿದ್ದಿಯಾಯಿತು.

**ತಪೋವನ:**

ಇದು ವಾದಿರಾಜರು ತಪಸ್ಸು ಮಾಡಿದ ಪುಣ್ಯಸ್ಥಳ. ವಾದಿರಾಜರ ಮಠದಿಂದ ಸುಮಾರು ೨ ಕಿ.ಮಿ ದೂರದಲ್ಲಿರುವ ಇದು ಶಾಲ್ಮಲಾ ನದಿ ದಂಡೆಯ ಮೇಲಿದೆ. ಇಲ್ಲಿ ವಾದಿರಾಜರ ಮತ್ತು ಅವರ ಪಾದಗಳ ದರ್ಶನವನ್ನು ಪಡೆಯಬಹುದಾಗಿದೆ. ಇಂದಿಗೂ ಸಹ ವಾದಿರಾಜ ಮಠಕ್ಕೆ ಮತ್ತು ಸೋಂದಾ ದರ್ಶನಕ್ಕೆ ಬರುವ ಭಕ್ತಾದಿಗಳು ಈ ಪುಣ್ಯಸ್ಥಳವನ್ನು ದರ್ಶನ ಮಾಡಿ ಬರುತ್ತಾರೆ. ಹಯಗ್ರೀವದೇವರು ತಪಸ್ಸು ಮಾಡಿದ ಗುಹೆ, ಹನುಮನ ವಿಗ್ರಹ, ಕಲ್ಲಿನ ಶಿಲಾ ಶಾಸನದ ಮೇಲೆ ಶುಭಮಸ್ತು ಶಾಲಿವಾಹನ ಶಕೆ ೧೫೫೧ ಶ್ರೀಮುಖ ಸಂವತ್ಸರದ ವೇದನಿಧಿ ಶ್ರೀ ಪಾದಂಗಳು ಎಂದು ಬರೆಯಲಾಗಿದೆ. ತಪೋವನವು ಪುಣ್ಯಸ್ಥಳವಷ್ಟೇ ಅಲ್ಲ, ಹಚ್ಚ ಹಸಿರಿನಿಂದ ಮತ್ತು ದೈವೀ ಶಕ್ತಿಯಿಂದ ಕೂಡಿದ ಕಾರಣ ಮನಸ್ಸಿಗೆ ಮುದ, ಶಾಂತಿ ಹಾಗೂ ಮನೋನಿಗ್ರಹಕ್ಕಾಗಿ ಬರುವ ಭಕ್ತರಿಗೆ ಸೂಕ್ತ ಸ್ಥಳ. ಶಾಲ್ಮಲಾ ನದಿಯಲ್ಲಿ ಪುಣ್ಯತೀರ್ಥ ಸ್ನಾನ ಮಾಡಿ ಪುನೀತರಾಗಲು ಮತ್ತು ಶ್ರೀ ವಾದಿರಾಜರ ಅನುಗ್ರಹ ಪಡೆಯಲು ತಪೋವನಕ್ಕೆ ಭೇಟಿ ನೀಡಲೇಬೇಕು.

**ಮಂಡಿಗೆಕೆರೆ ಪಕ್ಷಿಧಾಮ:**

ಸೋದೆಯ ಮಠದ ಸಮೀಪವೇ ಖಾಸಾಪಾಲು ಮತ್ತು ಬಾಡಲಕೊಪ್ಪ ಪ್ರದೇಶಗಳ ನಡುವೆ ಮಹಾಂತೇಶ ಮಠದ ಸಮೀಪ ಕೆರೆಯೊಂದನ್ನು ಕಾಣಬಹುದಾಗಿದೆ. ಮಂಡಿಗೆ ಮರಗಳಿಂದ ಆವೃತ್ತವಾದ ಕಾರಣ ಈ ಕೆರೆಯು ಮಂಡಿಗೆಕೆರೆ ಎಂದು ಪ್ರಸಿದ್ದಿ ಪಡೆಯಿತು. ಇಲ್ಲಿ ೬೦–೭೦ ಬಗೆಯ ವಿವಿಧ ಜಾತಿಯ ಪಕ್ಷಿಗಳು ವಾಸವಾಗಿರುವುದನ್ನು ಕಾಣಬಹುದಾಗಿದೆ. ಇದೊಂದು ಕಾಡಿನ ಮತ್ತು ಕೃಷಿ ಭೂಮಿಯ ನಡುವೆ ಇರುವ ಸುಂದರವಾದ ಸ್ಥಳ. ಇಲ್ಲಿ ಪಕ್ಷಿ ವೀಕ್ಷಣೆಗೆಂದೇ ಸರ್ಕಾರದ ವತಿಯಿಂದ ವೀಕ್ಷಣಾ ಸ್ಥಳವನ್ನು ನಿರ್ಮಿಸಲಾಗಿದೆ. ಸಾವಿರಾರು ಪಕ್ಷಿಸಂಕುಲಕ್ಕೆ ಆಶ್ರಯವಾಗಿರುವ ಈ ಪಕ್ಷಿಧಾಮ ಸೋಂದಾಕ್ಕೆ ನೈಸರ್ಗಿಕ ಸೌಂದರ್ಯದ ವೈಭವವನ್ನು ಹೆಚ್ಚಿಸಿದೆ. ಸೋಂದಾ ವೀಕ್ಷಣೆಗಾಗಿ ಬರುವ ನಿಸರ್ಗಪ್ರೇಮಿಗಳಿಗಾಗಿ ಇದೊಂದು ಪ್ರೇಕ್ಷಣೀಯ ಸ್ಥಳವಾಗಿದೆ.

**ರಾಜಕೋಟೆ:**

ಸ್ವರ್ಣವಲ್ಲೀ ಮಠದಿಂದ ಸುಮಾರು ೩ ಕಿ.ಮೀ ದೂರದಲ್ಲಿರುವ ಈ ಪ್ರದೇಶ ಮೊಘಲರ ಆಕ್ರಮಣ ಹೆಚ್ಚಾದ ಕಾರಣ ಸೋದೆಯ ಅರಸ ತನ್ನ ಮತ್ತು ಆಡಳಿತ ವ್ಯವಸ್ಥೆಯನ್ನು ಸುರಕ್ಷಿತವಾಗಿರಿಸಲು ಹೊಸ ಕೋಟೆಯನ್ನು ಕಟ್ಟಿಸಿದನು. ಇಂದಿಗೂ ಸ್ವರ್ಣವಲ್ಲೀ ಮಠದ ಹತ್ತಿರ ಶಾಲ್ಮಲಿ ನದಿಯ ದಂಡೆಯ ಆಚೆಗೆ ಅರಸಪ್ಪ ನಾಯಕನ ಪಾಳುಬಿದ್ದ ೨.೫ ಮೈಲಿ ವಿಸ್ತಾರವಾದ ಕೋಟೆಯನ್ನು ಕಾಣಬಹುದಾಗಿದೆ.

**ಹಳೆಯೂರು:**

ಸೋಂದಾದ ಹಳೆಯೂರು ಎಂಬಲ್ಲಿ, ನಿಸರ್ಗದ ಮಡಿಲಿನಲ್ಲಿ ಸುಂದರವಾದ ಕಲ್ಯಾಣ ಚಾಲುಕ್ಯ ಶೈಲಿಯ ಶಂಕರನಾರಾಯಣ ದೇವಾಲಯವನ್ನು ಕಾಣಬಹುದು. ಇಲ್ಲಿ ವಾದಿರಾಜ ಮಠದಿಂದ ೧.೫ ಕಿ. ಮೀ ದೂರದಲ್ಲಿ ಸೂಕ್ಷ್ಮ ರೀತಿಯ ಕೆತ್ತನೆಯ ಶ್ರೀಮನ್ನಾರಾಯಣ ಮೂರ್ತಿಯನ್ನು ನೋಡಬಹುದಾಗಿದೆ. ಶ್ರೀ ವ್ಯಾಸರಾಯರು ಹಳೆಯೂರಿನಲ್ಲಿ ನೆಲಸಿ ತಮ್ಮ ಇಷ್ಟ ದೇವತೆಯ ಪೂಜೆಯನ್ನು ಮಾಡುತ್ತಿದ್ದರೆಂಬುದು ತಿಳಿದುಬರುತ್ತದೆ. ದೇವಾಲಯದ ಬಾಗಿಲಿನ ಮೇಲೆ ಗೋಪಾಲಕೃಷ್ಣ, ರತಿ-ಮನ್ಮಥ, ಮಾರುತಿ ಮತ್ತು ಸರಸ್ವತಿ ದೇವರುಗಳನ್ನು ಚಿತ್ರಿಸಿದ್ದಾರೆ. ಆನೆಗಳು, ಕುದುರೆಗಳು ಮತ್ತು ಸಿಂಹಗಳ ಅಪ್ರತಿಮವಾದ ಶಿಲ್ಪ ಕೆತ್ತನೆಗಳನ್ನು ಕಣ್ತುಂಬಿಕೊಳ್ಳಬಹುದಾಗಿದೆ.

ಸೋಂದಾ ಪ್ರಕೃತಿ ಸಂಪತ್ತಿನಿಂದ ಕೂಡಿದ ಪ್ರೇಕ್ಷಣೀಯ ಸ್ಥಳ ಹಾಗೂ ಪುಣ್ಯಕ್ಷೇತ್ರ. ಉತ್ತರಕನ್ನಡ ಈ ಸೋಂದಾವನ್ನು ತನ್ನ ಪ್ರೇಕ್ಷಣೀಯ ಪಟ್ಟಿಯಲ್ಲಿ ಸೇರಿಸಿದ ಕಾರಣ ಇಂದು ದಿನಕ್ಕೆ ಸಾವಿರಾರು ಜನರು ಬಂದು ಹೋಗುತ್ತಿದ್ದಾರೆ. ಇದರಿಂದ ಸೋಂದಾದ ಮಹತ್ವ ಎಲ್ಲೆಡೆಯಲ್ಲಿ ವ್ಯಾಪಿಸುತ್ತಿದೆ.

**ಮಾಹಿತಿದಾರರು:**

ದತ್ತಾತ್ರಯ ಹೆಗಡೆ.
ಸುಧಾಕರ ಭಟ್ಟ್
ಗೀತಾ ಹೆಗಡೆ
ಶುಭಾ ಗಜಾನನ ಹೆಗಡೆ.
ಸೌರಭಾ ಹೆಗಡೆ



# ಮಹಾಕವಿ ಪುಷ್ಪದಂತನ ಕಾವ್ಯಗಳಲ್ಲಿ ಅಲಂಕಾರಗಳು

**ಅರುಣ ಕೆ. ಆರ್**
**ಡಾ. ರೇಖಾ ಜೈನ್**

**ಪೀಠಿಕೆ :**

ಹತ್ತನೇ ಶತಮಾನದಲ್ಲಿದ್ದ ಪುಷ್ಪದಂತನು ಅಪಭ್ರಂಶ ಭಾಷೆಯಲ್ಲಿ ಜೈನ ಕಾವ್ಯಗಳನ್ನು ರಚಿಸಿದ ಮಹಾಕವಿ. ಈತನು ಹತ್ತನೇ ಶತಮಾನದಲ್ಲಿ ಕರ್ನಾಟಕವನ್ನು ಆಳುತ್ತಿದ್ದ ರಾಷ್ಟ್ರಕೂಟ ದೊರೆ ಮೂರನೇ ಕೃಷ್ಣನ ಅಮಾತ್ಯರಾದ ಭರತ ಹಾಗೂ ನನ್ನನ ಆಶ್ರಯದಲ್ಲಿದ್ದುಕೊಂಡು ಕಾವ್ಯಗಳನ್ನು ರಚಿಸಿದನು. ಅವನ ಉಪಲಬ್ಧ ಕಾವ್ಯಗಳೆಂದರೆ : *ತಿಸಟ್ಠಿ ಮಹಾಪುರಿಸ ಗುಣಾಲಂಕಾರ* ಅಥವಾ *ಮಹಾಪುರಾಣು*, *ಣಾಯಕುಮಾರ ಚರಿಉ* ಮತ್ತು *ಜಸಹರ ಚರಿಉ*. ಒಂಬತ್ತನೇ ಶತಮಾನದಲ್ಲಿ ಜಿನಸೇನಾಚಾರ್ಯ ಹಾಗೂ ಗುಣಭದ್ರಾಚಾರ್ಯರು ಸಂಸ್ಕೃತದಲ್ಲಿ ರಚಿಸಿದ ಮಹಾಪುರಾಣವನ್ನು ಆಧಾರವಾಗಿಟ್ಟುಕೊಂಡು ರಚಿಸಿದ ಕಾವ್ಯವೇ ಮಹಾಪುರಾಣು. ಇದರ ಮೊದಲ ಭಾಗ *ಆದಿಪುರಾಣ* ಅಥವಾ *ನಾಭೇಯ ಚರಿಉ*. ಇದರಲ್ಲಿ ಜೈನ ಪರಂಪರೆಯ ವರ್ತಮಾನದ ಮೊದಲ ತೀರ್ಥಂಕರ ಆದಿನಾಥ ಹಾಗೂ ಆತನ ಮಕ್ಕಳಾದ ಭರತ-ಬಾಹುಬಲಿಯ ಕಥೆಯಿದೆ. ಎರಡನೇ ಭಾಗವಾದ *ಉತ್ತರಪುರಾಣ*ದಲ್ಲಿ ಉಳಿದ ಶಲಾಕಾಪುರುಷರ ಕಥೆಯಿದೆ. ಜೈನ ಪರಂಪರೆಯಲ್ಲಿ ಉಲ್ಲೇಖವಾಗಿರುವ ಕಾಮದೇವರಲ್ಲಿ ಒಬ್ಬನಾದ ನಾಗಕುಮಾರನ ಕಥೆಯೇ *ಣಾಯಕುಮಾರ ಚರಿಉ*. ಇದರಲ್ಲಿ ಶ್ರುತಪಂಚಮಿ ನೋಂಪಿಯ ಮಹತ್ವವನ್ನು ಸಾರಲಾಗಿದೆ. ಹಿಟ್ಟಿನ ಕೋಳಿಯೊಂದನ್ನು ಕೊಂದಿದ್ದರಿಂದ ಉಂಟಾದ ಪಾಪದ ಫಲದಿಂದ ಯಶೋಧರನು ಅನೇಕ ಜನ್ಮಗಳಲ್ಲಿ ಹುಟ್ಟಿ ವಿವಿಧ ರೀತಿಯ ಕಷ್ಟಗಳನ್ನು ಅನುಭವಿಸಿದ ಕಥೆಯನ್ನು *ಜಸಹರ ಚರಿಉ* ವಿವರಿಸುತ್ತದೆ. ಹಿಂಸೆಯ ದುಷ್ಪರಿಣಾಮವನ್ನು ಹಾಗೂ ಅಹಿಂಸೆ ಮತ್ತು ಜೈನಧರ್ಮ ಇವುಗಳ ಪರಸ್ಪರ ಸಂಬಂಧವನ್ನು ವಿವರಿಸಲು ಪುಷ್ಪದಂತನು ಈ ಕಾವ್ಯವನ್ನು ರಚಿಸಿದ್ದಾನೆ[೧]. ಈತನ ಕಾವ್ಯಗಳು ಕರ್ನಾಟಕದ ಜೈನ ಸಾಹಿತ್ಯಕ್ಕೆ ಅಮೂಲ್ಯವಾದ ಕೊಡುಗೆಗಳಾಗಿವೆ.

ಕಾವ್ಯಸೌಂದರ್ಯವನ್ನು ಹೆಚ್ಚಿಸುವಲ್ಲಿ ಬಳಸುವ ಅಲಂಕಾರಗಳ ಬಳಕೆಯಲ್ಲಿ ಕವಿಯ ವೈಶಿಷ್ಟ್ಯವನ್ನು ಕಾಣಬಹುದು. ಕಾವ್ಯಗಳಲ್ಲಿ ಕವಿಯ ಅನನ್ಯತೆಯನ್ನು ಗುರುತಿಸಲು ಅಲಂಕಾರಗಳು ಪ್ರಮುಖ ಅಳತೆಗೋಲಾಗಿರುತ್ತವೆ [೨]. ಕವಿ ಪುಷ್ಪದಂತನು ಅಲಂಕಾರಪ್ರಿಯ. ಆತನು ತನ್ನ ಕಾವ್ಯಗಳಲ್ಲಿ ಬಳಸಿರುವ ಅಲಂಕಾರಗಳನ್ನು ಕುರಿತು ವಿಶ್ಲೇಷಿಸುವ ಪ್ರಯತ್ನವನ್ನು ಈ ಸಂಶೋಧನಾ ಲೇಖನದಲ್ಲಿ ಮಾಡಲಾಗಿದೆ.

**ಮಹಾಪುರಾಣು (ತಿಸಟ್ಠಿ ಮಹಾಪುರಿಸ ಗುಣಾಲಂಕಾರ) :**

ಈ ಕಾವ್ಯದಲ್ಲಿ ಪುಷ್ಪದಂತನು ಉಪಮಾಲಂಕಾರಗಳನ್ನು ಅಧಿಕವಾಗಿ ನಿಪುಣತೆಯಿಂದ ಬಳಸಿದ್ದಾನೆ[೩]. ಕೆಲವು ಉದಾಹರಣೆಗಳನ್ನು ಗಮನಿಸಬಹುದಾಗಿದೆ :

ಶೃಂಗಾರಾದಿ ರಸಯುಕ್ತವಾದ ಸುಕವಿಯ ಕಾವ್ಯದಂತೆ ರಾಜಗೃಹ ನಗರದಲ್ಲಿ ಉತ್ತು-ಬಿತ್ತಿರುವ ಹೊಲವು ಧಾನ್ಯಗಳಿಂದ ರಸಪೂರ್ಣವಾಗಿತ್ತು [ಜಹಿಂ

ಉಚ್ಛುವಣಇಂ ರಸಗಬ್ಭಿಣಾಇಂ ಣಾವಇ ಕವ್ವಇಂ ಸುಕಹಹಿಂ ತಣಾಇಂ । (1–12)] ಎಂದು ವರ್ಣಿಸಿದ್ದಾನೆ.

ಕವಿಯು ಮಗಧ ದೇಶದ ರಾಜಗೃಹ ನಗರವನ್ನು ಆಭರಣಗಳ ರೂಪದಲ್ಲಿ ಚಿತ್ರಿಸುತ್ತಾ, ದಿನಕರ ಚೂಡಾಮಣಿಯನ್ನು ಧರಿಸಿರುವ ಆಕಾಶರೂಪೀ ಲಕ್ಷ್ಮಿಯು ಕಂಚುಕವನ್ನು ಧರಿಸಿದ್ದಾಳೋ ಎಂಬಂತೆಯೂ [ದಿಣಯರಚೂಡಾಮಣಿಯಇ ಣಹಕಾಮಿಣಿಯಇ ಕಂಚುಲು ಪರಿಹಿಲು ಣಾವಇ (೧–೧೩ ಘತ್ತಾ)], ಎಲ್ಲಿ ನೋಡಿದರಲ್ಲಿ ಸುಂದರವಾದ ಚಂದ್ರಕಾಂತ, ಸೂರ್ಯಕಾಂತ ಮಣಿಗಳಿಂದ ಆ ನಗರವು ಭೂಷಿತವಾಗಿ ಹೊಸದರಂತೆ ಕಾಣುತ್ತಿತ್ತು [ಜಹಿಂ ದೀಸಇ ತಹಿಂ ಭಲ್ಲಉ ಣಯರು ಣವಲ್ಲಉ ಸಸಿರವಿಅಂತವಿಹೂಸಿಉ। (೧–೧೫ ಘತ್ತಾ)] ಎಂದು ಬಣ್ಣಿಸಿದ್ದಾನೆ.

ಸರ್ವಾರ್ಥಸಿದ್ಧಿ ವಿಮಾನದಿಂದ ಚ್ಯುತನಾಗಿ ಋಷಭನಾಥನ ಜೀವವು ಮಾತೆ ಮರುದೇವಿಯ ಗರ್ಭವನ್ನು ಪ್ರವೇಶಿಸಿದ ಸಂದರ್ಭದಲ್ಲಿ ಆತನನ್ನು ಶರತ್ಕಾಲದ ಮೋಡಗಳ ಮಧ್ಯೆ ದೇದೀಪ್ಯಮಾನವಾದ ಚಂದ್ರನಂತೆ ಹಾಗೂ ತಾವರೆಯ ಎಲೆಯ ಮೇಲಿರುವ ನೀರಿನ ಹನಿಯಂತೆ [ಸರಯಬ್ಭಮಜ್ಝಮ್ಮಿ ರುಇರುಂದಇಂದು ವ್ವ ಸಯವತ್ತಿಣೀಪತ್ತಪಿ ತೋಯಬಿಂದು ವ್ವ । (೩–೭)] ಎಂದು ವರ್ಣಿಸಿದ್ದಾನೆ. ಇರುಳಲ್ಲಿ ಚಂದ್ರ ಹಾಗೂ ತಾವರೆಯ ಪತ್ರದ ಮೇಲಿನ ನೀರಿನ ಹನಿ ಮುತ್ತಿನಂತೆ ಶೋಭಿಸುವುದರಿಂದ ಈ ಉಪಮೆಯನ್ನು ಕವಿ ಬಳಸಿದ್ದಾನೆ.

ಬಾಲರವಿ ಮತ್ತು ಅಗ್ನಿಶಿಖೆಗಳು ಅರುಣವರ್ಣದಲ್ಲಿರುತ್ತವೆ. ಇದೇ ರೀತಿ ನವಜಾತ ಶಿಶು ಋಷಭನಾಥನು ಪೂರ್ವದಿಕ್ಕಿನಲ್ಲಿ ಉದಯಿಸಿದ ಬಾಲರವಿಯಂತೆ [ಸುಖ ಇದಿಸಾಇ ಣಂ ಬಾಲರವಿ (೩–೮)], ಅರಣಿಯಿಂದ ಹೊಮ್ಮಿದ ಅಗ್ನಿಶಿಖೆಯಂತೆ [ಅರಣೀಇ ಸಿಹಿ ಣಂ ದಕ್ಖಾಲಿಉ ಧರಣೀಇ ಣಿಹಿ (೩–೮)] ಕಂಡನೆಂದು ಬಣ್ಣಿಸಿದ್ದಾನೆ.

ಒಂದು ಕಡೆ ಜೋರಾಗಿ ಘೀಳಿಡುತ್ತಿರುವ ಆನೆಗಳನ್ನು ಪ್ರಳಯಕಾಲದ ಸಮುದ್ರದೊಂದಿಗೆ ತುಲನೆ ಮಾಡಿದ್ದಾನೆ [ಗಜ್ಜಇ ಗಜ್ಜಂತಹಿಂ ಗಯಹಿಂ ಪಲಯಕಾಲಿ ಣಂ ಖುಹಿಯಹು ಸಾಯರು । (೧೩–೧)].

ಷಟ್ಖಂಡಗಳನ್ನು ಜಯಿಸಿದ ಭರತನು ಅಯೋಧ್ಯಾ ಪುರಪ್ರವೇಶ ಮಾಡಲಿರುವಾಗ ಅಲ್ಲಿಯೇ ನಿಂತುಬಿಡುವ ಚಕ್ರರತ್ನವು ಕುಕವಿಯ ಚಮತ್ಕಾರರಹಿತ ಕಾವ್ಯದಂತೆ ಇತ್ತು ಎಂದು ಪುಷ್ಪದಂತನು ವಿಡಂಬನಾತ್ಮಕವಾಗಿ ತುಲನೆ ಮಾಡಿದ್ದಾನೆ [ಥಕ್ಕಉ ಚಕ್ಕು ಣ ಪುರಿ ಪರಿಸಕ್ಕಇ ಕುಕಇಹಿ ಕವ್ವು ವ ಣಉ ಚಿಮ್ಮಕ್ಕಇ । (೧೬–೨)].

ಮಹಾಪುರಾಣುವಿನಲ್ಲಿ ಬರುವ ಹಲವು ಸನ್ನಿವೇಶಗಳಲ್ಲಿ ಪುಷ್ಪದಂತನು ಸಂದರ್ಭೋಚಿತವಾಗಿ ಉಪಮಾಲಂಕಾರಗಳನ್ನು ಬಳಸಿ ಕಾವ್ಯವನ್ನು ಆಕರ್ಷಣೀಯವಾಗಿಸಿದ್ದಾನೆ. ಕಾವ್ಯಶೈಲಿಯನ್ನು ಕೂಡ ಅಲಂಕಾರಕ್ಕಾಗಿ ಬಳಸಿರುವುದು ಕವಿಯ ವೈಶಿಷ್ಟ್ಯವಾಗಿದೆ.

**ಣಾಯಕುಮಾರ ಚರಿಉ :**

ಈ ಕಾವ್ಯದಲ್ಲಿ ಪುಷ್ಪದಂತನು ಉಪಮೆ, ರೂಪಕಗಳ ಮೂಲಕ ಸನ್ನಿವೇಶಗಳನ್ನು ವರ್ಣಿಸಿದ್ದಾನೆ. ಅದರಲ್ಲೂ ಕಾವ್ಯಕ್ಕೆ ಸಂಬಂಧಿಸಿದ ಹೋಲಿಕೆಗಳನ್ನು ಅಧಿಕವಾಗಿ ಬಳಸಿದ್ದರೆ, ಕೆಲವೆಡೆ ಧರ್ಮಕ್ಕೆ ಸಂಬಂಧಿಸಿದ ಉಪಮೆಗಳನ್ನು ನೀಡಿದ್ದಾನೆ[೪].



ಕಾವ್ಯದ ಆರಂಭದಲ್ಲಿ ಸರಸ್ವತೀ ವಂದನೆಯಲ್ಲಿ, ಕವಿಯು ಒಂದೆಡೆ ದೇವಿ ಸರಸ್ವತಿಯ ಗುಣಗಳನ್ನು ಸ್ತುತಿಸುತ್ತಾ, ಇನ್ನೊಂದೆಡೆ ಸದ್ಗೃಹಿಣಿಯ ಗುಣವಿಶೇಷಗಳನ್ನು ಉಲ್ಲೇಖಿಸುತ್ತಾ, ಇಬ್ಬರಿಗೂ ಗೌರವ ತೋರಿದ್ದಾನೆ : ಸದ್ಗೃಹಿಣಿಯು ಒಳ್ಳೆಯ ರೀತಿಯಿಂದ ಅರ್ಥ(ಹಣ)ವನ್ನು ಸಂಗ್ರಹಿಸಿ ಪತಿಗೆ ಆಶ್ವಾಸನೆಯನ್ನು ನೀಡುವಂತೆ, ಸರಸ್ವತಿಯು ಪ್ರಶಸ್ತವಾದ ಅರ್ಥಗಳಿಂದ ಆನಂದವನ್ನು ಉಂಟುಮಾಡುತ್ತಾಳೆ; ಸ್ತ್ರೀಯು ಸದಾ ಗೃಹವಿಜ್ಞಾನವನ್ನು ಕುರಿತು ಧ್ಯಾನಿಸುವಂತೆ ದೇವಿಯು ಸಮಸ್ತ ಜ್ಞಾನವಿಜ್ಞಾನಗಳನ್ನು ಪರಿಪುಷ್ಟಗೊಳಿಸುತ್ತಾಳೆ. ಈ ರೀತಿ ಹೋಲಿಕೆಯನ್ನು ಮುಂದುವರೆಸುತ್ತಾ ಕವಿಯು, ಸ್ತ್ರೀ ತನ್ನ ಶೀಲ ಮುಂತಾದ ಆಂತರಿಕ ಗುಣಗಳಿಂದ ಹಾಗೂ ಬಾಹ್ಯ ಅಲಂಕಾರಗಳಾದ ವಸ್ತ್ರ–ಆಭರಣಗಳಿಂದ ಸುಂದರಳಾಗಿ ಕಾಣುವಂತೆಯೇ ಶಬ್ದ ಹಾಗೂ ಅರ್ಥ ಈ ಎರಡು ರೀತಿಯ ಅಲಂಕಾರಗಳಿಂದ ಶೋಭಿತಳಾಗಿರುವ ಸರಸ್ವತಿ ದೇವಿ ನನಗೆ ಪ್ರಸನ್ನಳಾಗಲಿ [*ದುವಿಹಾಲಂಕಾರೇಂ ವಿಪ್ಫುರಂತಿ. . . . ಪಸಿಯಉ ಮಹು ದೇವಿ ಮಣೋಹಿರಾಮ* । (೧–೧)] ಎಂದು ಬೇಡಿಕೊಂಡಿದ್ದಾನೆ.

ವನರಾಜನ ಮನೆಯಲ್ಲಿ ನಾಗಕುಮಾರನಿಗೆ ತುಪ್ಪದಿಂದ ಕೂಡಿದ ಪಕ್ವಾನ್ನದೊಂದಿಗೆ ನೀಡಿದ ಔತಣವನ್ನು ಪುಷ್ಪದಂತನು 'ಮಾತ್ರಾಬದ್ಧವಾದ ಛಂದೋರೂಪಗಳಿಂದ ಕಾವ್ಯದಂತೆ ಉಚಿತ ಪ್ರಮಾಣದಿಂದ ಕೂಡಿತ್ತು; ಭೋಜನವು ಆಯುಬಂಧದಿಂದ ಕೂಡಿದ ಗತಿಕರ್ಮದಂತೆ ಸ್ವಾದಯುಕ್ತವಾಗಿತ್ತು; ಶೃಂಗಾರಾದಿ ರಸಗಳಿಂದ ಕೂಡಿದ ಉತ್ತಮವಾದ ನಾಟಕದಂತೆ ಷಡ್ರಸಯುಕ್ತವಾಗಿತ್ತು; ವ್ಯಂಜನ ವಿಚಾರಗಳಿಂದ ಕೂಡಿದ ವ್ಯಾಕರಣದಂತೆ ಭೋಜನವು ವಿವಿಧ ಬಗೆಯ ವ್ಯಂಜನಗಳಿಂದ ಕೂಡಿ ರುಚಿಕರವಾಗಿತ್ತು' ಎಂದು ಬಣ್ಣಿಸಿದ್ದಾನೆ. ಸುಕಂಠ ಹಾಗೂ ನಾಗಕುಮಾರನ ನಡುವೆ ನಡೆದ ಯುದ್ಧದಲ್ಲಿ, ಸುಕಂಠನು ಬಿಟ್ಟ ಚಿತ್ರವಿಚಿತ್ರ ಬಾಣಗಳು ಆತನ ವಿಚಿತ್ರ ಹಾಗೂ ಚಂಚಲ ಚಿತ್ತದಂತಿತ್ತು ಎಂದು ವರ್ಣಿಸಿದರೆ, ನಾಗಕುಮಾರನು ಬಾಣ ಪ್ರಯೋಗಿಸಿದುದು ಆರ್ಜವ ಗುಣದಿಂದ ಕೂಡಿ ಮೋಕ್ಷಕ್ಕೆ ತತ್ಪರನಾದಂತಿತ್ತು ಎಂದು ವರ್ಣಿಸಿದ್ದಾನೆ. ಇಲ್ಲಿ ಸುಕಂಠ ಹಾಗೂ ನಾಗಕುಮಾರರ ಮನೋಭಾವಗಳೂ ಕೂಡ ವ್ಯಕ್ತವಾಗಿವೆ. ಸಮ್ಯಕ್ತ್ವಕ್ಕೆ ಸದ್ಧರ್ಮ ಗಳಿಕೆಯಂತೆ, ದಾನಶೀಲ ವ್ಯಕ್ತಿಯ ಮನೆಗೆ ಆಗಮಿಸಿದ ಮುನಿಗಳ ಸಾಲಿನಂತೆ, ಸರಸಿಗಳಿಗೆ ಸುಲಲಿತ ಕಾವ್ಯ ಪ್ರವೃತ್ತಿಯಂತೆ, ದುಂಬಿಗೆ ಆಗಷ್ಟೇ ಅರಳಿದ ಕಮಲದ ರಸಪಾನದಂತೆ, ವೈಯಾಕರಣಿಗೆ ಪದವೃತ್ತಿಯಂತೆ, ಆಳುವ ದೊರೆಗೆ ನ್ಯಾಯಪ್ರವೃತ್ತಿಯಂತೆ, ನೈದಿಲೆಗಳ ಸಮೂಹಕ್ಕೆ ಚಂದ್ರನ ಬೆಳದಿಂಗಳಂತೆ ಹಾಗೂ ಯಶಸ್ವೀ ಪುರುಷನಿಗೆ ಕೀರ್ತಿಯಂತೆ [*ಕುಮುಯಾಯರಹೋ ಣಿಸಾಯರದಿತ್ತಿ ವ ಜಸವಂತಹೋ ಪುರಿಸಹೋ ಜಸಕಿತ್ತಿ ವ* । (೯–೨)] ನಾಗಕುಮಾರನಿಗೆ ಲಕ್ಷ್ಮೀಮತಿಯು ಅತ್ಯಂತ ಪ್ರೀತಿಪಾತ್ರಳಾಗಿದ್ದಳು ಎಂಬುದನ್ನು ಪುಷ್ಪದಂತನು ಉಪಮಾನಗಳಿಂದ ವರ್ಣಿಸಿದ್ದಾನೆ.

**ಜಸಹರ ಚರಿಉ :**

ಕವಿಯು ತನಗೆ ವ್ಯಾಕರಣದ ಜ್ಞಾನವಿಲ್ಲ ಎಂದು ಮಹಾಪುರಾಣ ಕಾವ್ಯದಲ್ಲಿ ವಿನಯದಿಂದ ಹೇಳಿಕೊಂಡಿದ್ದಾನಾದರೂ, *ಜಸಹರ ಚರಿಉ* ಕಾವ್ಯದ ತುಂಬ ಉಪಮೆ, ಉತ್ಪ್ರೇಕ್ಷೆ, ರೂಪಕ, ಶ್ಲೇಷಗಳಂತಹ ಸರಳವಾದ, ಸುಂದರವಾದ ಅಲಂಕಾರಗಳನ್ನು ಬಳಸಿದ್ದಾನೆ[೫].

ಭೂಸುಂದರಿಯ ಯೌವನದಂತೆ ಕಾಣುವ ಉಪವನಗಳು ಹೂ–ಹಣ್ಣುಗಳಿಂದ ತುಂಬಿದ್ದವು; ದನಗಾಹಿಗಳು ಕಡಿದು ಎಸೆದ ಹಣ್ಣುಗಳು ಸತ್ಕರ್ಮದ ಫಲಗಳಂತೆ ರುಚಿಕರವಾಗಿದ್ದವು; ಕಮಲದ ಹೂಗಳು ದುಂಬಿಗಳ ಭಾರದಿಂದ ಬಾಗುವಂತೆ ಅಲ್ಲಿರುವ ಭತ್ತದ ಪೈರುಗಳು ತೆನೆಗಳ ಭಾರದಿಂದ ಬಾಗಿದ್ದವು ಎಂದು ಯೌಧೇಯ ದೇಶದ ಪ್ರಕೃತಿಯ ವರ್ಣನೆಯನ್ನು (೧ನೇ ಸಂಧಿ) ಮಾಡಿದ್ದಾನೆ.

ಆವಂತೀ ನಗರವನ್ನು ವರ್ಣಿಸುತ್ತಾ ಕವಿಯು, ಆ ನಗರದೊಳಗೆ ಮರಕತಮಣಿಗಳು ಕಿರಣಗಳನ್ನು ಹರಡುತ್ತಿದ್ದುದರಿಂದ ಅಲ್ಲಿಯ ದಾರಿಯು ಹಸಿರಾಗಿ ಕಾಣುತ್ತಿತ್ತೆಂದು ಹೇಳುತ್ತಾನೆ [*ಮರಗಯಕರಕಲಿಯಹಿಂ ಮಹಿಯಲಿ ಘುಲಿಯಹಿಂ ಘುರಿಯಹಿಂ ಹರಿಯಹಿಂ ಮೂಢಮಇ ।* (೧ನೇ ಸಂಧಿ) ]. ಗಜಶಾಲೆಯಿಂದ ಮಾವುತನು ತಂದ ಮದ್ದಾನೆಯು ಆ ಹಸಿರನ್ನು ಕಂಡು ಹುಲ್ಲೆಂದು ಭಾವಿಸಿ ಮೆಲ್ಲನೆ ನಡೆಯುತ್ತ ಅದರ ಮೇಲೆ ತನ್ನ ಸೊಂಡಿಲನ್ನು ಸವರುತ್ತಿತ್ತಂತೆ.

ಮಾರಿದತ್ತ ಅರಸನು ದಾನದಲ್ಲಿ ಕರ್ಣನಂತೆ, ವೈಭವದಲ್ಲಿ ಇಂದ್ರನಂತೆ, ರೂಪದಲ್ಲಿ ಕಾಮದೇವನಂತೆ, ಕಾಂತಿಯಲ್ಲಿ ಚಂದ್ರನಂತೆ, ಶಿಕ್ಷೆಯಲ್ಲಿ ಪ್ರಚಂಡನಾದ ಯಮನಂತೆ, ವೈರಿಗಳ ಸೈನ್ಯವನ್ನು ನಾಶ ಮಾಡಲು ಸಮರ್ಥನಾಗಿದ್ದು, ಶಕ್ತಿಯಲ್ಲಿ ವಾಯುದೇವನಂತಿದ್ದನು ; ದುಂಬಿಗಳ ಹಿಂಡಿನಂತೆ ಆತನ ನೀಳವರ್ಣದ ತಲೆಗೂದಲು ಶೋಭಿಸುತ್ತಿತ್ತು; ನಗರದ ಕೋಟೆಯ ಹೆಬ್ಬಾಗಿಲಿನಂತೆ ಆತನ ಎದೆಯು ಹರವಾಗಿತ್ತು; ಸ್ವರವು ಮೇಘ ಘರ್ಜನೆಯಂತಿತ್ತು; ಜ್ಞಾನ–ವಿಜ್ಞಾನಗಳ ಅರಿವಿನಿಂದ ಆತನು ಸೂರ್ಯನಂತೆ ಹೊಳೆಯುತ್ತಿದ್ದನು ಎಂದು (೧ನೇ ಸಂಧಿ) ಮಾರಿದತ್ತ ರಾಜನ ವ್ಯಕ್ತಿತ್ವವನ್ನು ವರ್ಣಿಸಿದ್ದಾನೆ.

ನಂದನವನದಲ್ಲಿ ಆಡುತ್ತಿದ್ದ ನವಿಲುಗಳ ಅಲ್ಲಾಡುತ್ತಿದ್ದ ಗರಿಗಳು ವನಶ್ರೀಯ ಚಾಮರದಂತೆ ಸೊಬಗಿನಿಂದ ಶೋಭಿಸುತ್ತಿದ್ದವು [*ಸೋಹಇ ಘೋಲಿರಪಿಂಛಸಹಾಸೋ ಣಂ ವಣಲಚ್ಛೀಚಮರವಿಲಾಸೋ ।* (೧ನೇ ಸಂಧಿ) ] ಎಂದು ಕವಿಯು ಬಣ್ಣಿಸಿದ್ದಾನೆ.

ಮುನಿಗಳು ಅನುಪ್ರೇಕ್ಷೆಗಳನ್ನು ಮನದಲ್ಲಿ ಧ್ಯಾನಿಸುವಂತೆ ಹೇಳುತ್ತಾ, ಶರೀರದ ಯೌವನ–ಬಣ್ಣ, ರೂಪ–ವಿಲಾಸ ಹಾಗೂ ಸಂಪತ್ತು ಇವೆಲ್ಲವೂ ಕಾಮನಬಿಲ್ಲಿನಂತೆ, ನೀರಗುಳ್ಳೆಗಳಂತೆ ಕ್ಷಣಿಕವಾಗಿರುತ್ತವೆ ಎಂದು (ಸಂಧಿ ೪) ಅನಿತ್ಯಾನುಪ್ರೇಕ್ಷೆಯನ್ನು ವಿವರಿಸುತ್ತಾರೆ.

**ಉಪಸಂಹಾರ :**

ಈ ಮೂರೂ ಕಾವ್ಯಗಳಲ್ಲಿ ಕವಿ ಪುಷ್ಪದಂತನು ಪ್ರಕೃತಿ, ಮಣಿರತ್ನಗಳು–ಆಭರಣಗಳು, ಜೈನತತ್ವಗಳು, ಕಾವ್ಯಶೈಲಿ ಇವುಗಳನ್ನು ಅಲಂಕಾರಕ್ಕಾಗಿ ಬಳಸಿದ್ದಾನೆ. ಕಾವ್ಯಗಳಲ್ಲಿ ಕಂಡುಬರುವ ಕಥನಕೌಶಲ, ವ್ಯಕ್ತಿಚಿತ್ರಣ, ರಸಾಲಂಕಾರಗಳ ನಿರೂಪಣೆ ಇವುಗಳಿಂದ ಕವಿಯು ಕಾವ್ಯರಚನೆಯಲ್ಲಿ ತನ್ನದೇ ಆದ ವೈಶಿಷ್ಟ್ಯವನ್ನು ಹೊಂದಿರುವುದನ್ನು ಕಾಣಬಹುದು. ಸುಗಮ ಹಾಗೂ ಲಾಲಿತ್ಯವುಳ್ಳ ಶೈಲಿ, ಆಳವಾದ ವಿಚಾರಗಳು, ಪದಚಾತುರ್ಯಗಳಿಂದ ಅವನ ಪ್ರತಿಭೆಗಳು ಅನಾವರಣಗೊಂಡಿವೆ. ಕಾವ್ಯಾತ್ಮಕ ಹಾಗೂ ಸಾಹಿತ್ಯಿಕ ದೃಷ್ಟಿಗಳಿಂದ ಈತನ ಮೂರೂ ಕಾವ್ಯಗಳು ಅಪಭ್ರಂಶ ಸಾಹಿತ್ಯ ಕ್ಷೇತ್ರದಲ್ಲಿ ಶ್ರೇಷ್ಠವೆನಿಸಿವೆ.

**ಕೊನೆ ಟಿಪ್ಪಣಿ :**

೧. ಬಡಿಗೇರ, ಪಿ. ಬಿ. ೧೯೯೬. *ಜಸಹರ ಚರಿಉ (ಕನ್ನಡಾನುವಾದ).* ಮೈಸೂರು : ಅಭಿನಂದನ ಪ್ರಕಾಶನ. (ಪುಟ viii–xxxi).



೨. ಸುಜಾತಾ, ಎಸ್.ವಿ. ೨೦೧೪. *ಕನ್ನಡ ನಾಗಕುಮಾರ ಕಥಾಕಾವ್ಯಗಳು–ತೌಲನಿಕ ಅಧ್ಯಯನ.* ಬೆಂಗಳೂರು : ಸುಮೇರು ಜೈನ್ ಫೌಂಡೇಶನ್(ರಿ). (ಪುಟ ೧೯೧).

೩. ಮಿಶ್ರಾ, ಸುದರ್ಶನ್. ೧೯೮೭. *ಮಹಾಕವಿ ಪುಷ್ಪದಂತ್ ಔರ್ ಉನ್‌ಕಾ ಮಹಾಪುರಾಣ್.* ವೈಶಾಲಿ (ಬಿಹಾರ್): ಪ್ರಾಕೃತ್ ಜೈನ್‌ಶಾಸ್ತ್ರ ಔರ್ ಅಹಿಂಸಾ ಶೋಧ್ ಸಂಸ್ಥಾನ್. (ಪುಟ ೨೩೬).

೪. ಸುಜಾತಾ, ಎಸ್. ವಿ. ೨೦೧೪. *ಕನ್ನಡ ನಾಗಕುಮಾರ ಕಥಾಕಾವ್ಯಗಳು–ತೌಲನಿಕ ಅಧ್ಯಯನ.* ಬೆಂಗಳೂರು : ಸುಮೇರು ಜೈನ್ ಫೌಂಡೇಶನ್(ರಿ). (ಪುಟ ೧೭೩–೧೯೨).

೫. ಬಡಿಗೇರ, ಪಿ.ಬಿ. ೧೯೯೬. *ಜಸಹರ ಚರಿಉ (ಕನ್ನಡಾನುವಾದ).* ಮೈಸೂರು : ಅಭಿನಂದನ ಪ್ರಕಾಶನ. (ಪುಟ ಥಥಥತು).

**ಪರಾಮರ್ಶನ ಗ್ರಂಥಗಳು :**

೧. ಜೈನ್, ದೇವೇಂದ್ರಕುಮಾರ್. ೨೦೧೦ (೪ನೇ ಮುದ್ರಣ). *ಮಹಾಕವಿ ಪುಷ್ಪದಂತ ವಿರಚಿತ ಮಹಾಪುರಾಣ್ (ನಾಭೇಯ ಚರಿಉ) – ಭಾಗ ೧ ಮತ್ತು ಭಾಗ ೨ (ಹಿಂದಿ ಅನುವಾದ).* (ಸಂ) ವೈದ್ಯ, ಪಿ.ಎಲ್. ದೆಹಲಿ : ಭಾರತೀಯ ಜ್ಞಾನಪೀಠ.

೨. (ಸಂ) ಜೈನ್, ಹೀರಾಲಾಲ್. ೧೯೭೨ (ದ್ವಿತೀಯ ಮುದ್ರಣ). *ಣಾಯಕುಮಾರ ಚರಿಉ.* ದೆಹಲಿ : ಭಾರತೀಯ ಜ್ಞಾನಪೀಠ.

೩. ಜೈನ್, ಹೀರಾಲಾಲ್. ೧೯೭೨ (ದ್ವಿತೀಯ ಸಂಸ್ಕರಣ). *ಜಸಹರ ಚರಿಉ* (ಸಂಪಾದನೆ ಮತ್ತು ಅನುವಾದ). ದೆಹಲಿ : ಭಾರತೀಯ ಜ್ಞಾನಪೀಠ.

೪. ಮಿರ್ಜಿ, ಅಣ್ಣಾರಾಯ. ೧೯೮೧. *ಭಾರತೀಯ ಸಂಸ್ಕೃತಿಗೆ ಜೈನ ಧರ್ಮದ ಕೊಡುಗೆ (ಕನ್ನಡಾನುವಾದ).* (ಸಂ) ಜೈನ್, ಹೀರಾಲಾಲ್ ಮತ್ತು ಉಪಾಧ್ಯೆ, ಆ. ನೇ. ಸೋಲಾಪುರ : ಜೈನ ಸಂಸ್ಕೃತಿ ಸಂರಕ್ಷಣ ಸಂಘ.



# ಚಾರಿತ್ರಿಕ ಹಾಗೂ ಸಾಂಸ್ಕೃತಿಕ ನೆಲೆಯಾಗಿ ಮುದನೂರು ಕ್ಷೇತ್ರ

ಆಶಿಕಾ ಎಚ್. ಸಿ.

ಮುದನೂರು ವಚನಕಾರ ಜೇಡರ ದಾಸಿಮಯ್ಯನ ಸ್ವಕ್ಷೇತ್ರ. ಹನ್ನೆರಡನೇ ಶತಮಾನ ಹಾಗೂ ಅದಕ್ಕೂ ಮೊದಲಿನಿಂದಲೂ ಈ ಪ್ರದೇಶ ಐತಿಹಾಸಿಕ ಹಾಗೂ ಸಾಂಸ್ಕೃತಿಕವಾದ ವೈಶಿಷ್ಟ್ಯವನ್ನು ಹೊಂದಿತ್ತು. ಅಲ್ಲಿನ ಶಾಸನಗಳು ಹಾಗೂ ಸಾಂಸ್ಕೃತಿಕ ನೆಲೆಗಳು ಅದರದ್ದೇ ಆದ ವಿಭಿನ್ನತೆಯನ್ನು ಹೊಂದಿವೆ. ಮುದನೂರು ತಲುಪುವ ಮಾರ್ಗ.

೧) ಸುರಪುರದಿಂದ ನೇರ ಕೆಂಭಾವಿ ರಸ್ತೆ > ಕೆಂಭಾವಿಯಿಂದ ಹಾಗೇ ಮುಂದಕ್ಕೆ ಬಂದು ಬಲಕ್ಕೆ ತಿರುಗಬೇಕು. ಒಟ್ಟಾರೆ ಕೆಂಭಾವಿಯಿಂದ ೮ ಕಿ.ಮೀ. ದೂರ.

೨) ಸುರಪುರದಿಂದ ಬಾಚಿಮಟ್ಟಿ ಮಾರ್ಗದಿಂದ ಅಗ್ನಿರಾಂಪೂರ ಕ್ರಾಸ್‌ನಿಂದ ಒಳಗೆ ೧ ಕಿ.ಮೀ ಹೋಗಬೇಕು.

ಮುದನೂರು ಸುರಪುರದ ಸಮೀಪದ ನಾಡು. ಸುರಪುರ ಐತಿಹಾಸಿಕವಾಗಿ ಪ್ರಭಾವಶಾಲಿಯಾದ ಆಳ್ವಿಕೆಗಾರರನ್ನು ಹೊಂದಿದ ಆಡಳಿತ ಪ್ರದೇಶ. ವಿಜಯನಗರೋತ್ತರ ಕರ್ನಾಟಕ ಇತಿಹಾಸದಲ್ಲಿ ಚಿತ್ರದುರ್ಗವನ್ನು ಹೊರತುಪಡಿಸಿದರೆ ಸುರಪುರಕ್ಕೆ ಅಗ್ರಸ್ಥಾನ ಲಭಿಸುತ್ತದೆ. ಸುರಪುರ ಭೀಮಾ ಹಾಗೂ ಕೃಷ್ಣಾ ನದಿಗಳ ನಡುವೆ ಹರಡಿದ ನಾಡು. ಈ ಸಂಸ್ಥಾನ ವಿಜಯನಗರೋತ್ತರ ಇತಿಹಾಸದಲ್ಲಿ, ಅದರಲ್ಲೂ ಮುಖ್ಯವಾಗಿ ಹೈದರಬಾದ್ ಕರ್ನಾಟಕ ಭಾಗದಲ್ಲಿ ಈ ನೆಲದ ಹಿರಿಮೆ-ಗರಿಮೆಯನ್ನು ಮೆರೆಯುತ್ತಾ, ಇಡೀ ದಕ್ಷಿಣ ಭಾರತದಲ್ಲಿ 'ಛಲದ ಪ್ರತೀಕ' ವೆಂಬ ಹೆಗ್ಗಳಿಕೆಗೆ ಪಾತ್ರವಾಗಿದೆ. ಈ ಮೂಲಕ ರಾಷ್ಟ್ರೀಯ ಮಟ್ಟದ ಇತಿಹಾಸದಲ್ಲಿ ತಮ್ಮದೇ ಆದ ರಾಜಕೀಯ ಕ್ಷೇತ್ರದಲ್ಲಷ್ಟೇ ಅಲ್ಲ, ಸಾಂಸ್ಕೃತಿಕ ಕ್ಷೇತ್ರಗಳಾದ, ಕಲೆ, ಸಾಹಿತ್ಯ, ಸಂಗೀತ, ವಾಸ್ತುಶಿಲ್ಪ, ಸಾಮಾಜಿಕ, ಆರ್ಥಿಕ, ಶೈಕ್ಷಣಿಕ, ಧಾರ್ಮಿಕ ಕ್ಷೇತ್ರವನ್ನು ಶ್ರೀಮಂತಗೊಳಿಸಿವೆ. ಇಂದಿಗೂ ನೋಡಲು ಸಿಗುತ್ತವೆ. ಈ ಸಂಸ್ಥಾನದ ವಂಶಸ್ಥರು ಇಂದಿಗೂ ಇದ್ದು, ಅನೇಕ ಹಬ್ಬ-ಉತ್ಸವ, ನಂಬಿಕೆ-ಸಂಪ್ರದಾಯಗಳಂತಹ ಆಚರಣೆಗಳನ್ನು ಜೀವಂತವಾಗಿರಿಸಿಕೊಂಡಿದ್ದಾರೆ.

ಮುದನೂರಿನ ಸುತ್ತಮುತ್ತಲಿನ ಪ್ರದೇಶಗಳು ಸಾಹಿತ್ಯಿಕವಾಗಿ, ಧಾರ್ಮಿಕ ಹಾಗೂ ಸಾಂಸ್ಕೃತಿಕವಾಗಿ ತುಂಬಾ ಪ್ರಭಾವಶಾಲಿಯಾಗಿ ಕಂಡು ಬರುತ್ತವೆ. ಸುರಪುರ ತಾಲ್ಲೂಕಿನ ಕೆಂಭಾವಿಯು ಕೆಂಭಾವಿ ಭೋಗಣ್ಣನ ಊರು, ಕೊಡೇಕಲ್ ಬಸವಣ್ಣ, ತಿಂಥಿಣಿ ಮೌನೇಶ್ವರರು, ವಚನಕಾರ ಕೋಲ ಶಾಂತಯ್ಯ ಮೊದಲಾದ ಶರಣರು, ದಾರ್ಶನಿಕರು ಹಾಗೂ ಕವಿಗಳು ನೆಲೆಸಿದ ನಾಡು ಇದಾಗಿದೆ. ಮುದನೂರು ಭೌಗೋಳಿಕವಾಗಿ ಪ್ರಾಗೈತಿಹಾಸ ಕಾಲದಿಂದಲೂ ಸಮೃದ್ಧವಾಗಿ ಹರಡಿದ ನಾಡು. ಈ ಬಗ್ಗೆ ಲೇಖಕರಾದ ಡಾ.ಕೆ.ಪದ್ದಯ್ಯ ಅವರು ಹೇಳುತ್ತಾರೆ.[೧] ಅವರ ಮಾತುಗಳು ಮುದನೂರು ಹಾಗೂ ದೇವನೂರುಗಳನ್ನು ವಿಶೇಷವಾಗಿ ಪರಿಗಣಿಸುತ್ತದೆ. ಇದಕ್ಕೆ ಪೂರಕವೆಂಬಂತೆ ಮುದನೂರಿನಲ್ಲಿ ಚಿಲುಮೆಯಿಂದ ನಿರ್ಮಾಣವಾದ ೭ ತೀರ್ಥಗಳು



ಇವೆ. ಇಲ್ಲಿನ ಸುತ್ತಲಿನ ಪ್ರದೇಶವು ಸದಾ ಹಸಿರಾಗಿರುವುದು. ಕೃಷಿ, ಅದರಲ್ಲೂ ಭತ್ತ ಬೆಳೆಯಲು ಯೋಗ್ಯವಾದ ಸ್ಥಳವಾಗಿದೆ ಎನ್ನುವುದು ಆಧಾರಗಳಿಂದ ವೇದ್ಯವಾಗುತ್ತದೆ.

**ತೀರ್ಥಗಳು.**

ಮುದನೂರಿನಲ್ಲಿ ಪ್ರಧಾನವಾಗಿ ಈ ಏಳು ತೀರ್ಥಗಳ ನೀರನ್ನು ಆಧರಿಸಿ ಜನಜೀವನ ನಡೆಯುತ್ತಿತ್ತು ಎನ್ನುವುದಕ್ಕೆ ಇಂದಿಗೂ ಆಧಾರಗಳು ದೊರೆಯುತ್ತವೆ. ಆ ೭ ತೀರ್ಥಗಳು ಹೀಗಿವೆ. ೧) ರಾಮ ತೀರ್ಥ ೨) ಲಕ್ಷ್ಮಣ ತೀರ್ಥ ೩) ಸಂಗಮ ತೀರ್ಥ ೪) ಪಾಂಡು ತೀರ್ಥ ೫) ಮರಳು ತೀರ್ಥ ೬) ಸಕ್ಕರೆ ತೀರ್ಥ ೭) ಹಾಲು ತೀರ್ಥ. ಈ ತೀರ್ಥಗಳಿರುವುದರಿಂದಲೇ ಮುದನೂರಿಗೆ ಪ್ರಾಚೀನ ಕಾಲದಿಂದಲೂ ಮುದಿನೀರು, ಆಮೋಧಪುರ ಮೊದಲಾದ ಹೆಸರುಗಳು ಬಂದಿವೆ ಎಂದು ಹೇಳಬಹುದು. ಈ ಏಳು ತೀರ್ಥಗಳಲ್ಲಿ ರಾಮೇಶ್ವರ ದೇವಾಲಯದ ಹೊರಗೆ ಅಂದರೆ ಪೂರ್ವದಲ್ಲಿ ಪಾಂಡುತೀರ್ಥವಿದೆ. ಇದನ್ನು ಪಾಳೆ ಪಾಂಡವರ ತೀರ್ಥವೆಂತಲೂ ಕರೆಯುವರು. ಉತ್ತರಕ್ಕೆ ರಾಮತೀರ್ಥ, ಈ ತೀರ್ಥಗಳ ವಿಶೇಷವೆಂದರೆ ಇವುಗಳ ಸುತ್ತಲೂ ರಾಮಾಯಣ, ಮಹಾಭಾರತಗಳ ಪೌರಾಣಿಕ ಕಥನಗಳ ಕೆತ್ತನೆ ಇದೆ. ಪಾಂಡುತೀರ್ಥದಿಂದ ರಾಮತೀರ್ಥವನ್ನು ಬಳಸಿ ಹಾಗೆ ಮುಂದಕ್ಕೆ ನಡೆದರೆ, ಊರ ಹೊರಗೆ ಲಕ್ಷ್ಮಣ ತೀರ್ಥ ದೊರೆಯುತ್ತದೆ. ಇದರ ಒಂದು ಪಕ್ಕದಲ್ಲಿ ಭದ್ರಪ್ಪಯ್ಯನ ಮಠವಿದ್ದು, ಇಲ್ಲಿಯೇ ಒಂದು ನಟರಾಜ ವಿಗ್ರಹವಿದೆ. ಲಕ್ಷ್ಮಣ ತೀರ್ಥಕ್ಕೆ ಬರುವ ದಾರಿಯಲ್ಲಿಯೇ ತೀರ್ಥದ ಸಮೀಪವೇ ಒಂದು ಹನುಮಂತ ವಿಗ್ರಹವಿದ್ದು, ಗುಡಿಯಂತೆ ಚಿಕ್ಕದಾಗಿ ನಿರ್ಮಿಸಲಾಗಿದೆ. ಇನ್ನೊಂದು ಪಕ್ಕದಲ್ಲಿ ಲಕ್ಷ್ಮೇಶ್ವರ ಗುಡಿ ಇದ್ದು ಹೂತು ಹೋಗಿದೆ ಎನ್ನಲಾಗುತ್ತದೆ.

ಲಕ್ಷ್ಮಣ ತೀರ್ಥದ ಹತ್ತಿರವೇ ಒಂದು ಪುರುಷ ಹಾಗೂ ಸ್ತ್ರೀ ವಿಗ್ರಹವಿದ್ದು, ಅವುಗಳನ್ನು ಜೇಡರ ದಾಸಿಮಯ್ಯ ಹಾಗೂ ದುಗ್ಗಳೆಯ ವಿಗ್ರಹಗಳೆಂದು ಹೇಳುವರು. ಇದನ್ನು ಗಮನಿಸಿದಾಗ ದಾಸಿಮಯ್ಯನಿಗಿಂತಲೂ ದುಗ್ಗಳೆಯ ವಿಗ್ರಹ ದೊಡ್ಡದಾಗಿದೆ. ಅಂದಿನ ಸ್ತ್ರೀ ಸಮಾನತೆ ಹಾಗೂ ಸ್ತ್ರೀಯನ್ನು ಪೂಜ್ಯ ಭಾವನೆಯಿಂದ ನೋಡುತ್ತಿದ್ದಕ್ಕೆ ಸಾಕ್ಷಿ ಎಂದು ಹೇಳಲಾಗುತ್ತದೆ. ಇದೇ ತೀರ್ಥದ ಪಕ್ಕ ಒಂದು ನಾಗರ ಶಿಲ್ಪವೂ ಇದೆ. ಹಾಲು ತೀರ್ಥ ಹಾಗೂ ಸಕ್ಕರೆ ತೀರ್ಥಗಳು ಮುದನೂರಿನ ಪ್ರಾರಂಭದಲ್ಲಿಯೇ ಸಿಗುತ್ತವೆ ಈ ಎರಡೂ ತೀರ್ಥಗಳು ಮೊದಲು ಹಾಳಾಗಿದ್ದು, ದುರಸ್ಥಿಯ ಸ್ಥಿತಿಯಲ್ಲಿದ್ದವು. ಈಗ ಇವುಗಳನ್ನು ಜೀರ್ಣೋದ್ಧಾರ ಮಾಡಲಾಗಿದೆ. ಇಲ್ಲಿಯೇ ಸ್ವಲ್ಪದೂರ ಮರಳು ತೀರ್ಥದೊರೆಯುತ್ತದೆ. ಮೊದಲು ಸಂಗಮನಾಥ ದೇವಾಲಯವಿದ್ದು, ಈಗ ಇದು ಕಂಡುಬರುವುದಿಲ್ಲ. ಈ ಸಂಗಮನಾಥ ದೇವಾಲಯದ ಬಳಿಯೇ ಸಂಗಮ ತೀರ್ಥವಿದ್ದುದಾಗಿ ತಿಳಿದು ಬರುತ್ತದೆ. ಈ ತೀರ್ಥಗಳಲ್ಲದೆ, ಊರನ್ನು ಇಬ್ಭಾಗವಾಗಿಸುವ ಒಂದು ಚಿಕ್ಕ ಹಳ್ಳ ಹರಿಯುತ್ತದೆ. ಅಷ್ಟೇ ಅಲ್ಲದೆ ಇಲ್ಲಿನ ಭೂಭಾಗ ಸುಣ್ಣದ ಕಲ್ಲಿನಿಂದ ಕೂಡಿದ್ದು, ನೀರಿನ ಸಂಗ್ರಹಕವಾಗಿ ಕಾರ್ಯ ನಿರ್ವಹಿಸುತ್ತದೆ. ಈ ನೀರು ಸಂಗ್ರಹಗೊಂಡು ಚಿಲುಮೆಯಾಗಿ ಉಕ್ಕಿ ಬರುತ್ತದೆ ಎಂದು ಡಾ.ಎಚ್. ಚಂದ್ರಶೇಖರ್ ತಮ್ಮ ಲೇಖನದಲ್ಲಿ ಹೀಗೆ ವಿವರಿಸಿದ್ದಾರೆ.

"ಜೇಡರದಾಸಿಮಯ್ಯನ 'ತವನಿಧಿ' ಒಂದು ಜಲಗೋಳದ ಸುಂದರ ರೂಪಕ concept of hydrological ಎನ್ನುತ್ತಾರೆ. ಶ್ರೀಶೈಲ ಪರಿಸರದಲ್ಲಿ ಒತ್ತಡದ ನೀಡಿನ

ಬಾವಿಯಿದ್ದುದನ್ನು ಲಕ್ಷಿಸಿದ ದಾಸಿಮಯ್ಯನು ತನ್ನ ಪ್ರದೇಶದ ವಿಷಯದಲ್ಲಿ ಕೂಡ ಅಂತಹದೇ ಪರಿಸರವನ್ನು ಸೂಕ್ಷ್ಮವಾಗಿ ಗಮಸಿರಬೇಕು. ಅಲ್ಲಿ ಒತ್ತಡ ಭಾವಿಗಳನ್ನು ತೋಡಿಸಿರಬೇಕು. ಅಲ್ಲಿ ನೀರಿನ ಬುಗ್ಗೆ ಹೊರಹೊಮ್ಮಿ ಬರ ಹಿಂಗಿ, ಅದು ಬತ್ತದ ಭತ್ತದ ಕಣಜವಾಗಿರಬೇಕು. ಜೇಡರ ದಾಸಿಮಯ್ಯ ಅದನ್ನು ಶಿವನಿತ್ತ ದಾಸವೆಂದು ಭಾವಿಸಿರಬೇಕು. ಇಂಥ ವಾಸ್ತವ ಸ್ಥಿತಿಯೇ ಜೇಡರ ದಾಸಿಮಯ್ಯನು ಶಿವನಿಂದ 'ತವನಿಧಿ ಪಡೆದನೆಂಬ ಪವಾಡವಾದ ಕಥೆಗೆ ಆಸ್ಪದ ಮಾಡಿ ಕೊಟ್ಟಿರಬೇಕು ಎನ್ನುತ್ತಾರೆ. ಮುಂದುವರೆದು ಜೇಡರದಾಸಿಮಯ್ಯನು ತಾನೂ ನೀಡಿದ ವಸ್ತ್ರದ ಬದಲಿಗೆ ತವನಿಧಿಯನ್ನು (ಅಕ್ಷಯ ಪಾತ್ರೆ) ನಿಜವಾಗಿಯೂ ಪಡೆದನು ಎಂದು ಬಗೆಯುವುದು ವೈಜ್ಞಾನಿಕ ದೃಷ್ಟಿಗೂ ಕಾಯಕ ತತ್ವಕ್ಕೂ ಹೊಂದುವುದಿಲ್ಲ.... ದಾಸಿಮಯ್ಯ ತನ್ನ ಕಾಯಕದಿಂದ ಮತ್ತು ಪರಿಶ್ರಮದಿಂದ ತನ್ನ ಮನೆಯಲ್ಲಿ ಭತ್ತ(ಧಾನ್ಯ)ದ ಕಣಜವನ್ನು ಸಂಗ್ರಹಿಸಿದ್ದ. ಅದನ್ನು ಜಂಗಮಕ್ಕಾಗಿ ದಾನ ಮಾಡುತ್ತಿದ್ದ ಎಂದು ಅರ್ಥೈಸಬಹುದು. ಇಂಥ ಅಕ್ಷಯವೆನಸಬಹುದಾದ ಧಾನ್ಯದ ರಾಶಿಯು ಮುಂದಿನ ಪೀಳಿಗೆಯಲ್ಲಿ 'ತವನಿಧಿ' ರೂಪವನ್ನು ಪಡೆಯಿತು.... ಮುದನೂರಿನ ಜಲ ಭೂ ವೈಜ್ಞಾನಿಕ ಅಧ್ಯಯನ ಮಾತ್ರ. ಈ ತವನಿಧಿ-ಅಲ್ಲಿರುವ ಅಕ್ಷಯ ಅಂತರ್ಜಲ ಸಂಪತ್ತು ಸೂಚಿಸುತ್ತಿದೆ.[೧] ಹೀಗೆ ತವನಿಧಿಯ ಕಲ್ಪನೆಯನ್ನು ಅಲ್ಲಿನ ಜಲಗೋಳವನ್ನಾಧರಿಸಿ ವಾಸ್ತವದ ನೆಲೆಗಟ್ಟಿನಲ್ಲಿ ನೋಡಬಹುದು.

**ದೇವಾಲಯಗಳು:**

ಮುದನೂರು ಧಾರ್ಮಿಕ ಸ್ಥಳವಾಗಿದ್ದು, ಇಲ್ಲಿ ಅನೇಕ ದೇವಾಲಯಗಳಿವೆ. ಪ್ರಧಾನವಾಗಿ ವೈಷ್ಣವ ಹಾಗೂ ಶೈವ ದೇವಾಲಯಗಳಿರುವುದು ಕಂಡು ಬರುತ್ತದೆ. ಇವುಗಳನ್ನು ಎರಡು ರೀತಿಯಲ್ಲಿ ವಿಭಾಗಿಸಬಹುದು. ಒಂದು ಪ್ರಸ್ತುತವಿರುವ ದೇವಾಲಯಗಳು, ಎಡರನೆಯದು ನಶಿಸಿಹೋಗಿದ್ದು ಶಾಸನಗಳಲ್ಲಿ ದೊರೆಯುವ ಉಲ್ಲೇಖಗೊಂಡ ದೇವಾಲಯಗಳು. ಮುದನೂರು ಮೊದಲು ವೈಷ್ಣವ ನೆಲೆಯಾಗಿದ್ದು ನಂತರ ಶೈವೀಕರಣಗೊಂಡಿರಬೇಕು. ಇದಕ್ಕೆ ಇತಿಹಾಸದಲ್ಲಿ ಹಲವು ಕುರುಹುಗಳು ದೊರೆಯುತ್ತವೆ. ಮುದನೂರಿನಲ್ಲಿ ದೇವಾಲಯಗಳು ಇಂತಿವೆ:

**ರಾಮೇಶ್ವರ/ರಾಮನಾಥ ದೇವಾಲಯ:**

ರಾಮೇಶ್ವರ ದೇವಾಲಯವು ಪುರಾಣ ಪ್ರಸಿದ್ಧವಾದುದು. ಜೇಡರ ದಾಸಿಮಯ್ಯನ ಅಸ್ತಿತ್ವ ಹಾಗೂ ಬೆಳವಣಿಗೆ ಈ ರಾಮೇಶ್ವರನಿಂದಲೇ ಎನ್ನಲಾಗುತ್ತದೆ. ರಾಮನಾಥ ದೇವಾಲಯವು ಪೂರ್ವಾಮುಖವಾಗಿದೆ. ಇದು ದ್ವಿಕೂಟ ದೇವಾಲಯವಾಗಿದ್ದು, ಗರ್ಭಗೃಹದಲ್ಲಿ ರಾಮನಾಥನ ಲಿಂಗವಿದೆ. ಇತ್ತೀಚೆಗೆ ಜೇಡರದಾಸಿಮಯ್ಯನ ಮೂರ್ತಿಯನ್ನು ಪ್ರತಿಷ್ಠಾಪಿಸಲಾಗಿದೆ. ಮುದನೂರಿನ ರಾಮನಾಥ ದೇವರು ದೇವಾಂಗ ಮಹರ್ಷಿಯ ಐಕ್ಯಸ್ಥಳ; ಲಿಂಗರೂಪ ಎಂದು ಹೇಳಲಾಗುತ್ತದೆ. ರಾಮನಾಥ ದೇವಾಲಯದೊಂದಿಗೆ ಮುದನೂರಿನಲ್ಲಿ **ಚೌಡೇಶ್ವರಿಗುಡಿ, ಸಿದ್ದಲಿಂಗ ಗುಡಿ, ಭದ್ರಪ್ಪಯ್ಯ ದೇವಸ್ಥಾನ, ಲಕ್ಷ್ಮಿದೇವಿ ಗುಡಿ** ಮೊದಲಾದವು ಕಂಡುಬರುತ್ತವೆ.

**ಶಾಸನಗಳು:**

ಮುದನೂರಿನಲ್ಲಿ ಒಟ್ಟು ದೊರೆಯುವುದು ೧೮ ಶಾಸನಗಳು[೨] ಎಂದು ಡಾ. ಹನುಮಾಕ್ಷಿ ಗೋಗಿ ಮತ್ತು ಡಾ. ಬಿ. ಆರ್. ಹಿರೇಮಠ ಅವರ ಅಧ್ಯಯನದಿಂದ



ತಿಳಿಯುತ್ತದೆ. ಆದರೆ ಮುದನೂರಿನಲ್ಲಿ ಒಟ್ಟು ೨೧ ಶಾಸನಗಳಿವೆ[೩] ಎಂದು ಡಿ. ಎನ್. ಅಕ್ಕಿ ಅವರು ಹೇಳುತ್ತಾರೆ. ಅವರು ಕೊಡುವ ವಿವರಣೆ ಹೀಗೆದೆ:

"ಕಲ್ಯಾಣ ಚಾಲುಕ್ಯರ ದೊರೆ ತ್ರಿಭುವನಮಲ್ಲ ಬಿರುದಾಂಕಿತ ಆರನೆಯ ವಿಕ್ರಮಾದಿತ್ಯನ ಕಾಲದ ಕ್ರಿ.ಶ ೧೦೯೩, ೧೦೯೯, ೧೧೦೦, ೧೧೦೫ ಹಾಗೂ ೧೨ನೇ ಶತಮಾನದ ೨ ಶಾಸನಗಳು ಒಟ್ಟು ಆರು ಶಾಸನಗಳಲ್ಲದೇ ಭೂಲೋಕಮಲ್ಲ, ಸೋಮೇಶ್ವರನ ಕಾಲದ ಕ್ರಿ.ಶ ೧೧೨೯, ೧೧೪೦ ರ ಎರಡು ಶಾಸನಗಳು, ಇಮ್ಮಡಿ ಜಗದೇಕ ಮಲ್ಲನ ಕ್ರಿ.ಶ ೧೧೪೬, ೧೧೫೪ ರ ಎರಡು ಶಾಸನಗಳು, ಕ್ರಿ.ಶ೧೧೮೦ರ ಮೂರನೆಯ ತೈಲಪ ತ್ರೈಲೋಕ್ಯಮಲ್ಲನ ಒಂದು ಶಾಸನ ಇವು ಕಲ್ಯಾಣ ಚಾಲುಕ್ಯರ ಕಾಲದವುಗಳಾದರೆ, ಕಳುಚೂರಿನ ದೊರೆಗಳಾದ ಬಿಜ್ಜಳನ ಕ್ರಿ.ಶ ೧೧೬೭, ಸೋವಿದೇವನ ಕ್ರಿ.ಶ ೧೧೭೫ ರ ಅಹವಮಲ್ಲನ ಕ್ರಿ.ಶ ೧೧೮೨ ರ ಇವರ ಮೂರು ಶಾಸನ, ಸಿಂಗಣನ ಕ್ರಿ.ಶ ೧೧೧೨ರ ಮೂರು ಶಾಸನಗಳು, ೧೨ನೇ ಶತಮಾನದ ೪ ಶಾಸನಗಳು, ೧೨ನೇ ಶತಮಾನದ ಒಂದು ಶಾಸನ, ಒಟ್ಟು ೨೧ ಶಾಸನಗಳು (ಚಿಕ್ಕಮುದನೂರಿನಲ್ಲಿ ೧೦, ಹಿರೇಮುದನೂರಿನಲ್ಲಿ ೧೧) ಮುದನೂರು ಗ್ರಾಮದಲ್ಲಿ ಲಭ್ಯವಾಗಿದೆ.[೪]

**ಜಾತ್ರಾ ಮಹೋತ್ಸವ:**

ಮುದನೂರಿನಲ್ಲಿ ವರ್ಷಕ್ಕೊಮ್ಮೆ ಜಾತ್ರೆ ನಡೆಯುತ್ತದೆ. ಈ ಜಾತ್ರೆಯ ವಿಶೇಷತೆಯೆಂದರೆ, ಇದನ್ನು ದೇವರ ದಾಸಿಮಯ್ಯ ಜಾತ್ರೆ ಎಂದೇ ಕರೆಯಲಾಗುತ್ತದೆ. ಲೇಖಕ ಎಚ್. ಎಸ್. ಬೇನಾಳವರು ಹೇಳುವಂತೆ ಇದು 'ರಾಮನಾಥ' ದೇವರ ಜಾತ್ರೆ. ಮುಂದೆ ಅದು 'ದೇವರ ದಾಸಿಮಯ್ಯ'ನ ಜಾತ್ರೆಯೆಂದೇ ಪ್ರಸಿದ್ಧವಾಗಿ ಈಗಲೂ ಹಾಗೇ ಕರೆಯಲ್ಪಡುತ್ತಿದೆ ಎನ್ನುತ್ತಾರೆ.

ಅಲ್ಲಿನ ಊರಿನ ಹಿರಿಯರು ಮೊದಲು ಯಾವುದೇ ಜಾತ್ರೆ ಆಚರಣೆಗಳಿರಲಿಲ್ಲ, ವಚನಕಾರ 'ದೇವರ ದಾಸಿಮಯ್ಯ' ನಮ್ಮ ಊರಿನವನು ಎಂದು ತಿಳಿಯಿತು. ನಂತರ ಈ ಬಗ್ಗೆ ಸಂಶೋಧನೆ ಮಾಡಲು ವಿದ್ವಾಂಸರು ಊರಿಗೆ ಬಂದು ಹೋಗಲು ಪ್ರಾರಂಭಿಸಿದರು. ಆಗ ಈ ಸ್ಥಳದ ಮಹತ್ವ ತಿಳಿಯಿತು. ನಂತರ ೧೯೬೧ ರಲ್ಲಿ ಷಡಕ್ಷರನ ದೇವರ ದಾಸಿಮಯ್ಯ ಪುರಾಣವನ್ನು ಓದಲು ಊರಿನ ಹಿರಿಯರು ಸೇರಿ ನಿರ್ಧರಿಸಿ ಪ್ರಾರಂಭಿಸಿದರು. ಇದು ವರ್ಷಕ್ಕೊಮ್ಮೆ ಹದಿನೈದು ದಿನಗಳ ಕಾಲ ನಡೆಯುತ್ತಿತ್ತು. ನಂತರ ಜಾತ್ರೆ ನಡೆಸಬೇಕೆಂದು ನಿರ್ಧರಿಸಿ, ಕ್ರಿ.ಶ ೧೯೭೧-೭೨ರ ನಂತರ ಜಾತ್ರೆಯನ್ನು ಪ್ರಾರಂಭಿಸಲಾಯಿತು ಎನ್ನುತ್ತಾರೆ.

ಯುಗಾದಿಯ ನಂತರ ದಶಮಿಗೆ ಈ ಜಾತ್ರೆ ನಡೆಯುತ್ತದೆ. ಯುಗಾದಿ ಅಮವಾಸ್ಯೆಯಾಗಿ ಐದನೇ ದಿನ ಜೇಡರದಾಸಿಮಯ್ಯನ ಜಯಂತ್ಯೋತ್ಸವ, ನಂತರ ದಶಮಿಗೆ ಜಾತ್ರೆ. ಇಲ್ಲಿನವರು ಹೇಳುವಂತೆ ಮೊದಲೆಲ್ಲಾ ಕೇವಲ ಪುರಾಣಪಠಣ ಮಾಡಿ ತೇರನ್ನು ಎಳೆಯಲಾಗುತ್ತಿತ್ತು. ಮುದನೂರು ಬಿ. (ಹಿರೇಮುದನೂರು) ಯಿಂದ ಮುದನೂರು ಕೆ. (ಚಿಕ್ಕಮುದನೂರು) ಯ ಪಾದಗಟ್ಟೆಯ ವರೆಗೂ ತೇರನ್ನು ಎಳೆದು ತಂದು ಮರಳಿ ದೇವಸ್ಥಾನದವರೆಗೆ ತೆಗೆದುಕೊಂಡು ಹೋಗಲಾಗುತ್ತದೆ.

ಈ ಜಾತ್ರೆಯ ವಿಶೇಷತೆಯೆಂದರೆ ಇಲ್ಲಿ ಹದಿನೈದು ದಿನದವರೆಗೆ ಜಾತ್ರೆ ನಡೆಯುತ್ತದೆ. ಈ ಹದಿನೈದು ದಿನಗಳ ಕಾಲ ಪುರಾಣಪಠಣವಾಗುತ್ತದೆ. ನಂತರ

ಕೊನೆಯ ದಿನ ತೇರನ್ನು ಎಳೆಯಲಾಗುವುದು ಎನ್ನುತ್ತಾರೆ. ಇತ್ತೀಚಿಗೆ ೨೦೦೨ ರಲ್ಲಿ ಒಂದು ಟ್ರಸ್ಟನ್ನು ನಿರ್ಮಿಸಿಕೊಂಡು 'ದೇವರ ದಾಸಿಮಯ್ಯ ವಿಚಾರ ವೇದಿಕೆ'ಯ ಮೂಲಕ ದಾಸಿಮಯ್ಯನ ಜಾತ್ರೆಯ ಸಮಯದಲ್ಲಿ ಆತನ ವಚನಗಳನ್ನು ಮತ್ತು ಜೀವನವನ್ನು ಕುರಿತ ಉಪನ್ಯಾಸ ಕಾರ್ಯಕ್ರಮ ನಡೆಸಲಾಗುತ್ತಿದೆ. ಈ ಜಾತ್ರಾಮಹೋತ್ಸವದಲ್ಲಿ ಊರಿನ ಎಲ್ಲರೂ, ಯಾವುದೇ ಜಾತಿ, ಧರ್ಮಗಳ ಅಂತರವಿಲ್ಲದೇ ಈ ತೇರಿನಲ್ಲಿ ಭಾಗವಹಿಸುತ್ತಾರೆ. ಸುರಕ್ಷತೆಯ ದೃಷ್ಠಿಯಿಂದ ಊರಿನ ಒಬ್ಬ ಗೌಡರ ಮನೆಯಲ್ಲಿ ತೇರನ್ನು ಇಡಲಾಗಿತ್ತು. ಇತ್ತೀಚಿಗೆ ಮತ್ತೆ ಅದನ್ನು ದೇವಾಲಯದ ಅಧೀನಕ್ಕೆ ನೀಡಲಾಗಿದೆ. ದಾಸಿಮಯ್ಯನ ಕುರಿತು ವೈಚಾರಿಕ ಆಚರಣೆಗಳು ಮುದನೂರಿನಲ್ಲಿ ನಡೆಯುತ್ತಿರುವುದು ಸೋಜಿಗ ಜಾತ್ರಾಮಹೋತ್ಸವದ ಅಂಗವಾಗಿ 'ದೇವರದಾಸಿಮಯ್ಯ ಪ್ರಶಸ್ತಿ' ಹಾಗೂ 'ತವನಿಧಿ' ಪ್ರಶಸ್ತಿಗಳನ್ನು ನೀಡಲಾಗುತ್ತಿದೆ.

ಮುದನೂರಿನ ಜಾತ್ರೆಗೆ ಮೊದಲು ದೇವಾಂಗ ಸಮಾಜದ ಜನರು ಹತ್ತಿರದ ಕಮಲಾಪುರದಿಂದ ಬರುತ್ತಿದ್ದರು. ಇತ್ತೀಚಿಗೆ ಕಮಲಾಪುರದಲ್ಲಿಯೇ ಒಂದು ದಾಸಿಮಯ್ಯನ ದೇವಸ್ಥಾನ ನಿರ್ಮಿಸಿ, ಅಲ್ಲಿಯೂ ಜಾತ್ರಾಮೋತ್ಸವವನ್ನು ಆಚರಿಸಲಾಗುತ್ತಿದೆ. ಅಷ್ಟೇ ಅಲ್ಲದೇ ಜಮಖಂಡಿ ಮೊದಲಾದೆಡೆಗಳಲ್ಲಿ ದಾಸಿಮಯ್ಯನ ದೇವಸ್ಥಾನಗಳನ್ನು, ಶಿಲಾಮೂರ್ತಿಗಳನ್ನು ನಿರ್ಮಿಸಲಾಗಿದೆ.

**ಮುದನೂರಿನ ವಾಸಸ್ಥರು:**

ಜನಾಂಗೀಯವಾಗಿ ನೋಡುವುದಾದರೆ ಮುದನೂರಿನಲ್ಲಿ ಲಿಂಗಾಯತ ರೆಡ್ಡಿಗಳ ಜನಸಂಖ್ಯೆ ಹೆಚ್ಚಾಗಿದ್ದು, ತದನಂತರ ಕುರುಬರು ಕಬ್ಬಲಿಗರು, ಮುಸಲ್ಮಾನರು, ಹರಿಜನರು ಕ್ರಮವಾಗಿ ಜನಸಂಖ್ಯೆಯ ದೃಷ್ಟಿಯಿಂದ ಕಂಡುಬರುತ್ತಾರೆ. ಇನ್ನುಳಿದ ಜನಾಂಗಗಳು ಕಡಿಮೆ ಸಂಖ್ಯೆಯಲ್ಲಿದ್ದಾರೆ. ವಿಶೇಷವೆನಿಸುವುದೇನೆಂದರೆ, ಜೇಡರ ಅಥವಾ ನೇಯ್ಗೆ ಜನಾಂಗದ ಒಂದೇ ಕುಟುಂಬ ಮುದನೂರಿನಲ್ಲಿ ಕಂಡು ಬರುತ್ತದೆ. ಈ ಕುಟುಂಬ ದಾಸಿಮಯ್ಯನ ವಂಶಸ್ಥರೆಂದು ಹೇಳಿಕೊಳ್ಳುತ್ತಾರಾದರೂ ಯಾವುದೇ ಸ್ಪಷ್ಟತೆ ಕಂಡು ಬರುವುದಿಲ್ಲ. ವೃತ್ತಿಯಿಂದ ದಾಸಿಮಯ್ಯ ನಮ್ಮವ ಎನ್ನುವ ಪರಿಪಾಟ ಬರುತ್ತದೆ ಎಂದು ಅಲ್ಲಿನ ಸ್ಥಳೀಯರು ವಿವರಿಸುತ್ತಾರೆ.

**ದೇವಾಲಯಗಳ ವಿರೂಪತೆ ಹಾಗೂ ಜನ ಜೀವನ:**

ಮುದನೂರಿನ ಅನೇಕ ದೇವಾಲಯಗಳು, ರಾಮನಾಥ ದೇವಾಲಯವನ್ನೊಳಗೊಂಡು ಜನ ಜೀವನದಲ್ಲಿ ಹಾಸುಹೊಕ್ಕಾಗಿವೆ. ದೇವಾಲಯದ ಗೋಡೆಗಳಿಗೆ ಹೊಂದಿಕೊಂಡಂತೆ ಮನೆಗಳನ್ನು ಇಲ್ಲಿ ಕಟ್ಟಿಕೊಳ್ಳಲಾಗಿದೆ. ಮನೆಗಳ ಒಳಗೆ ದೇವಾಲಯಗಳ ಅವಶೇಷಗಳು ಕಂಡು ಬರುತ್ತವೆ. ಇದರಿಂದ ದೇವಾಲಯದ ಗೋಡೆಗಳು, ಕೆತ್ತನೆಗಳು ನಾಶವಾಗುವ ಪರಿಸ್ಥಿತಿ ತಲೆದೋರಿದೆ.

ಇದಕ್ಕೆ ಸಂಬಂಧಿಸಿದ ಇಲಾಖೆಯವರು ಹೀಗೆ ದೇವಾಲಯಗಳಿಗೆ ಹೊಂದಿಕೊಂಡತೆ ಇರುವ ಮನೆಯವರನ್ನು ಖಾಲಿಮಾಡಿಸಿ, ಊರಿನ ಒಂದು ಬದಿಗೆ ಸ್ಥಳ ನೀಯೋಜಿಸಿದ್ದಾರೆ. ಆದರೆ ಅದು ಕಾರ್ಯರೂಪಕ್ಕೆ ಬರುವುದು ತಡವಾಗುತ್ತಲಿದೆ. ಹೀಗೆ ಮುದನೂರು ಹಲವು ವಿಶೇಷತೆಗಳನ್ನೂ ಹೊಂದಿದ್ದರೂ ಸೌಲಭ್ಯಗಳ ಕೊರತೆಗಳನ್ನು ಹೊಂದಿದ್ದು ತನ್ನ ವೈಶಿಷ್ಟ್ಯವನ್ನು ಉಳಿಸಿಕೊಂಡು ಬಂದಿದೆ. ದಾಸಿಮಯ್ಯನ



ಪುಣ್ಯನೆಲ ಎಂದೇ ಹೆಸರಿಸಲ್ಪಡುತ್ತಿದೆ. ಆದರೆ ಅವಶೇಷಗಳ ದೃಷ್ಠಿಯಿಂದ ನಶಿಸಿಹೋಗುತ್ತಿದ್ದು, ಜೀರ್ಣೋದ್ಧಾರ ಕ್ರಿಯೆ ನಡೆಯುತ್ತಿದೆಯಾದರೂ ಸಂಬಂಧ ಪಟ್ಟ ಅಧಿಕಾರಿಗಳು ಇಲಾಖೆಗಳ ಕಾರ್ಯ ಇನ್ನೂ ಪ್ರಭಾವಿಯಾಗಬೇಕಿದೆ.

**ಅಡಿಟಿಪ್ಪಣಿ**

೧. ಡಾ. ಎಚ್. ಚಂದ್ರಶೇಖರ್, ಜಾಡರ ದಾಸಿಮಯ್ಯನ ತವನಿಧಿ ಜಲಗೋಳದ ಸುಂದರ ರೂಪಕ, ಪ್ರಜಾವಾಣಿ, ದೀಪಾವಳಿ ವಿಶೇಷಾಂಕ ೧೯೯೨

೨ ತವನಿಧಿ; ಪುಟ ೫೯

೩ ಡಿ. ಎನ್. ಅಕ್ಕಿ, ಸುರಗಿರಿ; ಪುಟ ೧೯೯

೪ ಅದೇ ಪುಟ

**ಪರಾಮರ್ಶನ ಗ್ರಂಥಗಳು**

೧ ಸಗರನಾಡ ಸೌರಭ, ತಾಲ್ಲೂಕ ಸಾಹಿತ್ಯ ಪರಿಷತ್ತು, ಸುರಪುರ

೨ ಎಚ್.ಎಸ್.ಬೇನಾಳ, ಪ್ರಥಮ ವಚನಕಾರ ಜೇಡರದಾಸಿಮಯ್ಯ

೩. ಪ್ರಜಾವಾಣಿ, ದೀಪಾವಳಿ ವಿಶೇಷಾಂಕ, ೧೯೯೨

೪. ರಮೇಶ್ ಮಾಳ(ಸಂ), ತವನಿಧಿ.

೫. ಸುರಗಿರಿ ಸ್ಮರಣ ಸಂಚಿಕೆ.

೬. ಅನ್ನಪೂರ್ಣ ಜಾಲವಾದಿ, ಶಂಕರ ದಾಸಿಮಯ್ಯ ಪುರಾಣ ಒಂದು ಅಧ್ಯಯನ



# ಸ್ವಪ್ನದ ಅರ್ಥ ಮತ್ತು ಇತಿಹಾಸ

**ಯಲ್ಲಜ್ಜರ ಫಕೀರಪ್ಪ**

---

ಕನಸಿನ ವಿಷಯದಲ್ಲಿ ಯಾರಿಗೆ ತಾನೇ ಕೂತೂಹಲವಿಲ್ಲ. ಎಲ್ಲರಿಗೂ ಕೂತೂಹಲವಿರುವ ವಿಷಯವೇ ಸರಿ. ಬಹಳ ಹಿಂದಿನ ಕಾಲದಿಂದಲೂ, ಮಾನವನು ಈ ವಿಷಯದಲ್ಲಿ ಆಸಕ್ತಿಯನ್ನು ತೋರಿಸುತ್ತಿರುವನು. ಅನಾಗರಿಕ ದೆಸೆಯಲ್ಲಿದ್ದಾಗ, ಕನಸುಗಳಲ್ಲಿ ಕಂಡ ಅಂಶಗಳನ್ನು ಪ್ರತ್ಯಕ್ಷವಾಗಿ ನೋಡಿದ ಅನುಭವಗಳೆಂದೇ ತಿಳಿದಿರುವಂತೆ ರ್‍ಯಾಟ್‌ಕ್ಲಿಪ್ ಎಂಬ ಮನಶ್ಶಾಸ್ತ್ರಜ್ಞನು 'ಕನಸುಗಳ ಚರಿತ್ರೆ' ಎಂಬ ಪುಸ್ತಕದಲ್ಲಿ ವಿವರಿಸಿದ್ದಾನೆ.

ಕನಸುಗಳ ಅನುಭವಗಳಿಗೆ ಅನುಸಾರವಾಗಿ ಅನಾಗರಿಕ ಮಾನವನು ಕೆಲವು ಸಿದ್ಧಾಂತಗಳನ್ನು ಏರ್ಪಡಿಸಿಕೊಂಡನು. ಕನಸನ್ನು ಅರ್ಥ ಮಾಡಿಕೊಳ್ಳಲು ಪ್ರಯತ್ನಪಟ್ಟು, ಪರಲೋಕ, ಆತ್ಮ ಮುಂತಾದ ಅಲೌಕಿಕ ವಿಷಯಗಳಲ್ಲಿ ಅವನಿಗೆ ನಂಬಿಕೆ ಇಟ್ಟಿತೆಂದು ಸಮಾಜಶಾಸ್ತ್ರಕಾರರು ಅಭಿಪ್ರಾಯ ಪಟ್ಟಿದ್ದರು. ಇಷ್ಟೇ ಅಲ್ಲ, ಕನಸುಗಳಲ್ಲಿ ಒಳ್ಳೆಯದು ಕೆಟ್ಟದ್ದನ್ನು ಕಂಡರೆ ಮುಂದೆ ಶುಭಾಶುಭಗಳು ಉಂಟಾಗಬಹುದೆಂದು ತಿಳಿದು, ಕನಸುಗಳಿಗೆ ಅರ್ಥಕಟ್ಟಿಕೊಳ್ಳಲು ಪ್ರಯತ್ನಿಸಿದರು.

ಕಾಲಕ್ರಮೇಣ ಕನಸಿನ ವಿಷಯದಲ್ಲಿ ತಾವು ಮಾಡಿದ ಸಿದ್ಧಾಂತಗಳನ್ನೆಲ್ಲಾ ಒಟ್ಟುಗೂಡಿಸಿ, ಅವುಗಳ ತಳಹದಿಯಾಗಿರುವ ತತ್ವಗಳನ್ನು ಹೊರಗೆಡೆಹಿ, ಸ್ವಪ್ನ ಸಂಬಂಧವಾದ ಗ್ರಂಥಗಳನ್ನು ಕೂಡ ಬರೆದಿಡುತ್ತಿದ್ದರು. ನಮ್ಮ ದೇಶದಲ್ಲಿ ಅತಿ ಪುರಾತನ ಕಾಲದಿಂದಲೂ ಕನಸಿನ ವಿಷಯವಾಗಿ ವಾದವಿವಾದಗಳು ನಡೆಯುತ್ತಲೇ ಬಂದಿವೆ. ಜಗತ್ತನ್ನು ಸ್ವಪ್ನಕ್ಕೆ ಹೋಲಿಸಿ, ಸ್ವಪ್ನವು ಹೇಗೆ ಮಿಥ್ಯೆಯೋ ಹಾಗೆಯೇ ಜಗತ್ತು ಕೂಡ ಮಿಥ್ಯೆಯೆಂದು ಅದ್ವೈತಿಗಳು ವಾದಿಸುವುದನ್ನು ನಾವು ಕೇಳಿದ್ದೇವೆ. ಈ ವಾದವನ್ನು ಖಂಡಿಸುವುದಕ್ಕೋಸ್ಕರ ಉಳಿದೆಲ್ಲ ದಾರ್ಶನಿಕರು ಸ್ವಪ್ನ ವಿಚಾರದಲ್ಲಿ ಹೆಚ್ಚು ವಿಷಯಗಳನ್ನು ತಿಳಿಯಲು ಪ್ರಯತ್ನ ಪಡಬೇಕಾಯಿತು.

ಸ್ವಪ್ನಗಳನ್ನು ಕುರಿತು ಹೇಳುವುದಾದರೆ ಅದು ಮಾನವ ಪ್ರಾಣಿಯ ಮನೋಮಾನಸದ ಆಂತರ್ಯವನ್ನು ವಿಶ್ಲೇಷಿಸುವುದು ಮಾತ್ರವಲ್ಲದೇ ಆದಿ ಅಂತ್ಯವಿಲ್ಲದ ಪ್ರಶ್ನೆಗೆ ಉತ್ತರವನ್ನು ಹುಡುಕಿಕೊಂಡು ಹೋದಂತೆಯೇ ಸರಿ. ಸ್ವಪ್ನ ಎನ್ನುವುದು ಅತ್ಯಂತ ಪ್ರಾಚೀನವಾದ ವೇದ ಉಪನಿಷತ್ತುಗಳ ಕಾಲದಿಂದಲೂ ಒಂದಲ್ಲ ಒಂದು ವಿಧವಾಗಿ ನಂಬಿಕೊಂಡು ಬಂದಿದ್ದರೂ, ಅದನ್ನು ಅತ್ಯಂತ ಗಂಭೀರವಾಗಿ ಪರಿಗಣಿಸಿದ್ದು ಕಳೆದ ಶತಮಾನದಿಂದ ಎನ್ನುವುದು ಸ್ಪಷ್ಟವಾಗಿದೆ. ಸ್ವಪ್ನದ ಬಗ್ಗೆ ಪಾಶ್ಚಾತ್ಯ ಚಿಂತಕರು, ಮನೋವಿಜ್ಞಾನಿಗಳು ಮತ್ತು ತತ್ವಶಾಸ್ತ್ರಜ್ಞರು ಇದರ ಬಗ್ಗೆ ಸಾಕಷ್ಟು ಚಿಂತನೆ ಮಾಡಿದ್ದಾರೆ. ಸ್ವಪ್ನವು ನಮ್ಮ ಮನಸ್ಸಿನ ಲೋಕದಲ್ಲಿ ಘಟಿಸುವ ಜೀವಪ್ರಭೆಯಾಗಿದೆ.

**ಸ್ವಪ್ನದ ಅರ್ಥ ಮತ್ತು ವ್ಯಾಖ್ಯಾನಗಳು:**

ನಾವು ನಿದ್ರಿಸುವಾಗ ನಮ್ಮ ಮನಸ್ಸಿನ ಆಲೋಚನೆಗಳ ಚಿತ್ರರೂಪವೇ 'ಸ್ವಪ್ನ.' ಸ್ವಪ್ನವು ಒಂದು ಜೀವಂತ ಅನುಭವ. ಮನುಷ್ಯನ ದೇಹ, ಮನಸ್ಸು ಹಾಗೂ ಸಂದರ್ಭಗಳ



ನಡುವಿನ ಸಂಬಂಧವೇ 'ಸ್ವಪ್ನ'. ಮೆದುಳು ವಿವಿಧ ಸಂದರ್ಭಗಳಲ್ಲಿ ಕಂಡ ಅಥವಾ ಭಾವಿಸಿಕೊಂಡ ಚಿತ್ರಗಳ ಮರುಪ್ರಸಾರವೇ 'ಸ್ವಪ್ನ'. ನಿದ್ದೆಯ ಕೆಲವು ಹಂತಗಳಲ್ಲಿ ಮನಸ್ಸಿನಲ್ಲಿ ಅನೈಚ್ಛಿಕವಾಗಿ ಸಾಲಾಗಿ ಬರುವ ಚಿತ್ರಗಳ, ಭಾವನೆಗಳ, ಉದ್ವೇಗಗಳ ಹಾಗೂ ಸಂವೇದನೆಗಳ ಸರಣಿಯೇ 'ಕನಸು'. ನಾವೆಲ್ಲರೂ ನದ್ರಾವಸ್ಥೆಯಲ್ಲಿ ಕಾಣುವ ಚಿತ್ರ ಸರಣಿಯೇ ಅಥವಾ ಸಚಿತ್ರ ಕಥನವೇ 'ಕನಸು'. ವ್ಯಕ್ತಿಯ ಹಿಂದೆ ನಡೆದ ಘಟನೆಯ ನೆನಪಿನ ನೆರಳೇ 'ಸ್ವಪ್ನ' ಎಂದು ಅರ್ಥ. ಕನಸು ದೇವರು ಮನುಷ್ಯರಿಗಿತ್ತ ವರ. ಕನಸು ಮೂಲತಃ ಒಂದು ಅನುಭವ. ಸ್ವಪ್ನವು ವ್ಯಕ್ತಿಯೊಬ್ಬನ ಪ್ರಜ್ಞೆಯ ಒಂದು ನೆಲೆಯಲ್ಲಿ ಪಡೆದಂಥ ಒಂದು ಅನುಭವ. ಕವಿಯನ್ನು ಒಬ್ಬ ಕನಸುಗಾರ ಎಂದು ಹೇಳುತ್ತೇವೆ.

**೧. ಕನ್ನಡ ವಿಶ್ವಕೋಶ:–** ನಿದ್ರೆಯ ಸಮಯದಲ್ಲಿ ಉದ್ಭವಿಸುವ ಭಾವರೂಪ ರಾಗಸರಣಿಯೇ, ನಿದ್ರಿಸುವ ವ್ಯಕ್ತಿಗೆ ನಿಜವೆಂಬಂತೆ ಭಾಸವಾಗುವ ಮಾನಸಿಕ ಪ್ರಕ್ರಿಯೆಯೇ 'ಕನಸು' ಎಂದು ಹೇಳಿದೆ.

**೨. ಕುವೆಂಪು:–** ಸ್ವಪ್ನವು ಜಾಗ್ರದವಸ್ಥೆಯ ಅನುಭವಗಳಿಗೆ ಜಾಗ್ರಜಗತ್ತಿನ ಆಕಾರಗಳನ್ನೇ ಕಲ್ಪಿಸಿದರೆ ಆಗ ಆ ಸೃಷ್ಟಿ ಪ್ರತಿಕೃತಿಯಾಗುತ್ತದೆ ಎಂದು ಹೇಳಿದ್ದಾರೆ.

**೩. ಅರಿಸ್ಟಾಟಲ್:–** ಸುಪ್ತ ಮನಸ್ಸಿನ ಜೀವನವೇ ಸ್ವಪ್ನ ಎಂದಿದ್ದಾರೆ.

**೪. ಪ್ಲೇಟೋ:–** ಪ್ರತಿಯೊಬ್ಬ ಮನುಷ್ಯನಲ್ಲಿಯೂ ವಿವೇಚನಾರಹಿತ, ಪಶುತ್ವ ಹಾಗೂ ಮನೋಭಾವನೆಗಳು ತುಂಬಿರುತ್ತವೆ. ಆ ಭಾವನೆಗಳು ಹಗಲಲ್ಲಿ ಮನುಷ್ಯನ ಮನಸ್ಸಿನಲ್ಲಿ ಅಡಗಿದ್ದು, ರಾತ್ರಿ ನಿದ್ದೆಯ ಕಾಲದಲ್ಲಿ ಕನಸುಗಳ ಮೂಲಕ ಅವಿರ್ಭವಿಸುತ್ತದೆ ಎಂದು ಹೇಳಿದ್ದಾರೆ.

**೫. ಮನೋವಿಜ್ಞಾನಿಗಳ ಪ್ರಕಾರ:–** ವ್ಯಕ್ತಿ ನಿದ್ರಿಸುತ್ತಿರುವಾಗ ಅರೆಚೇತನಕ್ಕೆ ಅರಿವಾಗುವ ಸಿದ್ಧಪಡಿಸಿದ ಕತೆ ಅಥವಾ ಚಿತ್ರರೂಪಕವೇ 'ಕನಸು' ಎಂದು ಹೇಳಿದ್ದಾರೆ.

**೬. ಸಿಗ್ಮಂಡ್ ಫ್ರಾಯ್ಡ್:–** ಕನಸು ಎಂಬುದು ಮಾನವನು ಸಂಸ್ಕರಿಸಿ ತೆಗೆದ ಪ್ರಜ್ಞಾತೀತವಾದ ಮಾನಸಿಕ ಅಭಿವ್ಯಕ್ತಿ. ಅದು ಇದ್ದಕ್ಕಿದ್ದ ಹಾಗೇ ರೂಪುಗೊಂಡ ಒಂದು ಮಾನಸಿಕ ಸ್ವಾತ್ಮಚಿತ್ರ ಎಂದಿದ್ದಾರೆ.

**೭. ಸಿ.ಜೆ.ಯೂಂಗ್:–** ಕನಸು ಕೇವಲ ಮನೋವ್ಯಾಪಾರಕ್ಕೆ ಸಂಬಂಧಿಸಿದ ವಿಕೃತ ಸ್ವಭಾವ ಸ್ವರೂಪದ ಆಶೆ–ಆಶೋತ್ತರಗಳ ಸಂತೃಪ್ತಿಗೊಳಿಸುವ ಸಾಧನವು ಅಲ್ಲ. ಅದು ಮುಖ್ಯವಾಗಿ ಮಾನಸಿಕ ವಿಕಾಸದ ಸಹಜ ರೂಪ ಎಂದಿದ್ದಾರೆ.

**೮. ಸಿಸಿರೋ:–** ಕನಸುಗಳು ಮಾನವನ ದೈನಿಕ ಚಟುವಟಿಕೆಗಳ ಪ್ರತಿಧ್ವನಿಯಾಗಿವೆ ಎಂದು ಹೇಳಿದ್ದಾನೆ.

ಕನಸು ನಮ್ಮ ದೈನಂದಿನ ಬದುಕಿನ ಸಂಬಂಧವನ್ನೇ ಸಂಪೂರ್ಣವಾಗಿ ತ್ಯಜಿಸಿದ್ದಲ್ಲ. ಅದರ ಪ್ರಭಾವದ ಪ್ರತಿಮಾರೂಪಿ ಎಂದು ಅನೇಕ ಬಗೆಯಲ್ಲಿ ವ್ಯಾಖ್ಯಾನಿಸಿದ್ದಾರೆ. ಒಟ್ಟಿನಲ್ಲಿ 'ಕನಸು' ಎಂಬುದು ಜಾಗ್ರತಾವಸ್ಥೆಯ ಅನುಭವಕ್ಕೊಡ್ಡಿದ ಪ್ರತಿಮೆ. ಅಂತೆಯೇ ಆಧುನಿಕ ವಿಜ್ಞಾನಿಗಳು ಕೆಲವರು ಕನಸು ಮನುಷ್ಯ ನಿದ್ರೆಗೈಯುತ್ತಿರುವಾಗ, ಅವನ ಸುಪ್ತಚೇತನವು ಮೂಡಿಸುವ ಒಂದು ಚಿತ್ರ ವೈಚಿತ್ರ್ಯ ಎಂಬ ವ್ಯಾಖ್ಯೆಯೂ ಇದೆ.

ಸಾಧರಣವಾಗಿ ನಾವು ನಮ್ಮ ದೈಹಿಕ ಅಥವಾ ಮಾನಸಿಕ ಶಕ್ತಿ ಸಾಮರ್ಥ್ಯಗಳ ವೈವಿಧ್ಯತೆ, ವಿಸ್ತಾರ ಮತ್ತು ಆಳಗಳ ಬಗ್ಗೆ ತಿಳಿವಳಿಕೆ ಇಲ್ಲದವರಾಗಿರುತ್ತೇವೆ. ಆದರೆ ಇವುಗಳ ಅರಿವು ನಮ್ಮ ಸುಪ್ತ ಮನಸ್ಸಿನಲ್ಲಿರುತ್ತದೆ. ಸುಪ್ತ ಮನಸ್ಸು ಇವುಗಳನ್ನು ಜಾಗೃತಿಗೆ ತರಲು ಕನಸುಗಳ ಮೂಲಕ ಪ್ರಯತ್ನಿಸುತ್ತದೆ. ಹಾಗಾಗಿ ಕನಸುಗಳು ಸಾಂಕೇತಿಕ ಅಥವಾ ಪ್ರತಿಮಾರೂಪದಲ್ಲಿ ಕಂಡುಬರುತ್ತವೆ.

**ಸ್ವಪ್ನದ ಇತಿಹಾಸ**

ಮಾನವನು ನಿದ್ರೆ ಮಾಡಲು ಆರಂಭಿಸಿದಾಗಿನಿಂದ ಅವನನ್ನು ಕನಸುಗಳು ತಮ್ಮ ಭ್ರಮಾಲೋಕದಲ್ಲಿ ಮುಳುಗಿಸುತ್ತಿರಬಹುದು. ಆದರೆ ಭಾಷಾ ಮಾಧ್ಯಮ ಹಾಗೂ ಬರಹ ಮಾಧ್ಯಮಗಳು ಕೇವಲ ಕೆಲವು ಶತಮಾನಗಳ ಹಿಂದೆ ಅಸ್ತಿತ್ವಕ್ಕೆ ಬಂದಿದ್ದರಿಂದ ಹಿಂದಿನ ಮಾನವನ ಕನಸು ಯಾವ ರೀತಿಯಾಗಿದ್ದಿತು ಎಂದು ಹೇಳುವುದು ತುಂಬಾ ಕಷ್ಟ. ಇತಿಹಾಸಕಾರರು ನಡೆಸಿದ ಆಳವಾದ ಅಧ್ಯಯನದಿಂದ ಕನಸುಗಳ ಸ್ವರೂಪಗಳಿಗೆ ಒಂದು ಆಯಾಮ ಕಲ್ಪಿತವಾಯಿತು. ಮುಂದೆ ಅನೇಕ ದಾರ್ಶನಿಕರು, ಮನೋವಿಜ್ಞಾನಿಗಳು ತಮ್ಮದೇ ಆದ ರೀತಿಯಲ್ಲಿ ಕನಸುಗಳ ಸಾಂಕೇತಿಕ ಭಾಷೆಯನ್ನು ಅರ್ಥೈಸುವ ಕಾರ್ಯದಲ್ಲಿ ತಮ್ಮದೇ ಆದ ಸಿದ್ಧಾಂತಗಳನ್ನು ರೂಪಿಸಿದರು.

ಕನಸುಗಳಿಗೆ ಅತ್ಯಂತ ಪ್ರಾಚೀನವಾದ ಇತಿಹಾಸವಿದೆ. ಅಸ್ತಿತ್ವದಲ್ಲಿರುವ ಅತ್ಯಂತ ಹಳೆಯ 'ಕನಸುಗಳ ಪುಸ್ತಕ'ವನ್ನು ಈಜಿಪ್ಟ್‌ನಲ್ಲಿ ಕ್ರಿಪೂ.೨೦೦೦ದಿಂದ ಕ್ರಿಪೂ.೧೭೦೦ನೇ ಇಸವಿಗಳ ನಡುವೆ ಬರೆಯಲಾಯಿತಂತೆ. ಈ ಪುಸ್ತಕದ ಜಂಬೂಕಾಗದದ (ಪಾಪಿರಸ್)ಹಸ್ತಪ್ರತಿ ಬ್ರಿಟಿಷ್ ಮ್ಯೂಸಿಯಂನಲ್ಲಿದೆ. ಆಗಿನ ಕಾಲದಲ್ಲಿ ಕನಸುಗಳ ಸಹಾಯದಿಂದ ಕಳ್ಳನನ್ನು ಹಿಡಿದ ಅನೇಕ ಸಂದರ್ಭಗಳು ಇತಿಹಾಸದಲ್ಲಿ ಸಿಗುತ್ತವೆ. ಆದರೆ ವಿಶ್ವದ ದಾಖಲೆಯಲ್ಲಿರುವ ಮೊತ್ತಮೊದಲ ಅಂತಹ ಘಟನೆ ಎರಡು ಸಾವಿರ ವರ್ಷಗಳ ಹಿಂದೆ ನಡೆಯಿತು. ಆಗ ಗ್ರೀಕ್ ನಾಟಕಕಾರ ಸೋಪೋಕ್ಲಿಸ್‌ನಿಗೆ ಒಂದು ಕನಸು ಬಿದ್ದಿತು. ಅದರಲ್ಲಿ ಹರ್ಕ್ಯುಲಿಸ್ ಸೋಪೋಕ್ಲಿಸ್‌ನಿಗೆ (ಕನಸಿನಲ್ಲಿ) ಕಾಣಿಸಿಕೊಂಡು, ಅವನ ದೇವಸ್ಥಾನದಿಂದ ಚಿನ್ನದ ಪಾನಪಾತ್ರೆಯನ್ನು ಕದ್ದ ಕಳ್ಳನ ಹೆಸರನ್ನು ಹೇಳಿದನಂತೆ.

ಪಾತಾಳದ ಕ್ಷುದ್ರ ದೇವತೆಗಳು ಕನಸುಗಳನ್ನು ಕಳುಹಿಸುತ್ತಾರೆ ಎಂಬುದಾಗಿ ಬ್ಯಾಬಿಲೋನಿಯನ್ನರು ನಂಬಿದ್ದರು. ಬೈಬಲ್ಲಿನ ಮೊದಲ ಪುಸ್ತಕ ಬರೆಯುವುದಕ್ಕೆ ಮುಂಚೆಯೇ ಬ್ಯಾಬಿಲೋನಿಯನ್ನರು ಕನಸುಗಳನ್ನು ದಾಖಲಿಸಿ, ಅವರ ಸಾಂಕೇತಿಕ ವಿವರಣೆಯನ್ನು ವಿಶ್ಲೇಷಿಸುತ್ತಿದ್ದರು ಎಂಬುದಾಗಿ ಉಲ್ಲೇಖಿಸಲಾಗಿದೆ. ಗಿಲ್ಗಮೇಶ್ ಮತ್ತು ಎನ್‌ಕಿಡು ಎಂಬ ಇಬ್ಬರು ಸ್ನೇಹಿತರ ದುರಂತ ಕಥೆಯನ್ನು ಸ್ವಾರಸ್ಯವಾಗಿ ಕೆತ್ತಿರುವ ಪ್ರಾಚೀನ ಫಲಕ ಈಗಲೂ ಅಸ್ತಿತ್ವದಲ್ಲಿದೆ.

ಇನ್ನು ವಿಚಿತ್ರವೆಂದರೆ ಬ್ಯಾಬಿಲೋನಿಯಾದ ಜನರು ತಮಗೆ ಬೀಳುವ ಕನಸುಗಳ ಮಾರ್ಗದರ್ಶನದಿಂದ ದೈನಂದಿನ 'ಮಖಿರ್' ಎಂಬುದಾಗಿ ಕರೆಯಲ್ಪಡುತ್ತಿದ್ದ ಆ ದೇವಸ್ಥಾನದ ಅರ್ಚಕರು. ಆ ದೇವತೆಯ ಭಕ್ತರಿಗೆ ಅವರ ಕನಸುಗಳ ಅರ್ಥವನ್ನು ವಿವರಿಸಿ ಹೇಳುತ್ತಿದ್ದರು. ಆದರೆ ಕನಸುಗಳು ಸತ್ತವರಿಂದ ಬಂದ ದೈವ ಸಂದೇಶಗಳು ಎಂಬುದಾಗಿ ಈಜಿಪ್ಟ್ ನಾಗರಿಕರು ನಂಬಿದ್ದರು. ಪ್ರಾಚೀನ ಈಜಿಪ್ಟ್ ಜನರ ನಂಬಿಕೆಗಳನ್ನೇ ಆಧರಿಸಿದ್ದವು ಎಂಬುದಾಗಿ ದಾಖಲಾತಿ ಹೇಳುತ್ತದೆ. ಕ್ರಿ.ಶ. ೨ನೆಯ ಶತಮಾನದಲ್ಲಿದ್ದ



ರೋಮ್ ದೇಶದ ಅರ್ಟೆಮಿಡೊರೋಸ್ ಆ ಕನಸುಗಳನ್ನು ವಿಶ್ಲೇಷಿಸಿ, ವರ್ಗೀಕರಿಸಿ, ಪ್ರಾಚೀನ ಕನಸುಗಳ ಸಂಪೂರ್ಣ ಮಾಹಿತಿ ಇರುವ ಪುಸ್ತಕವನ್ನು ಬರೆದು ತನ್ನ ಮುಂದಿನ ಪೀಳಿಗೆಗೆ ಬಿಟ್ಟು ಹೋಗಿದ್ದಾರೆ. ಕನಸುಗಳನ್ನು ನಾಲ್ಕು ರೀತಿಯಾಗಿ ವರ್ಗೀಕರಿಸಿಕೊಳ್ಳಬಹುದು.

೧. **ಕನಸುಗಳು:** ಸಂಕೇತಗಳ ಮೂಲಕ ಬಹಿರಂಗವಾದ ಸತ್ಯ ಸಂಗತಿಗಳು

೨. **ದೃಶ್ಯಗಳು:** ಜಾಗೃತ ಸ್ಥಿತಿಯ ಕನಸುಗಳು

೩. **ಭ್ರಮೆ:** ಜಾಗೃತ ಸ್ಥಿತಿಯ ಆಲೋಚನೆಗಳನ್ನು ನಿದ್ರೆಯಲ್ಲಿ ಜ್ಞಾಪಿಸಿಕೊಳ್ಳುವುದು

೪. **ಪ್ರೇತಗಳು:** ಸತ್ತವರ ದರ್ಶನ

ಉತ್ತರ ಆಮೇರಿಕಾದ ಇಂಡಿಯನ್ ಜನಾಂಗದಲ್ಲಿ ಇರೋಕಿಸ್ ಎಂಬ ವ್ಯಕ್ತಿಯಿದ್ದ. ಅವನು ತನ್ನ ಜನಾಂಗದವರ ಅಂತರಾಳದ ಬಯಕೆಗಳಿಗೂ, ಅವರಿಗೆ ಬೀಳುವ ಕನಸುಗಳಿಗೂ ಇರುವ ಸಂಬಂಧಗಳನ್ನು ಗುರುತಿಸಿದ್ದ. ಆಸ್ಟ್ರಿಯಾದ ಪ್ರಸಿದ್ಧ ಮನೋವಿಜ್ಞಾನಿ ಸಿಗ್ಮಂಡ್ ಫ್ರಾಯ್ಡ್ ಸ್ವಪ್ನಗಳ ಬಗ್ಗೆ ಸಿದ್ಧಾಂತಗಳನ್ನು ಮಾಡುವುದಕ್ಕೆ ನೂರು ವರ್ಷಗಳ ಹಿಂದೆಯೇ ಇರೋಕಿಸ್ ತನ್ನ ಸಿದ್ಧಾಂತಗಳನ್ನು ರೂಪಿಸಿದ್ದ.

೧೬೪೯ ರಲ್ಲಿ ಫ್ರಾನ್ಸಿನಲ್ಲಿ ಪಾದ್ರಿಯಾಗಿದ್ದ ಫಾದರ್ ರಾಗೋನಯೋ ಇರೋಕಿಸ್ ಸಿದ್ಧಾಂತಗಳ ಸಾರಾಂಶವನ್ನು ಬರೆದ. ಆಸ್ಟ್ರಿಯಾ ದೇಶದ ಪ್ರಸಿದ್ಧ ಮನೋವಿಜ್ಞಾನಿ ಸಿಗ್ಮಂಡ್ ಫ್ರಾಯ್ಡ್‌ನ ಸಿದ್ಧಾಂತಗಳ ಬಗ್ಗೆ ಅನೇಕ ರೀತಿಯ ವಾದ ವಿವಾದಗಳು ಇಂದಿಗೂ ಪ್ರಚಲಿತವಾಗಿದೆ. ಏನಾದರೂ ಅವರು ಬರೆದ 'ಕನಸುಗಳ ಅರ್ಥ ನಿರ್ಣಯ' (ಇಂಟರ್ ಪ್ರಟೇಶನ್ ಆಫ್ ಡ್ರೀಮ್ಸ್)ಕನಸುಗಳ ವಿಶ್ಲೇಷಣೆಗೆ ಸಂಬಂಧಪಟ್ಟ ಆಕರ ಗ್ರಂಥವಾಗಿ, ಉತ್ಕೃಷ್ಟ ಮನೋವೈಜ್ಞಾನಿಕ ಕೃತಿ ಎನಿಸಿದೆ. ೨೦ನೇ ಶತಮಾನದ ಆದಿಯಲ್ಲಿ ಅಂದರೆ ೧೯೦೦ರಲ್ಲಿ ಸಿಗ್ಮಂಡ್ ಫ್ರಾಯ್ಡ್ (೧೮೫೬–೧೯೩೯) ಲೈಂಗಿಕ ಬಯಕೆಗಳೇ ಕನಸುಗಳ ಮೂಲ ಕಾರಣ ಎಂದು ಸಿದ್ಧಾಂತಿಸಿದ. ಸಾವಿರಾರು ಕನಸುಗಳ ವಿವರಗಳನ್ನು ವಿಶ್ಲೇಷಿಸಿದ ಫ್ರಾಯ್ಡ್. ಆ ಕನಸುಗಳಲ್ಲಿ ಕಂಡುಬರುವ ವಸ್ತುಗಳನ್ನು, ಅಮೂರ್ತ ಭಾವನೆಗಳನ್ನು ೬೫೨ ವಿಧದ ಲೈಂಗಿಕ ಸಂಕೇತಗಳಾಗಿ ವಿಂಗಡಿಸಿದ. ಅಷ್ಟೇ ಅಲ್ಲ, ಯಾವುದೇ ವ್ಯಕ್ತಿಯ ಕನಸುಗಳು ಅವನ ಬಾಲ್ಯದ ದಿನಗಳ ನೆನಪಿಗೆ ಸಂಬಂಧ ಪಟ್ಟಿರುತ್ತವೆ ಎಂಬುದಾಗಿ ಸಿಗ್ಮಂಡ್ ಫ್ರಾಯ್ಡ್ ಹೇಳಿದ್ದಾನೆ.

ಪ್ರಸಿದ್ಧ ಮನೋವಿಜ್ಞಾನಿ ಆಲ್ಫ್ರೆಡ್ ಆಡ್ಲರ್, ಕನಸುಗಳು ಜೀವನದ ಸ್ವಾಭಾವಿಕ ಕ್ರಿಯೆಯಾದರೂ, ಅವು ಭೂತಕಾಲಕ್ಕಿಂತ ಹೆಚ್ಚಾಗಿ ಭವಿಷ್ಯತ್ತಿನಲ್ಲಿ ನಡೆಯುವ ಘಟನೆಗಳಿಗೆ ಹೆಚ್ಚು ಸಂಬಂಧ ಹೊಂದಿರುತ್ತವೆ ಎಂಬುದಾಗಿ ಸಿದ್ಧಾಂತಿಸಿದ. ನಮ್ಮ ಜೀವನದಲ್ಲಿ ಮುಂದೆ ನಡೆಯುವ ಘಟನೆಗಳಿಗೆ ಪೂರಕವಾಗಿ ನಮ್ಮ ಮನೋಭಾವನೆಗಳನ್ನು ಕನಸಿನಲ್ಲಿ ರೂಪಿಸಿಕೊಳ್ಳುತ್ತೇವೆ. ಅಷ್ಟೇ ಅಲ್ಲ, ಆ ಘಟನೆಗಳ ಪರಿಣಾಮಗಳನ್ನು ಎದುರಿಸಲು ಬೇಕಾದ ಮನೋವೃತ್ತಿಯನ್ನು ನಮ್ಮಲ್ಲಿ ಶೇಖರಿಸಿಕೊಳ್ಳುತ್ತೇವೆ ಎಂಬುದಾಗಿ ಆಡ್ಲರ್ ಹೇಳಿದ. ಆಡ್ಲರ್ ಫ್ರಾಯ್ಡ್‌ನ ಸಿದ್ಧಾಂತವನ್ನು ಮತ್ತು ತತ್ವವನ್ನು ಒಪ್ಪಲಿಲ್ಲ ಕನಸುಗಳು ನಮ್ಮ ಜೀವನದ ಎಷ್ಟೋ ಸಮಸ್ಯೆಗಳಿಗೆ ಪರಿಹಾರ ದೊರಕಿಸಿಕೊಡುತ್ತದೆ ಎಂಬುದಾಗಿ ಆಡ್ಲರ್ ಹೇಳಿದ. ನಾವು ನಮ್ಮ ಜೀವನದಲ್ಲಿ ಮೂಡಿದ ಸಮಸ್ಯೆಗಳನ್ನು ಹೇಗೆ

ನಿವಾರಿಸಿಕೊಳ್ಳುತ್ತೇವೆ, ಅದರ ಪರಿಣಾಮಗಳನ್ನು ಹೇಗೆ ನಿಭಾಯಿಸುತ್ತೇವೆ ಎಂಬುದರ ಮೇಲೆ ಕನಸುಗಳು ಅವಲಂಬಿತವಾಗಿರುತ್ತವೆ ಎಂಬುದು ಆಡ್ಲರ್‌ನ ದೃಷ್ಟಿಯಾಗಿತ್ತು. ಕಷ್ಟಗಳು ಬಂದಾಗ ನಿಭಾಯಿಸಿಕೊಳ್ಳುವ ಚಾಕ್ಯಚಕ್ಯತೆ ಇರುವ ಧೈರ್ಯಶಾಲಿಗಳು ಕನಸು ಕಾಣುವುದು ಕಡಿಮೆ ಎಂಬುದು ಆಡ್ಲರನ ಅಭಿಪ್ರಾಯವಾಗಿತ್ತು.

ಜಾಗೃತ ಸ್ಥಿತಿಯಲ್ಲಿದ್ದಾಗ ನಾವು ಮುಚ್ಚಿಟ್ಟುಕೊಂಡ ತಪ್ಪುಗಳು ಹಾಗೂ ದೌರ್ಬಲ್ಯಗಳು ಪ್ರಜ್ಞಾರಹಿತ ಸ್ಥಿತಿಯ ಮನಸ್ಸಿನಿಂದ (ಅನ್‌ಕಾನ್‌ಷಸ್ ಮೈಂಡ್) ಉಪಜಾಗೃತ ಸ್ಥಿತಿಯ ಮನಸ್ಸಿಗೆ (ಸಬ್‌ಕಾನ್‌ಷಸ್ ಮೈಂಡ್) ಗುಪ್ತಗಾಮಿನಿಯಾಗಿ ಹರಿದು, ಕನಸುಗಳಲ್ಲಿ ಅವಿರ್ಭೂತವಾಗುತ್ತದೆ. ಆ ಕನಸುಗಳ ವಿವರಗಳಿಂದ ದೌರ್ಬಲ್ಯವನ್ನು ಹತ್ತಿಕ್ಕಿ ಮುಂದುವರೆಯುವ, ಗುರಿ ಸಾಧಿಸುವ ನಂಬಿಕೆ ಬರುವ ಸಾಧ್ಯತೆ ಇರುತ್ತದೆ.

**ಪರಾಮರ್ಶನ ಗ್ರಂಥಗಳು**

೧. ಬಸವಣ್ಣ ಎಂ, ಕನಸಿನ ಕತೆ, ಅಭಿನವ ಪ್ರಕಾಶನ, ಬೆಂಗಳೂರು
೨. ನಾರಾಯಣಶಾಸ್ತ್ರೀ ಎನ್.ಎಸ್, ಕನಸುಗಳು, ಮೈಸೂರು ವಿಶ್ವವಿದ್ಯಾಲಯ ಪ್ರಚಾರೋಪನ್ಯಾಸ ಮಾಲೆ ಪುಸ್ತಿಕೆ, ಮೈಸೂರು
೩. ಕನ್ನಡ ವಿಶ್ವಕೋಶ ಸಂಪುಟ ೩, ಮೈಸೂರು ವಿಶ್ವವಿದ್ಯಾಲಯ, ಮೈಸೂರು
೪. ಕೈವಾರ ಗೋಪಿನಾಥ, ಕನಸುಗಳ ಜಗತ್ತು, ವೈದ್ಯನಾಥೇಶ್ವರ ಪ್ರಕಾಶನ, ಮೈಸೂರು
೫. ರಮೇಶ್ ಬಿ. ಗೋ. ನಿಮ್ಮ ಕನಸುಗಳನ್ನು ಅರ್ಥಯಿಸುವುದು ಹೇಗೆ, ಸಪ್ನ ಬುಕ್‌ಹೌಸ್, ಬೆಂಗಳೂರು
೬. ಮರುಳಯ್ಯ ಸಾ. ಶಿ., ಕುವೆಂಪು; ಸ್ವಪ್ನಲೋಕ, ಸಪ್ನ ಬುಕ್‌ಹೌಸ್, ಬೆಂಗಳೂರು



# ಕನ್ನಡ ಸಾಹಿತ್ಯದಲ್ಲಿ ಜಾನಪದ : ಪಕ್ಷಿನೋಟ

ಡಾ. ಎಚ್. ಎ. ಭೋಗಲೆ

ಭಾರತ ದೇಶದಲ್ಲೇ ಕರ್ನಾಟಕದ ಜಾನಪದ ಸಂಸ್ಕೃತಿ ಅತ್ಯಂತ ಶ್ರೀಮಂತವಾಗಿದೆ. ಇದು ಆರಂಭವಾದದ್ದು ಪಾಶ್ಚಾತ್ಯರಿಂದ. ಕಲೆ, ಸಾಹಿತ್ಯ, ನಾಟಕ ಮುಂತಾದ ವಿವಿಧ ಪ್ರಕಾರಗಳನ್ನು ನಮ್ಮ ಕನ್ನಡ ಜನಪದ ಸಂಸ್ಕೃತಿಯಲ್ಲಿ ಕಾಣಬಹುದಾಗಿದೆ. ಸಹಸ್ರಾರು ವರ್ಷಗಳ ಹಿಂದೆ ಪ್ರಪಂಚದಾದ್ಯಂತ ಇದ್ದದ್ದು ಜನಪದ ಸಾಹಿತ್ಯ ಒಂದೇ. ಆಗ ಶಿಷ್ಟ ಮತ್ತು ಜನಪದ ಸಾಹಿತ್ಯಗಳೆಂಬ ಭೇದವಿರಲಿಲ್ಲ. ಸಂಸ್ಕೃತಿಯ ಒಂದು ಭಾಗವಾದ ಜಾನಪದ ಗೀತೆಗಳು ಅತ್ಯಂತ ವೈವಿಧ್ಯಮಯವಾಗಿ ಕನ್ನಡ ನಾಡಿನ ವಿವಿಧ ಪ್ರದೇಶಗಳ ಪ್ರಾದೇಶಿಕ ಸೊಗಡುಗಳನ್ನು ಮುಂದಿನ ಪೀಳಿಗೆಗೆ ಜೋಪಾನವಾಗಿ ತಲುಪಿವೆ. ಜಾನಪದ ಸಾಮಾನ್ಯವಾಗಿ ಅನಕ್ಷರಸ್ಥರ ಜ್ಞಾನವಾಗಿದೆ. ಇದು ಆಡು ಮಾತಿನಲ್ಲಿ ಇರುವಂತಹದು. ಹೀಗಾಗಿ ಜಾನಪದ ಸರಳತೆ ಹಾಗೂ ಸ್ಪಷ್ಟತೆಯಿಂದ ಕೂಡಿದೆ.

ಮನುಷ್ಯನ ಬದುಕಿನೊಂದಿಗೆ ಅವಿನಾಭಾವ ಸಂಬಂಧವನ್ನು ಹೊಂದಿ ತಲೆ ತಲೆಮಾರುಗಳಿಂದ ಬಂದಿರುವ ಮೌಖಿಕ ಪರಂಪರೆಯಲ್ಲಿ ಜಾನಪದ ಸಂಸ್ಕೃತಿ ಮಹತ್ವದ್ದಾಗಿದ್ದು, ಭಾರತವನ್ನು ವಸಾಹತುವನ್ನಾಗಿ ಮಾಡಿಕೊಂಡಿದ್ದ ಬ್ರಿಟಿಷರು ಆಡಳಿತ ಸುಧಾರಣೆಯ ದೃಷ್ಟಿಯಿಂದ ಸ್ಥಳೀಯ ಜನಜೀವನದ ಅಧ್ಯಯನದ ಮೊರೆಹೋಗಿ ಜನಸಾಮಾನ್ಯರನ್ನು ತಲುಪುವ ಯತ್ನವನ್ನು ಮಾಡಿದರು. ಕನ್ನಡದ ಆಚಾರ್ಯ 'ಕನ್ನಡದ ಕಣ್ವ' ಎಂದೇ ಪ್ರಸಿದ್ಧಿಯಾದ ಬಿ.ಎಂ.ಶ್ರೀಯವರು "ಮೊದಲು ಹುಟ್ಟಿದುದು ಜನವಾಣಿ ಅದು ಬೆಳೆದು ಪರಿಷ್ಕೃತವಾಗಿ ವೃದ್ಧಿಯಾದುದು ಕವಿವಾಣಿ. ಜನವಾಣಿ ಬೇರು; ಕವಿವಾಣಿ ಹೂ" ಎಂದಿದ್ದಾರೆ. ಈ ಮಾತು ಜನಪದ ಸಾಹಿತ್ಯದ ಹಿರಿಮೆಯನ್ನು ಸಾರುತ್ತದೆ.

ಜನಪದ ಸಾಹಿತ್ಯ ಜನತೆಯ ಬದುಕಿನಲ್ಲಿ ಸಹಜವಾಗಿ ಉದಿಸಿದ ಸಾಹಿತ್ಯ. ಉದ್ದೇಶಪೂರ್ವಕವಾಗಿ ಸೃಷ್ಟಿಯಾದದ್ದಲ್ಲ. ಅಂದಂದಿನ ದಂದುಗಕ್ಕೆ ಮೈಸೋತು ಮನಸೋತು ತಾನೇ ತಾನಾಗಿ ಸೃಷ್ಟಿಯಾದದ್ದು ಬದುಕಿನೊಡೆಯೇ ಬೆಸೆದುಕೊಂಡು ಬಂದಿರುತ್ತದೆ. ಶಿಷ್ಟ ಸಾಹಿತ್ಯ, ಕನ್ನಡ ಸಾಹಿತ್ಯ ಚರಿತ್ರೆಯ ಉದ್ದಕ್ಕೂ ಜನಪದ ಸಾಹಿತ್ಯದಿಂದ ಸ್ಫೂರ್ತಿ ಮತ್ತು ಸತ್ವಗಳನ್ನು ಪಡೆಯುತ್ತಾ ಸಾಗಿಕೊಂಡು ಬಂದಿದೆ. ಇದನ್ನೇ ಪಂಪನು 'ದೇಸಿಯೊಳ್ ಪುಗುವುದು' ಎಂದು ಹೇಳಿದ್ದಾನೆ.

ಹಳಗನ್ನಡ ಸಾಹಿತ್ಯದಲ್ಲಿ ಜಾನಪದ ದೃಷ್ಟಿಯಿಂದ ಪರಿಭಾವಿಸಿದಾಗ 'ವಡ್ಡಾರಾಧನೆ' ಜಾನಪದದ ಕಣಜವೇ ಸರಿ. ಇಲ್ಲಿಯ ಕಥೆಗಳ ಆರಂಭ, ಬೆಳವಣಿಗೆ, ಮುಕ್ತಾಯಗಳೆಲ್ಲವೂ ಜನಪದ ಕಥೆಗಳ ಶೈಲಿಯನ್ನೇ ಹೋಲುತ್ತವೆ. ಜನಪದ ಸಂಪ್ರದಾಯಗಳು, ಉಡುಗೆ ತೊಡುಗೆಗಳು, ಜನಪದ ವಾದ್ಯಗಳು ಇತ್ಯಾದಿಗಳನ್ನು ಜನಪದ ಅಂಶಗಳು ಒಳಗೊಂಡಿದೆ. 'ಚಾವುಂಡರಾಯನ ಚಾವುಂಡರಾಯ ಪುರಾಣ'ದಲ್ಲಿ ನಿರೂಪಣಾ ಶೈಲಿ, ಕನಸುಗಳು, ನಂಬಿಕೆಗಳು ಮುಂತಾದ ಜಾನಪದೀಯ ಅಂಶಗಳು ಕಾಣಿಸಿಕೊಳ್ಳುತ್ತವೆ.

೧೨ನೇ ಶತಮಾನದಲ್ಲಿ ಕನ್ನಡ ಸಾಹಿತ್ಯಕ್ಕೆ ವಚನ ರೂಪವನ್ನು ಕೊಡುಗೆಯಾಗಿ ನೀಡಿದ ಶಿವಶರಣರು ಜಾನಪದ ಸಂಸ್ಕೃತಿಯಿಂದಲೇ ಉದಿಸಿ ಬಂದವರು. ಕೆಳವರ್ಗಕ್ಕೆ ಸೇರಿದ ಕುಂಬಾರ, ಬೇಡ, ನೇಕಾರ, ಮಡಿವಾಳ ಮೊದಲಾದ ವೃತ್ತಿ ಸಮುದಾಯಗಳಿಂದ ಬಂದ ವಚನಕಾರರು ತಮ್ಮ ಸಂಸ್ಕೃತಿ ಪರಂಪರೆಗಳನ್ನು ತಮ್ಮ ವಚನಗಳಲ್ಲಿ ಕಂಡರಿಸಿದ್ದಾರೆ. ಈ ವಚನಕಾರರ ನಂತರ ಬಂದ ಕೀರ್ತನಕಾರರು ಸಹ ಜನಸಾಮಾನ್ಯರ ನುಡಿಗಟ್ಟುಗಳನ್ನು, ಭಾಷಿಕ ಲಯವನ್ನು, ಸಾಮಾಜಿಕ ಆಚರಣೆಗಳನ್ನು, ನಂಬಿಕೆ ನಡುವಳಿಕೆಗಳನ್ನು ತಮ್ಮ ಕೀರ್ತನಗಳ ಒಳಕ್ಕೆ ತೆಗೆದುಕೊಂಡರು. ಇಲ್ಲಿ ಕನಕದಾಸರು 'ಎಲ್ಲಾರು ಮಾಡುವುದು ಹೊಟ್ಟೆಗಾಗಿ ಗೇಣು ಬಟ್ಟೆಗಾಗಿ' ಎಂದಿದ್ದಾರೆ. ಜೊತೆಗೆ 'ರಾಮಧ್ಯಾನ ಚರಿತೆ' ಕೃತಿ ಜಾನಪದ ಸಂಸ್ಕೃತಿಗಳ ಸಂಘರ್ಷವನ್ನು ತಿಳಿಸಿ ಕೊಡುತ್ತದೆ. 'ಮೋಹನ ತರಂಗಿಣಿ' ಜನಪದ ಸಾಹಿತ್ಯ ಸಂಸ್ಕೃತಿ ವಿಷಯಗಳಿಗೆ ಒಂದು ಪ್ರಮುಖವಾದ ಕೋಶವಾಗಿದೆ.

ರಾಘವಾಂಕನ 'ಹರಿಶ್ಚಂದ್ರ ಕಾವ್ಯ'ದಲ್ಲಿ ಬೇಟೆಯ ವರ್ಣನೆಯನ್ನು ಕಾಣಬಹುದು. ಜನಪದ ಲಯದ ಪ್ರಮುಖ ಛಂದೋರೂಪ ತ್ರಿಪದಿಯನ್ನು ತನ್ನ ವ್ಯಕಿತ್ವದ ಅಭಿವ್ಯಕ್ತಿಯನ್ನಾಗಿ ಮಾಡಿಕೊಂಡು ಕಾವ್ಯ ರಚಿಸಿದವನು ಸರ್ವಜ್ಞ. ಈತನ ವಚನಗಳಲ್ಲಿ ಸಮಕಾಲೀನ ಜನಪದ ಸಂಸ್ಕೃತಿ ಜನಜೀವನದಲ್ಲಿ ಹಾಸುಹೊಕ್ಕಾಗಿದ್ದು ಗಾದೆ, ನಂಬಿಕೆ, ಒಗಟು, ಆಚಾರ ವಿಚಾರಗಳು, ದೈವ ಎಲ್ಲವೂ ಸಮ್ಮಿಳನಗೊಂಡು ಜನಪದರ ಬದುಕಿನ ಆಶೋತ್ತರಗಳ ಕೋಶವಾಗಿ ಪರಿಣಮಿಸಿವೆ.

ಆಧುನಿಕ ಸಾಹಿತ್ಯದಲ್ಲಿ ಗ್ರಾಮೀಣ ಬದುಕಿನ ಆಶಯಗಳನ್ನು ಜಾನಪದದಲ್ಲಿ ಕಾಣಬಹುದಾಗಿದೆ. ಬೇಂದ್ರೆಯವರ 'ಇನ್ನು ಯಾಕ ಬರಲಿಲ್ಲಾ ಹುಬ್ಬಳಿಯಾಂವ' 'ಪಾತರಗಿತ್ತಿ ಪಕ್ಕ' ನೋಡಬಹುದಾಗಿದೆ. ಬೇಂದ್ರೆ ಜನಪದ ಕವಿಯಂದೇ ಹೆಸರಾದವರು. ಜೊತೆಗೆ ಬೆಟಗೇರಿ ಕೃಷ್ಣಶರ್ಮರ 'ನಲ್ವಾಡುಗಳು' ರಂ.ಶ್ರೀ. ಮುಗಳಿಯವರ 'ಜಕ್ಕವ್ವ ಜಾಣೆ' ಕಥನ, ಕೆ. ಎಸ್. ನರಸಿಂಹಸ್ವಾಮಿಯವರ 'ಮೈಸೂರು ಮಲ್ಲಿಗೆ' ಕವನ ಸಂಕಲನದಲ್ಲಿಯ ಒಂದೊಂದು ಭಾವಗೀತೆಯು ಸುಂದರ ಜನಪದ ಗೀತೆಗಳಾಗಿವೆ. ಕುವೆಂಪುರವರ 'ಕಾನೂರು ಸುಬ್ಬಮ್ಮ ಹೆಗ್ಗಡತಿ' ಮತ್ತು 'ಮಲೆಗಳಲ್ಲಿ ಮದುಮಗಳು' ಗ್ರಾಮೀಣ ಪರಿಸರದ ಸಾಮಾಜಿಕ ಸಾಂಸ್ಕೃತಿಕ ವಿವರಗಳನ್ನು ಕಟ್ಟಿಕೊಡುತ್ತವೆ.

ಪಿ. ಲಂಕೇಶರ 'ಅವ್ವ' ಕವಿತೆ ಚಂದ್ರಶೇಖರ ಕಂಬಾರರ 'ಹೇಳತೇನ ಕೇಳ' ಸೋಮಶೇಖರ ಇಮ್ರಾಪೂರ, ಚಂದ್ರಶೇಖರ ಪಾಟೀಲ, ಯಶವಂತ ಚಿತ್ತಾಲ ಮುಂತಾದವರ ಕೃತಿಗಳಲ್ಲಿ ಜಾನಪದ ಅಂಶಗಳನ್ನು ಕಾಣಬಹುದಾಗಿದೆ. ದಲಿತ ಬಂಡಾಯ ಘಟ್ಟದಲ್ಲಿ ಹೊಸ ಅನುಭವ ಲೋಕವೇ ಹುಟ್ಟಿಕೊಂಡಿತು. ಸಿದ್ಧಲಿಂಗಯ್ಯ, ದೇವನೂರು ಮಹಾದೇವ, ಚನ್ನಣ್ಣ ವಾಲೀಕಾರ, ಕಾಳೇಗೌಡ ನಾಗವಾರ ಇನ್ನು ಹಲವಾರು ಗಟ್ಟಿ ಧ್ವನಿಗಳು ಈ ಸಾಹಿತ್ಯ ಪರಂಪರೆಯಲ್ಲಿ ಸಾಹಿತ್ಯ ಕೃಷಿ ಮಾಡಿದರು.

ಇಲ್ಲಿ ಬಂಡಾಯ ಕವಿಗಳು ಜನಪದ ಹಾಡುಗಬ್ಬಗಳನ್ನು ಮುರಿದು ಕಟ್ಟಿ ತಮ್ಮ ಅನುಭವದ ಅಭಿವ್ಯಕ್ತಿಗೆ ಬಳಸಿಕೊಂಡರು. ಸಿದ್ಧಲಿಂಗಯ್ಯನವರ 'ಹೊಲೆಮಾದಿಗರ ಹಾಡು' 'ಸಾವಿರಾರು ನದಿಗಳು' ಚನ್ನಣ್ಣ ವಾಲೀಕಾರರ 'ಕರಿತೆಲಿ ಮಾನವ ಜೀವ', ಬರಗೂರು ರಾಮಚಂದ್ರರ 'ಗುಲಾಮ ಗೀತೆ', ಅರವಿಂದ ಮಾಲಗತ್ತಿಯವರ 'ಮೂಕನಿಗೆ



ಬಾಯಿ ಬಂದಾಗ' ಕೃತಿಗಳು ಜನಪದ ಛಂದಸ್ಸನ್ನು ಪರಿಣಾಮಕಾರಿಯಾಗಿ ದುಡಿಸಿಕೊಂಡು ಬಂದಿದ್ದಾರೆ.

ಒಟ್ಟಿನಲ್ಲಿ ಇಂದು ಯಾವುದೇ ಸಾಹಿತ್ಯದ ಮತ್ತು ಸಂಸ್ಕೃತಿಯ ಮೂಲನೆಲೆ ಜಾನಪದವಾಗಿದ್ದು ಇದಕ್ಕೆ ಜಗತ್ತಿನಾದ್ಯಂತ ಅಗ್ರಸ್ಥಾನವಿದೆ. ಇಲ್ಲಿ ಮನುಷ್ಯನ ಸಂಸ್ಕೃತಿಯ ನೆಲೆಗಳಾದ ಗೀತೆ, ಕಥೆ, ಗಾದೆ, ಒಗಟು, ಲಾವಣಿ, ನಂಬಿಕೆ, ಆಚರಣೆ ಇವೆಲ್ಲವುಗಳನ್ನು ನೋಡಿ ಜಾನಪದದ ಮಹತ್ವ ಎಂತಹುದು ಎಂಬುದನ್ನು ಮನವರಿಕೆ ಮಾಡಿಕೊಳ್ಳಬಹುದಾಗಿದೆ.

**ಗ್ರಂಥ ಋಣ:**

೧) ಹಿರಿಯಣ್ಣ ಅಂಬಳಿಕೆ-ಕರ್ನಾಟಕ ಜಾನಪದ, ೧೯೮೯

೨) ಹಾ.ಮಾ.ನಾ.-ಜಾನಪದ ಸ್ವರೂಪ, ೧೯೭೧

೩) ಡಾ. ಚಕ್ಕೆರೆ ಶಿವಶಂಕರ-ಜಾನಪದ ತಿಳುವಳಿಕೆ, ೨೦೦೮

೪) ಕಾಳೇಗೌಡ ನಾಗವಾರ- ತ್ರಿಪದಿ, ರಗಳೆ ಮತ್ತು ಜನಪದ ಸಾಹಿತ್ಯ-೨೦೧೩.

೫) ಜೀಶಂಪ ಅವರ ಜಾನಪದ ಕೃತಿಗಳು ಒಂದು ಅಧ್ಯಯನ, ಡಾ. ಡ್ಯಾನಿಯಲ್ ಫೆರ್ನಾಂಡಿಸ್ ಎಸ್.ಜೆ, -೨೦೧೧



# ಬರಗೂರರ 'ಸೂರ್ಯ': ದಲಿತ ಸಂವೇದನೆಯ ಅಪೂರ್ವ ಅಭಿವ್ಯಕ್ತಿ

ಲಕ್ಷ್ಮೀಕಾಂತ ಹೂಗಾರ

---

ಬರಗೂರು ರಾಮಚಂದ್ರಪ್ಪನವರ 'ಸೂರ್ಯ' ಮಿನಿ ಕಾದಂಬರಿಯಾಗಿದೆ. ಕೇವಲ ಮೂವತ್ತು ಪುಟಗಳ ವ್ಯಾಪ್ತಿಯುಳ್ಳ ಈ ಕಾದಂಬರಿಯಲ್ಲಿ ಜಮೀನ್ದಾರಿ ವ್ಯವಸ್ಥೆಯ ಮತ್ತು ಜಾತಿವರ್ಗದ ವಿರುದ್ಧ ಸೀತಕ್ಕ ನಡೆಸುವ ಹೋರಾಟ ಬಂಡಾಯದ ಕಥನವಿದೆ. ಜಮೀನ್ದಾರ ಊರಿಗೆಲ್ಲ ನ್ಯಾಯ ಪಂಚಾಯತಿ ಹೇಳುವ ವ್ಯಕ್ತಿ. ಆತನ ಹೆಂಡತಿ ಸೀತಕ್ಕ. ಇವರಿಗೆ ಮಕ್ಕಳಿರಲಿಲ್ಲ. ಹೀಗಾಗಿ ಊರಿನಲ್ಲಿ ರಾಜಕೀಯ ಮಾಡುತ್ತಿದ್ದ ರಾಮಣ್ಣ ಮುಂದೆ ನಾನೇ ಪಂಚಾಯತಿ ತೀರ್ಮಾನ ಹೇಳುವ ವ್ಯಕ್ತಿಯಾಗುತ್ತೇನೆಂದು ಕನಸು ಕಾಣುತ್ತಿದ್ದ. ಜಮೀನ್ದಾರನ ಮನೆಯಲ್ಲಿ ಕರಿಯ ಜೀತಕ್ಕಿದ್ದ. ಕರಿಯ ದಲಿತ ಸಮುದಾಯದವನು. ಅಪ್ಪ ಅಮ್ಮ ಇಲ್ಲದ ಆತ ಅಣ್ಣ, ಅತ್ತಿಗೆ ಮಾರಕ್ಕನ ಆಶ್ರಯದಲ್ಲಿ ಇರುತ್ತಾನೆ. ಕರಿಯನ ಅಕ್ಕ ಕರಿಯಮ್ಮ ತನ್ನ ಮಗಳು ಚೆನ್ನಿಯನ್ನು ಕೊಟ್ಟು ಮದುವೆ ಮಾಡಿದ್ದಳು. ಹೆಂಡತಿ ಚೆನ್ನಿಯೊಂದಿಗೆ ಕರಿಯ ಅನ್ಯೋನ್ಯವಾಗಿದ್ದ. ಆದರೆ ಮಾರಕ್ಕ ಚೆನ್ನಿಯನ್ನು ನಿತ್ಯ ಹಿಂಸಿಸುತ್ತಿದ್ದಳು. ಕರಿಯನಿಗೂ ಇದು ಗೊತ್ತಾಗಿ ಜಮೀನ್ದಾರರಿಗೆ ಹೇಳಿ ಬೇರೆ ಮನೆ ಮಾಡಬೇಕೆಂದು ಆಲೋಚಿಸಿದ್ದ. ಆದರೆ ಒಂದು ದಿನ ರಾತ್ರಿ ಮಾರಕ್ಕ ಕೂಗಿಕೊಂಡು 'ಕರಿಯ ತನ್ನ ಮೇಲೆ ಅತ್ಯಾಚಾರ ಮಾಡಲು' ಬಂದಿದ್ದ ಎಂದು ಪಂಚಾಯತಿ ಕಟ್ಟೆ ಹತ್ತಿದಳು. ಮೊದಮೊದಲು ಕರಿಯ ಮೌನವಾಗಿದ್ದ. ಆದರೆ ಕೆಲವರು ಅವನನ್ನು ಬಡಿಯಲು ಬಂದಾಗ ಆತ ನಾನು ಯಾವ ತಪ್ಪು ಮಾಡಿಲ್ಲ ಎಂದು ಕೂಗಿ ಹೇಳಿದ. ಆದರೆ ಜಮೀನ್ದಾರ ಮಾರಕ್ಕನ ಮಾತನ್ನಷ್ಟೇ ಕೇಳಿ ಕರಿಯನಿಗೆ ಗಡಿಪಾರು ಶಿಕ್ಷೆ ವಿಧಿಸುವ ಮಾತನಾಡಿದರು. ಆಗ ಜಮೀನ್ದಾರರ ಹೆಂಡತಿ ಸೀತಕ್ಕ ಬಂದು, ಈ ತೀರ್ಮಾನ ಸರಿಯಲ್ಲ ಎನ್ನುತ್ತಾಳೆ.

'ಮಾರಕ್ಕನ ಮಾತಾದ್ ಮೇಲೆ ಕರಿಯನ ಮಾತು ಕೇಳಿ ಆಮ್ಯಾಲ್ ಒಂದು ತೀರ್ಮಾನಕ್ಕೆ ಬರ್ಬೇಕು. ಅದು ಬಿಟ್ಟು ಒಬ್ರ ಮಾತಿನ ಮ್ಯಾಲೆ ಹೆಂಗ್ ತೀರ್ಮಾನಿಸುತ್ತೀರಿ?' ಎಂದಳು. ಮುಂದೆ ಸೀತಕ್ಕನೇ ನ್ಯಾಯಪಂಚಾಯತಿ ನಡೆಸಿ, ಕೊನೆಗೆ ಒಂದು ನಿರ್ಣಯ ಕೊಟ್ಟಳು. 'ಇವತ್ತಿನ ಪಂಚಾಯ್ತಿ ತೀರ್ಮಾನ ಅಂದ್ರೆ ಕರಿಯಂದೇನೂ ತಪ್ಪಿಲ್ಲ ಅಂಬ್ತ. ಏನೋ ಗೊತ್ತಿಲ್ದೆ ಕಾಲ್ ತುಳ್ದು ಏನೇನೋ ರಂಪ ಆಗೈತೆ ಅಷ್ಟೆ.' ಈ ತಿರ್ಮಾನ ಕೇಳಿ ಊರ ಜನರೆಲ್ಲ ಮೆಚ್ಚುಗೆ ವ್ಯಕ್ತಪಡಿಸಿದರೆ, ಗೌಡ ಸಿಟ್ಟಿನಿಂದ ಮನೆಯ ಕಡೆ ಹೋದ. ಆಗ ಮಾರಕ್ಕ ಕರಿಯನನ್ನು ಮನೆಯಲ್ಲಿ ಇಟ್ಟುಕೊಳ್ಳುವುದಿಲ್ಲ ಎನ್ನುತ್ತಾಳೆ. ಅದಕ್ಕೂ ಸೀತಕ್ಕ ಪರಿಹಾರ ಹೇಳುತ್ತಾಳೆ. ನಮ್ಮ ದನದ ಕೊಟ್ಟಿಗೆ ಹತ್ತಿರ ಗುಡಿಸಲು ಇದೆ. ಅಲ್ಲಿ ಬಂದು ಇದ್ದು ಬಿಡು ಎನ್ನುತ್ತಾಳೆ.

ಸೀತಕ್ಕ ಮನೆಗೆ ಬಂದಾಗ ಗೌಡ ಅವಳೊಂದಿಗೆ ಜಗಳವಾಡುತ್ತಾನೆ. 'ನಿಂಗ್ ಬೇಕಾದ್ದೆಲ್ಲ ತಂದ್ ಸುರ್ದಿದ್ದೀನಿ ಈ ಮನ್ಯಾಗೆ. ಇನ್ನೇನ್ ಬೇಕು ಅದುನ್ನಾರ ಬೊಗಳು' ಎನ್ನುತ್ತಾನೆ. ಆಗ 'ನಂಗಿನ್ನೇನು ಬ್ಯಾಡ. ಮನ್ಸಿರೊ ಗಂಡ ಬೇಕು, ಮನ್ಸಿರೊ ಮನೆ



ಬೇಕು!' ಎನ್ನುತ್ತಾಳೆ. ಜಮೀನ್ದಾರನ ಮೈತುಂಬ ರೋಗ, ಮನಸಿನ ತುಂಬ ಸಲಗವಾಗಿದ್ದ ಎಂದು ಅವಳು ಭಾವಿಸುತ್ತಾಳೆ. ಅವನಲ್ಲಿ ಪ್ರೀತಿ ಇಲ್ಲ ವಿಶ್ವಾಸ ಇಲ್ಲ. ಸಾವಿರ ವರ್ಷಕ್ಕಾಗುವಷ್ಟು ಸಿಟ್ಟು, ಸೊಕ್ಕು ತುಂಬಿತ್ತು. ಕರಿಯನ ಮೇಲೆ ನಿತ್ಯ ವಿನಾಕಾರಣ ಚಾಟಿ ಏಟು ನೀಡುವುದು ಜಮೀನ್ದಾರನ ಕಾಯಕವಾಗಿತ್ತು. ಕರಿಯ ತನ್ನ ಹೆಂಡತಿಯನ್ನು ಕರೆದುಕೊಂಡು ಜಮೀನ್ದಾರನ ದನದ ಕೊಟ್ಟಿಗೆಗೆ ಬಂದು ನೆಲೆಸುತ್ತಾನೆ. ಸೀತಕ್ಕ ಜಮೀನ್ದಾರನ ಎರಡನೆಯ ಹೆಂಡತಿ. ಮೊದಲನೆಯ ಹೆಂಡತಿ ಸತ್ತು ಹೋಗಿದ್ದಳು. ಹೀಗಿದ್ದರೂ ಜಮೀನ್ದಾರನ ಕಚ್ಚೆಹರುಕನಾಗಿದ್ದ. ಕಂಡ ಕಂಡ ಹೆಂಗಸರನ್ನು ತನ್ನ ಸುಖಕ್ಕೆ ಉಪಯೋಗಿಸುತ್ತಿದ್ದ. ಜಮೀನ್ದಾರನ ಕಚ್ಚೆಹರುಕತನವನ್ನು ಸೀತಕ್ಕ ಯಾವಾಗಲೂ ವಿರೋಧಿಸುತ್ತಿದ್ದಳು. ಇತ್ತೀಚೆಗೆ ಜಮೀನ್ದಾರನಿಗೆ ಮನೆಯಲ್ಲಾಗಲೀ, ಹೊರಗಡೆಯಾಗಲಿ ಹಿಡಿತವಿರಲಿಲ್ಲ. ಮನೆಯಲ್ಲಿ ಸೀತಕ್ಕ ಇವನಿಗೆ ಸಿಡಿದು ನಿಂತಿದ್ದರೆ, ಹೊರಗೆ ರಾಮಣ್ಣ ರಾಜಕೀಯ ಶುರು ಮಾಡಿದ್ದ. ಅವನದೇ ಗುಂಪು ಹಿಂದೆ ಮುಂದೆ ಸುತ್ತಾಡುತ್ತಿತ್ತು. ಬಡವರ ಉದ್ಧಾರ, ಹರಿಜನ ಉದ್ಧಾರ, ಗಿರಿಜನ ಉದ್ಧಾರ ಅದೂ ಇದು ಹೇಳ್ಕೊಂಡು 'ಬಡವರ ಬಂಧು' ಎನಿಸಿಕೊಂಡಿದ್ದ. "ಇಂಥಾದ್ರಲ್ಲಿ ತನ್ನ ದರ್ಪವೆಲ್ಲ ಸರ್ಪವಾಗ್ತಿದೆಯೇನೋ ಅನ್ನಿಸಿ ಆಘಾತಗೊಂಡು ಊರೊಳಗಿನ ಈ ಶಕ್ತಿಗಳೆಲ್ಲ ಸೀತಕ್ಕನ ರೂಪದಲ್ಲಿ ಒಳಗೆ ಬಂದು ಸೇರಿಕೊಂಡಂತೆ ಕಾಣ್ತಿದೆಯಲ್ಲ ಅಂತ ಹಿಂಸೆ ಉಸುಕಿನಲ್ಲಿ ಬಿದ್ದು ಒದ್ದಾಡಿದ"[೧]

ಒಂದು ದಿನ ದನದ ಕೊಟ್ಟಿಗೆಯಲ್ಲಿ ಚೆನ್ನಿ ಒಬ್ಬಳೇ ಇದ್ದಳು. ಜಮೀನ್ದಾರ ಅರೆನಿದ್ರೆಯಲ್ಲಿದ್ದ ಚೆನ್ನಿ ಮೇಲೆ ಬಲಾತ್ಕಾರ ಮಾಡಿದ. ಅವಳು ಬೇಡ ಬೇಡ ಎಂದು ಕಿರುಚಾಡಿದಾಗ ಅವಳ ಬಾಯಲ್ಲಿ ಬಟ್ಟೆ ತುರುಕಿದ. ಇದರಿಂದ ಚೆನ್ನಿ ಉಸಿರುಗಟ್ಟಿ ಸತ್ತಳು. ಅಷ್ಟರಲ್ಲಿ ಕರಿಯ ಅಲ್ಲಿಗೆ ಬಂದ. ಜಮೀನ್ದಾರ ತನ್ನ ಬಂದೂಕನ್ನು ತೋರಿಸಿ, ಕರಿಯನಿಗೆ ಚೆನ್ನಿಯ ಹೆಣ ಹೊತ್ತುಕೊಳ್ಳಲು ಹೇಳಿದ. ಚೆನ್ನಿಯ ಹೆಣವನ್ನು ಕರಿಯನಿಂದಲೆ ಬಾವಿಯೊಂದರಲ್ಲಿ ಹಾಕಿಸಿದ. ಈ ವಿಷಯವನ್ನು ಯಾರ ಮುಂದೆಯಾದರೂ ಹೇಳಿದರೆ ಜೀವತಗೆಯುವೆಂದು ಕರಿಯನಿಗೆ ಬೆದರಿಕೆ ಹಾಕಿದ. ಚೆನ್ನಿ ಸತ್ತ ಸುದ್ದಿ ಊರೆಲ್ಲ ಹರಡಿತು. ಜಮೀನ್ದಾರನ ವಿರೋಧಿಯಾಗಿದ್ದ ರಾಮಣ್ಣ ಪಂಚಾಯತಿ ಕೂಡಿಸಲು ನಾಟಕವಾಡುತ್ತಾನೆ. ಪೊಲೀಸ ಕಂಪ್ಲೆಂಟ್ ನೀಡೋಣ ಎಂದು ರಾಮಣ್ಣ ಹೇಳಿದಾಗ– "ನೋಡು ರಾಮಣ್ಣ, ಇದೇನೇ ಇರ್ಲಿ, ಯಾರ್ ಮನೇವಿಷ್ಯಾನೇ ಆಗ್ಲಿ ಸುಮ್ಕೆ ಗಾಳಿಗಂಟು ಮಾಡ್ಕಂಡ್ ಕುಂತ್ರೆ ಊರಿಗೆ ಅವಮಾನ. ಹೆಂಗ್ ಇದ್ರೂ ನನ್ಕಾಲ ಮುಗೀತ ಬಂತು. ನೀನೇ ಊರ್ ವ್ಯವಹಾರ ನೋಡ್ಕಂಬೇಕು ತಾನೆ? ಯಾವತ್ನಂಗೆ ನಮ್ನಮ್ಮೊಳಗೆ ಎಲ್ಲ ಮುಗ್ದೋಗ್ಲಿ"[೨]

'ನನ್ನ ಕಾಲ ಮುಗೀತ ಬಂತು' ಎಂದು ಜಮೀನ್ದಾರನೇ ಹೇಳಿದಾಗ ರಾಮಣ್ಣನಿಗೆ ರೆಕ್ಕೆ ಬಲಿತು ಬಾಯ್ತುಂಬ ಮಾತಾಡಿದ. 'ಇದು ಯಾವ ಮಹಾ ವಿಷ್ಯ ನಾನೆಲ್ಲ ನಿಭಾಯಿಸ್ತೀನಿ ಬಿಡಿ' ಎಂದು ವಾಗ್ದಾದ ಮಾಡಿದ. ಆದರೆ ಸೀತಕ್ಕನಿಗೆ ನಿಜ ಸಂಗತಿ ತೀಳಿದು ಜಮೀನ್ದಾರನೊಂದಿಗೆ ವಾದ ಮಾಡುತ್ತಾಳೆ. ಊರೆಲ್ಲ ಸುದ್ದಿ ಹಬ್ಬುತ್ತದೆ. ಪಂಚಾಯತಿ ಕೂಡುತ್ತದೆ. ಜಮೀನ್ದಾರ ಚಾಟಿ ಏಟು ನೀಡಲು ಕರಿಯನ ಹತ್ತಿರ ಬರುತ್ತಾನೆ. ಅಷ್ಟರಲ್ಲಿ ಸೀತಕ್ಕ ಬರುತ್ತಾಳೆ. ಈ ಪಂಚಾಯತಿಯಲ್ಲಿ ನಾನು ತೀರ್ಮಾನ ಹೇಳುತ್ತೇನೆ ಎನ್ನುತ್ತಾಳೆ. "ಕರಿಯನ್ ಹೆಂಡ್ತಿ ಸತ್ತಿದ್ಕೆ ಕರಿಯನೇ ಕಾರಣ ಅಂಬ್ತ

ಇವತ್ತಿಲ್ಲಿ ಜಮೀನ್ದಾರ್ರು ಹೇಳ್ತಾ ಅವ್ರೆ. ಆದ್ರೆ ಕರಿಯ ಹೇಳದೆ ಬ್ಯಾರೆ ಐತೆ. ನಾನು ಅವ್ನ ತಾವ ಎಲ್ಲ ಮಾತಾಡಿದ್ದೀನಿ' ಎಂದು ಸೀತಕ್ಕ ಹೇಳೋಕೆ ಶುರು ಮಾಡಿದಾಗ ಜಮೀನ್ದಾರ 'ನೀನ್ ಸುಮ್ಕೆ ಹೋಗೇ' ಎಂದು ಹಲ್ಲು ಕಡಿದ. ಆದರೂ ಆಕೆ ಅತ್ತ ಗಮನ ಕೊಡದೆ ಜನರಿಗೆ ಹೇಳಿದಳು–'ಚೆನ್ನೀ ಕತ್ ಹಿಸ್ಕಿ, ಈಗ ಕರಿಯನ್ ಕೊರಳಿಗೆ ಉರ್ಲಾಕ್ತಿರೋರು ಬ್ಯಾರೇ ಯಾರೂ ಅಲ್ಲ ನಮ್ ಜಮೀನ್ದಾರ್ರು'.... ಈ ಸತ್ಯಾನ ಹೇಳಾಕಾಗ್ದೆ ಕರಿಯ ಒಳಗೇ ಒದ್ದಾಡ್ತಾ ಇದ್ದ. ನಾನು ಇನ್ನಿಲ್ದಂಗ್ ಕೇಳಿದ್ದಕ್ಕೆ ಎಲ್ಲಾ ವಿಸ್ಯ ಹೇಳ್ದ, ಸತ್ತೇವು ಸೂರ್ಯ ಇದ್ದಂಗೆ ಈಗ ಸತ್ತೇವೇನೆಂಬ್ತ ಗೊತ್ತಾಗ್ಯತೆ ಕರಿಯನ್ ಬಾಯಿಂದಾನೇ ಕೇಳಿ ಸಿಕ್ಷೆಯಾರ್ಗ್ ಆಗ್ಬೇಕೂಂಬ್ತ ಜನ್ರೆಲ್ಲ ತೀರ್ಮಾನ ಮಾಡ್ರಿ' ಎನ್ನುತ್ತಾಳೆ.[3] ಊರಿನ ಜನಕ್ಕೆಲ್ಲ ನಿಜವಾದ ವಾಸ್ತವ ತಿಳಿಯುತ್ತದೆ. ಆಗ ಜಮೀನ್ದಾರನಿಗೆ ತೀರ ಅಪಮಾನವಾಗುತ್ತದೆ.

"..... ಈ ಕಳ್ಳ ಬಡ್ಡಿಮಗನೇ ಇದಕ್ಕೆಲ್ಲ ಮೂಲ. ಈ ಊರಿನ ಇತಿಹಾಸದಲ್ಲಿ ನನ್ನ ಮನೆ, ಮನ್ತನ ಅಂದ್ರೆ ಎಂಥ ಸ್ಥಾನ ಏನ್ಕತೆ! ಒಬ್ಬ ಯಃಕ್ಕಚಿತ್ ಆಳಿನ ಪರವಾಗಿ ನನ್ನ ಹೆಂಡ್ತಿ ವಾದ ಮಾಡೋದೆ? ಮಾತೆ ಹರಡದವನಿಗೆ ಮಾತಾಗಿ ನಿಂತು, ನನ್ನ ಮನಸ್ಸನ್ನೆಲ್ಲ ಬಗೆದು ಬೀದಿಗೆಸೆಯೋದೆ? ಹೊಟ್ಟೆಗಿಲ್ದೆ ಬಿದ್ದಿದ್ದ ಈ ಬಡ್ಡೀಮಗನ ಜೀತಕ್ಕಿಟ್ಕೊಂಡ್ರೆ ಅವ್ನ ಮನೆ ವಿಷ್ಯ ನನ್ನ ಮನೆ ವಿಷ್ಯವಾಯ್ತಲ್ಲ! ನನ್ನ ಹಜಾರ ಹರಾಜಾತಲ್ಲ!... ಜೀವ ಕೊರೆಯೋಕೆ ಜೀತದ ಕರಿಯ ಕಾರಣ ಆದನಲ್ಲ.... ಹೀಗೆ ಏನೆಲ್ಲ ಯೋಚನೇಲಿ ತನ್ನ ಅಹಮ್ಮಿನ ಮೇಲೆ ಆತಂಕ ಅಮರಿದ ಸ್ಥಿತೀಲಿ ಜಮೀನ್ದಾರ ನಿಂತಿದ್ದ"[4] ಜಮೀನ್ದಾರಿನಿಗೆ ಅವಮಾನವಾಗಿ ಒಳಗೆ ಹೋಗಿ ಬಂದೂಕಿನಿಂದ ತಾನೇ ಹೊಡೆದುಕೊಂಡು ಆತ್ಮಹತ್ಯೆ ಮಾಡಿಕೊಂಡ.

ಸೀತಕ್ಕ ಇಲ್ಲಿ ಜಮೀನ್ದಾರಿ ಪದ್ಧತಿಯ ಒಳಗಿದ್ದುಕೊಂಡೆ ಆ ವ್ಯವಸ್ಥೆಯನ್ನು ವಿರೋಧಿಸುವ, ಪ್ರತಿಭಟಿಸುವ ಒಂದು ಗಟ್ಟಿತನದ ಆಯಾಮವನ್ನು ಹೊಂದಿದವಳು. ಊಳಿಗಮಾನ್ಯ ಪದ್ಧತಿ ಕಾರಣವಾಗಿ ಜೀತದಾಳುವಾಗಿ ಬಂದ ಕರಿಯನ ಮೇಲೆ ಸೀತಕ್ಕನಿಗೆ ಇನ್ನಿಲ್ಲಿದ ಕನಿಕರ. ಜಮೀನ್ದಾರ ಅವನನ್ನು ಬಡಿಯುವಾಗಲೆಲ್ಲ ಅವಳು ಬಿಡಿಸಿ, ಅವನ ಪರವಾಗಿ ನಿಲ್ಲುತ್ತಾಳೆ. ಗೌಡನಿಗೆ ಮಕ್ಕಳಾಗುವ ಯೋಗ ಕೂಡಿ ಬರುವುದಿಲ್ಲ. ಹೀಗಾಗಿ ಸೀತಕ್ಕ ಹೊಲೆಯರ ಕರಿಯನೊಂದಿಗೆ ಕೂಡಿ ಗರ್ಭಿಣಿಯಾಗುತ್ತಾಳೆ. ಮತ್ತು ಗರ್ಭವನ್ನು ಅವಳು ಸಮರ್ಥನೆ ಕೂಡ ಮಾಡಿಕೊಳ್ಳುತ್ತಾಳೆ. 'ಸೂರ್ಯ'ನಂತೆ ನನ್ನ ಮಗ ಹುಟ್ಟಿ ಬರುತ್ತಾನೆಂಬ ಕನಸು ಕಾಣುತ್ತಾಳೆ. ಊರಿನ ಜನರಲ್ಲಿ ಗುಸುಗುಸು ಮಾತನಾಡಿದಾಗ, ಅದನ್ನು ಸಮರ್ಥಿಸಿಕೊಳ್ಳುತ್ತಾಳೆ. ಮನೋ ಸಹಜವಾದ ವಾಂಛೆ ಕಾರಣವಾಗಿ ಲೈಂಗಿಕ ತೃಪ್ತಿಗಾಗಿ ಅವಳು ಕರಿಯನೊಂದಿಗೆ ಕೂಡುತ್ತಾಳೆ. ಮೇಲ್ನೋಟದ ದಬ್ಬಾಳಿಕೆ, ಶೋಷಣೆಯ ಪ್ರತೀಕವಾಗಿದ್ದ ಜಮೀನ್ದಾರ ಒಂದು ರೀತಿಯಲ್ಲಿ ಮಕ್ಕಳನ್ನು ಪಡೆಯುವ ತಾಕತ್ತು ಇಲ್ಲದವನು. ಹೀಗಾಗಿ ಸೀತಕ್ಕ ಇಲ್ಲಿ ಎಲ್ಲವನ್ನೂ ವಿರೋಧಿಸಿ ಪ್ರತಿಭಟಿಸುತ್ತಾಳೆ. ತನ್ನ ಗಂಡನ ಕಚ್ಚೆಹರಕುತನವನ್ನು, ಅತ್ಯಾಚಾರವನ್ನು ಬಯಲಿಗೆಳೆಯುತ್ತಾಳೆ.

ಶ್ರೇಣೀಕೃತ ಸಮಾಜದಲ್ಲಿ ಮೇಲ್ವರ್ಗದ ಹೆಣ್ಣಿನೊಂದಿಗೆ ಸಂಬಂಧ ಬೆಳೆಸಿದರೆ ಅದು ದೊಡ್ಡ ಅಪರಾಧ. ಆದರೆ ಇಲ್ಲಿ ಮೇಲ್ವರ್ಗದ ಸೀತಕ್ಕನೇ ದಲಿತರ ಕರಿಯನೊಂದಿಗೆ ಸಂಬಂಧ ಬೆಳೆಸುತ್ತಾಳೆ. ಈ ಕಲ್ಪನೆ ಚದುರಂಗರ ವೈಶಾಖದಲ್ಲಿಯೂ ಬರುತ್ತದೆ.



ಅಲ್ಲಿಯೂ ಮೇಲ್ವರ್ಗದ ರುಕ್ಮಿಣಿ ದಲಿತರ ಲಕ್ಕನೊಂದಿಗೆ ತಾನಾಗಿಯೇ ಸಂಬಂಧ ಬೆಳೆಸುತ್ತಾಳೆ. ಆದರೆ ವಿಶೇಷವೆಂದರೆ ಈ ಕಾದಂಬರಿಯ ಸೂರ್ಯನಿಗೂ, ವೈಶಾಖದಲ್ಲಿನ ಲಕ್ಕನಿಗೂ ಪಂಚಾಯತಿ ಕಟ್ಟೆಯಲ್ಲಿ ಶಿಕ್ಷೆ ನಿರ್ಣಯವಾಗುತ್ತದೆ. ನಿಜವಾಗಿಯೂ ತಪ್ಪು ಮಾಡಿದವರು ಮೇಲ್ವರ್ಗದ ಹೆಣ್ಣುಮಕ್ಕಳು. ಆದರೆ ಶಿಕ್ಷೆ ಅನುಭವಿಸುವುದು ಕೆಳವರ್ಗದ ವ್ಯಕ್ತಿಗಳು. ಇಂಥ ಸಾಮಾಜಿಕ ಸ್ಥಿತ್ಯಂತರಗಳನ್ನು ಬರಗೂರರು ಸೂರ್ಯ ಕಾದಂಬರಿಯಲ್ಲಿ ನಿರೂಪಿಸಲು ಪ್ರಯತ್ನಿಸಿದ್ದಾರೆ. ಬಂಡಾಯ ಸಾಹಿತ್ಯ ಸಂದರ್ಭದಲ್ಲಿ ಮೂಡಿಬಂದ ಬರಗೂರರ ಈ ಸೂರ್ಯ ಗಾತ್ರದಲ್ಲಿ ಕಿರಿದಾದರೂ ಪಾತ್ರದಲ್ಲಿ ಹಿರಿದಾದುದು.

**ಕೊನೆ ಟಿಪ್ಪಣಿಗಗಳು:**

೧) ಬರಗೂರು ರಾಮಚಂದ್ರಪ್ಪ : ಸೂರ್ಯ ಪು. ೧೫

೨) ಅದೇ ಪು. ೨೨

೩) ಅದೇ ಪು. ೨೮

೪) ಅದೇ ಪು. ೨



# ತಿಗಳರ ಕಟ್ಟೆಮನೆ

✍ ಅಶ್ವಥ ಕೆ.

ಕರ್ನಾಟಕದಲ್ಲಿ ವ್ಯವಸಾಯ ಮತ್ತು ತೋಟಗಾರಿಕೆಯ ಸಂಸ್ಕೃತಿಯನ್ನು ಜೀವಂತವಾಗಿ ಉಳಿಸಿಕೊಂಡು ಬಂದ ಪ್ರಮುಖ ಜನವರ್ಗಗಳಲ್ಲಿ ತಿಗಳರು ಪ್ರಮುಖರಾಗಿದ್ದಾರೆ. ಇವರು ತೋಟಗಾರಿಕೆಯನ್ನು ಪ್ರಮುಖ ಕಸುಬಾಗಿ ಹೊಂದಿದ್ದಾರೆ. ಕರ್ನಾಟಕದ ತುಮಕೂರು, ಕೋಲಾರ, ಬೆಂಗಳೂರು ಗ್ರಾಮಾಂತರ, ಚಿಕ್ಕಮಂಗಳೂರು (ಹಳೇಬೀಡು, ಬೇಲೂರು) ಹಾಸನ ಮುಂತಾದ ಜಿಲ್ಲೆಗಳಲ್ಲಿ ಹೆಚ್ಚಾಗಿ ವಾಸಿಸುತ್ತಾರೆ. ಇವರ ಮೂಲವನ್ನು ಹುಡುಕುವಾಗ ಕಂಡು ಬಂದಂತೆ ತಿಗಳರು ಕರ್ನಾಟಕದಲ್ಲಿ ಮಾತ್ರವಲ್ಲ ಕೇರಳ, ಗುಜರಾತ್, ಬಿಹಾರ್, ಉತ್ತರಪ್ರದೇಶ ಮತ್ತು ರಾಜಸ್ತಾನ ಹೀಗೆ ಭಾರತದಾದ್ಯಂತ ವಾಸಿಸುತ್ತಿದ್ದಾರೆ. ಇವರ ಜನಸಂಖ್ಯೆ ಕರ್ನಾಟಕದಲ್ಲಿ ಸುಮಾರು ೩೦–೩೫ಲಕ್ಷದಷ್ಟಿದೆ.

**ತಿಗಳ ಪದದ ನಿರ್ವಚನ :**

ತಿಗಳರು ಎಂಬ ಶಬ್ದ ಯಾವುದೇ ಅಲಂಕಾರವಿಲ್ಲದ ಪದ. ಇದು ಸುಮಾರು ಎರಡು ಸಾವಿರ ವರ್ಷಗಳ ಇತಿಹಾಸವನ್ನು ಹೊಂದಿದೆ. ಸಂಬಳಕ್ಕಾಗಿ ಸ್ಥಳೀಯ ಪಾಳೆಗಾರರ, ರಾಜರ ಅಧೀನದಲ್ಲಿ ಯುದ್ಧ ಮಾಡಲು ನೇಮಕಗೊಂಡು ರಾವುತರಾಗಿ ದೇಶದ ರಕ್ಷಣೆಗಾಗಿ ಊರಿನಿಂದ ಹೊರಗೆ ನದಿ, ಹೊಳೆ, ಕೆರೆ ಕಟ್ಟೆಗಳಲ್ಲಿ ನೆಲೆಸಿ ಪರರ ಆಕ್ರಮಣ ಕಾಲದಲ್ಲಿ ಯುದ್ಧ ಮಾಡುತ್ತಿದ್ದಂತವರು ಉಳಿದ ಕಾಲದಲ್ಲಿ ವ್ಯವಸಾಯ–ಪಶು ಸಂಗೋಪನೆ, ತೋಟಗಾರಿಕೆಗೆ ಇಳಿದರು. ಈ ರೀತಿ ತೋಟಗಾರಿಕೆಯನ್ನು ಮಾಡುತ್ತಿದ್ದಂತಹ ತೋಟಗಾರರನ್ನು ತಿಗಳ, ತೋಟಗಾರ, ಪಳ್ಳಿಗರು ಎಂಬುದಾಗಿ ಕರೆಯುವುದು ರೂಢಿಯಲ್ಲಿರಬಹುದೆಂಬ ಅಂಶವೊಂದಿದೆ.

ಇವರಲ್ಲಿ ಶೈವ ಸಂಪ್ರದಾಯ, ವೈಷ್ಣವ ಸಂಪ್ರದಾಯ ಮತ್ತು ಬ್ರಹ್ಮಜ್ಞಾನವಾದ ಆತ್ಮಸಿದ್ಧಾಂತದ ಬಗ್ಗೆ ಅರಿವು ಮತ್ತು ಇವೆಲ್ಲವುಗಳ ಮಿಶ್ರಿತವಾದ ಸಂಸ್ಕೃತಿ ಇವರದಾಗಿದ್ದರಿಂದ ಇವರನ್ನು ತ್ರಿಗಣರು ಎಂದು ನಂತರ ರೂಢಿಯಲ್ಲಿ ತಿಗಳರು ಎಂಬುದಾಗಿ ಬಂದಿರಬೇಕೆಂದು ಊಹಿಸಬಹುದು.

ಅಲ್ಲದೇ ಇವರು ಕ್ಷತ್ರಿಯ ಪರಂಪರೆಯವರಾಗಿದ್ದು, ಸೂರ್ಯಚಂದ್ರ ಹಾಗೂ ಅಗ್ನಿ ದೇವತೆಗಳನ್ನು ತ್ರಿಕಾಲದಲ್ಲಿ ಆರಾಧಿಸುತ್ತಿದ್ದರಿಂದ ಇವರನ್ನು ತಿಗಳರು ಎಂದು ಕರೆದಿರಬಹುದೆಂದು ಭಾವಿಸಲಾಗಿದೆ. "ಜನಾಂಗದ ದೀರ್ಘ ಚರ್ಚೆ ಮತ್ತು ಅಧ್ಯಯನದ ಫಲವಾಗಿ ತಿಗಳರ ಪ್ರಮುಖ ಕುಲಗಳಾದ ವಹ್ನಿಕುಲ, ಅಗ್ನಿಕುಲ, ಶಂಭುಕುಲ ಇವೆಲ್ಲವುಗಳೂ ಆದಿಶಕ್ತಿಯನ್ನು ಪೂಜಿಸುವುದರಿಂದಲೂ ತಮ್ಮ ಮೂಲ ಪುರುಷನು ಯಜ್ಞಕುಂಡದ ಅಗ್ನಿ ಜ್ವಾಲೆಯಲ್ಲಿ ಜನಿಸಿದ ಮಹಾ ಪುರುಷನೆಂದು ನಂಬಿರುವುದರಿಂದ ದ್ರಾವಿಡ ಭಾಷೆಯಲ್ಲಿ 'ತಿ' ಅಂದರೆ ಅಗ್ನಿ ಎಂಬರ್ಥವಿರುವುದರಿಂದ ತ್ರಿಗಣರು (ಬೆಂಕಿಯ ಪಂಗಡದವರು) ಎಂದು ಕರೆಯುವುದನ್ನು ಕಾಣಬಹುದು"[೧] ಇದು ಮುಂದೆ ತಿಗಳರು ಎಂದು ರೂಢಿಯಲ್ಲಿದೆ ಅಲ್ಲದೆ ತಮಿಳು, ಕನ್ನಡ, ಸಂಸ್ಕೃತಗಳಲ್ಲಿ ಈ ಪದ ಬಳಿಕೆಯಾಗಿರುವುದು ಕಂಡು ಬರುತ್ತದೆ. ಇದೇ ಪರಂಪರೆಗೆ ಸೇರಿದ 'ತಿಗಳ' 'ತಿಗಟ' 'ತಿಗಳಾಣ್ಯ' ಈ ಮುಂತಾದ ಪದಗಳೂ ಅಲ್ಲಲ್ಲಿ ದೊರಕುತ್ತವೆ. ಕರ್ನಾಟಕದಲ್ಲಿ ತಿಗಳರು ಬೆಳೆದು ಬಂದ ಹಾದಿಯನ್ನು ಗಮನಿಸಿದಾಗ ಅವರು ಇತ್ತೀಚಿನವರಲ್ಲ ಎನಿಸುತ್ತದೆ. ಅವರ ಮೂಲ ರಾಮಾಯಣ, ಮಹಾಭಾರತದ ಕಾಲಕ್ಕೆ ಕೊಂಡೊಯ್ಯುತ್ತದೆ. ಆದ್ದರಿಂದ ಅವರು ಪೌರಾಣಿಕ ಮತ್ತು ಐತಿಹಾಸಿಕ ಹಿನ್ನೆಲೆವುಳ್ಳರೆಂದು ಸ್ಪಷ್ಟವಾಗುತ್ತದೆ.

**ನ್ಯಾಯ ವ್ಯವಸ್ಥೆ :**

ತಿಗಳರಲ್ಲಿ ನ್ಯಾಯವ್ಯವಸ್ಥೆ ಅತೀ ಮುಖ್ಯವಾದುದು. ಇದನ್ನೇ ಕಟ್ಟೆಮನೆ ಎನ್ನುತ್ತಾರೆ. ಇದು ಇವರ ಸಾಂಪ್ರದಾಯಿಕ ನ್ಯಾಯಾಂಗ ವ್ಯವಸ್ಥೆ. ಸ್ವತಂತ್ರ ಭಾರತದ ನ್ಯಾಯಾಂಗ ವ್ಯವಸ್ಥೆಯನ್ನೇ ಹೋಲುತ್ತದೆ. ಈ ಪದ್ಧತಿಗೆ ಸುಮಾರು ೫ ಸಾವಿರ ವರ್ಷಗಳ ಇತಿಹಾಸವಿದೆ. ಅಂದರೆ ಸ್ವತಂತ್ರ ಭಾರತದ ನ್ಯಾಯ ವ್ಯವಸ್ಥೆಯು ಇತ್ತೀಚೆಗೆ ದೇಶ ಸ್ವಾತಂತ್ರ್ಯ ಪಡೆದ ನಂತರ ರಚನೆಯಾದುದು. ಆದರೆ ಇವರದು ೫ ಸಾವಿರ ವರ್ಷದ ಇತಿಹಾಸವಿರುವುದರಿಂದಾಗಿ ಇವರ ನ್ಯಾಯಾಂಗ ಪದ್ಧತಿಯನ್ನೇ ಸರ್ಕಾರ ಅನುಸರಿಸಿದೆ ಎಂಬುದು ಕೆಲವರ ಅಭಿಮತವಾಗಿದೆ.

ಇವರು ಏಕತೆ, ಸಮಗ್ರತೆ ಮತ್ತು ಆಡಳಿತಾತ್ಮಕ ದೃಷ್ಟಿಯಿಂದ ತಿಗಳರ ಸಮುದಾಯವು ೪ ಕಟ್ಟೆ, ೪ ದೇಶ, ೮೦ ಗಡಿಗಳಾಗಿ ಹಳೇ ಮೈಸೂರು ಪ್ರಾಂತ್ಯವನ್ನು ವಿಂಗಡಿಸಿಕೊಂಡಿದ್ದಾರೆ. ಇಲ್ಲಿನ ಕಟ್ಟೆಯೆಂಬುದು ಈಗಿನ ರಾಜ್ಯಕ್ಕೆ ಸಮನಾಗಿರುತ್ತದೆ. ಅದೇ ರೀತಿ ದೇಶವೆಂಬುದು ರಾಜಧಾನಿಗೆ ಸಮನಾಗಿರುತ್ತದೆ. ಗಡಿಗಳೆಂದರೆ ರಾಜ್ಯದ ಅಧೀನದಲ್ಲಿ ಬರುವ ಒಟ್ಟು ಪ್ರಾಂತ್ಯದ ಸರಹದ್ದಾಗಿರುತ್ತದೆ. ಇವರು ವಿಂಗಡಿಸಿಕೊಂಡಿರುವ ಕಟ್ಟೆಗಳಲ್ಲಿ ಅತಿ ದೊಡ್ಡದೆಂದರೆ ತುಮಕೂರು ಇದನ್ನು ಕಟ್ಟೆಯ ಅಣ್ಣನೆಂದು ಕರೆಯುತ್ತಾರೆ. ಹಿರಿತನದ ಆಧಾರದಲ್ಲಿ ಹೇಳುವುದಾದರೆ:

| | ಕಟ್ಟೆಗಳು | ದೇಶಗಳು | ಗಡಿಗಳು |
|---|---|---|---|
| ೧. | ತುಮಕೂರು ಕಟ್ಟೆ | ಕ್ಯಾತ್ಸಂದ್ರ | ಈಗಿನ ತಾಲ್ಲೂಕುಗಳು |
| ೨. | ಕಡಬ ಕಟ್ಟೆ | ಗುಬ್ಬಿ | ಈಗಿನ ತಾಲ್ಲೂಕುಗಳು |
| ೩. | ತುರುವೇಕೆರೆ ಕಟ್ಟೆ | ಶೆಟ್ಟಿಕೆರೆ | ಈಗಿನ ತಾಲ್ಲೂಕುಗಳು |
| ೪. | ಕುಣಿಗಲ್ ಕಟ್ಟೆ | ಮಾಗಡಿ | ಈಗಿನ ತಾಲ್ಲೂಕುಗಳು |

ಈ ಕಟ್ಟೆಗಳು ತನ್ನ ವ್ಯಾಪ್ತಿಯಲ್ಲಿ ಅನೇಕ ಪ್ರದೇಶಗಳನ್ನು ಒಳಗೊಂಡಿದ್ದು, ಅವರ ಒಟ್ಟು ಜವಾಬ್ದಾರಿಯನ್ನು ನೋಡಿಕೊಳ್ಳುವುದರ ಜೊತೆಗೆ ತನ್ನ ಅಧೀನದಲ್ಲಿಟ್ಟುಕೊಂಡಿರುತ್ತದೆ. ಉದಾಹರಣೆಗೆ ತುಮಕೂರು ಕಟ್ಟೆಯಲ್ಲಿ ತುಮಕೂರು ತಾ. ಬೆಂಗಳೂರು ಅನೇಕಲ್, ಚಿಕ್ಕಬಳ್ಳಾಪುರ, ದೊಡ್ಡಬಳ್ಳಾಪುರ, ಶಿಡ್ಲಘಟ್ಟ ಇತ್ಯಾದಿ ಅದೇ ರೀತಿ ಕುಣಿಗಲ್ ಕಟ್ಟೆಯಲ್ಲಿ ಕುಣಿಗಲ್ ತಾ. ಮಾಗಡಿ, ರಾಮನಗರ, ಚನ್ನಪಟ್ಟಣ, ಮೈಸೂರು, ಮಂಡ್ಯ, ಶ್ರೀರಂಗಪಟ್ಟಣ, ಯಡಿಯೂರು ಇತರೆ, ತುರುವೇಕೆರೆ ಕಟ್ಟೆಯಲ್ಲಿ ತುರುವೇಕೆರೆ ತಾ. ಹಾಸನ ಚಿಕ್ಕಮಗಳೂರು ಕ್ಷೇತ್ರಗಳು ಕಡಬ ಕಟ್ಟೆಯಲ್ಲಿ ಕಡಬ ಗುಬ್ಬಿ ತಾ. ಸಿ.ಎನ್. ಹಳ್ಳಿ, ಚೇಳೂರು ಚಿತ್ರದುರ್ಗ ಇತ್ಯಾದಿ.

ಕಟ್ಟೆಯೆಂಬುದು ಪೂರ್ಣ ಪ್ರಮಾಣದ ಘಟಕಗಳಾಗಿರುತ್ತದೆ. ಇವರ ಅಧೀನದಲ್ಲಿ ದೇಶ, ದೇಶದ ಅಧೀನದಲ್ಲಿ ಗಡಿಗಳು, ಗಡಿಗಳ ಅಧೀನದಲ್ಲಿ ಹಗ್ಗಡಲುಗಳೆಂಬ ಸಣ್ಣ ಘಟಕಗಳಿರುತ್ತದೆ.




ಈ ರೀತಿ ವಿಂಗಡನೆಗೊಂಡಂತಹ ಘಟಕಗಳನ್ನು ನೋಡಿಕೊಳ್ಳುವ ಮತ್ತು ಅಲ್ಲಿ ತಲೆದೋರಬಹುದಾದ ವಿವಾದಗಳು ಹಾಗೂ ನ್ಯಾಯ ತೀರ್ಮಾನಗಳನ್ನು ಮಾಡುವಲ್ಲಿ ಮುಖ್ಯವಾಗಿ ಯಜಮಾನರು, ಅಣೆಕಾರರು ಮತ್ತು ಮುದ್ರೆಗಳೆಂಬ ಮೂವರು ಅಧಿಕಾರಿಗಳು ಮುಖ್ಯ ಪಾತ್ರವಹಿಸಿರುತ್ತಾರೆ. ಹಿಂದೆ ಹಳ್ಳಿಗಳಿರುವ 'ಕೂಟ'ದಲ್ಲಿ ನ್ಯಾಯವು ಬಗೆಹರಿಯದೆ ಹೋದರೆ ಕೂಟಗಳಿಗೆ ಮೇಲ್ಪಟ್ಟ ನ್ಯಾಯ ಮಂದಿರವಾದ 'ಕಟ್ಟೆಮನೆ'ಯಲ್ಲಿ ಸಮಸ್ಯೆ ಬಗೆಹರಿಯಲ್ಪಡುತ್ತಿತ್ತು. ಕಟ್ಟೆಯ ಮುಖ್ಯಸ್ಥರನ್ನು "ನಾಡಗೌಡ" ಎಂದು ಕರೆಯುತ್ತಿದ್ದರು. ಈಗಲೂ ಈ ಜನಾಂಗದ ಮುಖ್ಯಸ್ಥರನ್ನು 'ಗೌಡರು' ಎನ್ನುತ್ತಾರೆ. "ಗೌಡ ಎಂದರೆ ಯಜಮಾನ, ಮುಖ್ಯಸ್ಥ ಎಂದರ್ಥ. 'ತಿಗಳಗೌಡರು' ಎಂಬ ಪದದಿಂದಲೂ ಈ ಜನಾಂಗವನ್ನು ಗುರುತಿಸುವುದುಂಟು."[೨] ಆತನಿಗೆ ಸಮಾಜದಲ್ಲಿ ಒಳ್ಳೆಯ ಸ್ಥಾನಮಾನವಿದ್ದು, ಆತನ ಮಾತಿಗೆ ಜನರು ಎದುರಾಡದೇ ಭಕ್ತಿ ಗೌರವಗಳಿಂದ ಆಜ್ಞೆಯನ್ನು ಪಾಲಿಸುತ್ತಿದ್ದರು. ಕಟ್ಟೆಮನೆಯ ಯಜಮಾನರಾದ ನಾಡಗೌಡರ ತೀರ್ಪೇ ಕೊನೆಯ ತೀರ್ಪು ಆಗಿತ್ತು. ಇವರು ಕುಲದ ಮುಖಂಡರು ಇವರ ಅಧೀನದಲ್ಲಿ ಅಥವಾ ನಾಯಕತ್ವದಲ್ಲಿ ಅಣೆಕಾರರು, ಮುದ್ರೆಗಳು ಇರುತ್ತಾರೆ. ಇಲ್ಲಿನ ಅಣೆಕಾರರು ಬುಡಕಟ್ಟುಗಳ ಪ್ರತಿನಿಧಿಯಾಗಿ ಕಾರ್ಯನಿರ್ವಹಿಸುತ್ತಾರೆ. ಅದೇ ರೀತಿ ಮುದ್ರೆಗಳು; ಇವರು ಅಮೀನರುಗಳು. ಅಂದರೆ ಯಾವುದೇ ಸುದ್ದಿಯನ್ನು ಒಂದು ಕಡೆಯಿಂದ ಮತ್ತೊಂದು ಕಡೆಗೆ ಸುದ್ದಿಯನ್ನು ರವಾನಿಸುವಂತಹವರಾಗಿರುತ್ತಾರೆ. ಒಂದು ಅಂದಾಜಿನ ಪ್ರಕಾರ ಇಡೀ ರಾಜ್ಯದಲ್ಲಿ ೧೦೦೦೦ ಮಂದಿ ಯಜಮಾನರಿದ್ದಾರೆಂದರೆ ೪ ಸಾವಿರ ಮಂದಿ ಅಣೆಕಾರರಿದ್ದಾರೆಂದು ಮತ್ತು ೨ ಸಾವಿರ ಮಂದಿ ಮುದ್ರೆಗಳಿದ್ದಾರೆಂದು ತಿಳಿದು ಬರುತ್ತದೆ. ಇವರ ಅಧಿಕಾರವು ವಂಶ ಪಾರಂಪರ್ಯವಾಗಿ ಸಾಗಿಬರುವ ಸಮರ್ಥರಿಗೆ ಹುದ್ದೆಯನ್ನು ನೀಡುತ್ತಾರೆ. ಇಂತಹ ವ್ಯಕ್ತಿಗಳು ಯಾವುದೇ ಕಾರಣಕ್ಕೂ ವಿಧುರನಾಗಿರಬಾರದೆಂಬ ನಿಯಮವಿದೆ. ಏಕೆಂದರೆ ಇಂತಹವರು ತಿಗಳರ ಕುಲದೇವರಾದದಂತಹ ಅಗ್ನಿ ಬನ್ನಿರಾಯನಿಗೆ ಧೂಪವನ್ನು ಹಾಕುವಂತಿಲ್ಲ ಎಂಬುದು ಅವರ ನಂಬಿಕೆಯಾಗಿದೆ.

ಇವರು ತಮ್ಮ ತಮ್ಮ ಜವಾಬ್ದಾರಿಯನ್ನು ಅರಿತು ಯಜಮಾನನ ನಾಯಕತ್ವದಲ್ಲಿ ಮದುವೆ, ಮುಂಜಿ, ಸಂಸ್ಕಾರ, ನ್ಯಾಯ ಪಂಚಾಯ್ತಿ, ತಿಥಿ ಕಾರ್ಯಗಳನ್ನು ನೆರವೇರಿಸುತ್ತಾರೆ. ಮತ್ತು ವಿವಾಹ, ಸಂಸ್ಕಾರ ಹಾಗೂ ತಿಥಿ ಆಚರಣೆಗಳಲ್ಲಿ ಪುರೋಹಿತರನ್ನು ಅಹ್ವಾನಿಸುವುದಿಲ್ಲ. ಅಂತಹ ಸಂದರ್ಭದಲ್ಲಿ ಇವರೇ ನಿಂತು ಎಲ್ಲಾ ಕೆಲಸಗಳನ್ನು ಮಾಡುತ್ತಾರೆ.



**ನ್ಯಾಯ ತೀರ್ಮಾನಿಸುವ ಬಗ್ಗೆ :**

ಯಾವುದೇ ಒಂದು ಪುಟ್ಟಗ್ರಾಮದಲ್ಲಿ ತಲೆದೋರಬಹುದಾದ ವ್ಯವಹಾರ, ಜಮೀನು, ಹಣಕಾಸು, ದಾಂಪತ್ಯ, ಸಂಬಂಧಪಟ್ಟ ವಿವಾದಗಳನ್ನು ಊರಿನ ಯಜಮಾನರು ರಾಶಿ ಸೇರಿಸಿ ಬಗೆಹರಿಸುತ್ತಾರೆ. ರಾಶಿ ಎಂದರೆ ಒಂದು ಗ್ರಾಮದ ಮಟ್ಟದಲ್ಲಿನ ಎಲ್ಲಾ ಸದಸ್ಯರನ್ನೊಳಗೊಂಡಂತಹ ಕೂಟ. ಅಕಸ್ಮಿಕವಾಗಿ ನ್ಯಾಯ ತೀರ್ಮಾನವಾಗದೆ ಮುಂದುವರೆದಲ್ಲಿ ಅದು ಗಡಿಗೆ ಬರುತ್ತದೆ. ಗಡಿಯಲ್ಲಿಯೂ ಬಗೆಹರಿಯದಂತಹ ನ್ಯಾಯ ದೇಶಕ್ಕೆ ಬರುತ್ತದೆ. ದೇಶದಲ್ಲಿ ಬಗೆಹರಿಯದಂತಹ ನ್ಯಾಯ ಪೂರ್ಣ ಪ್ರಮಾಣದ ಘಟಕವಾದಂತಹ ಕಟ್ಟೆಮನೆಗೆ ಬರುತ್ತದೆ. ಕಟ್ಟೆಮನೆಯಲ್ಲಿ ಬಗೆ ಹರಿಯದ ನ್ಯಾಯ ಅಖಂಡ ಸಭೆಗೆ ಅಂದರೆ ನಾಲ್ಕು ಕಟ್ಟೆ ಸಮಾವೇಶಕ್ಕೆ ಬರುತ್ತದೆ. ಇಲ್ಲಿ ಎಲ್ಲಾ ಘಟಕದ ಯಜಮಾನರು ಅಣೆಕಾರರು, ಮುದ್ರೆಗಳು ಹಾಗೂ ಸಂಬಂಧಪಟ್ಟಂತಹ ಸದಸ್ಯರೆಲ್ಲರೂ ಸೇರಿರುತ್ತಾರೆ. ಮತ್ತು ಇದೇ ಅತ್ಯಂತ ಕೊನೆಯ ಘಟ್ಟವಾಗಿರುವುದರಿಂದ ಇಲ್ಲಿ ಆದದ್ದೇ ಅಂತಿಮ ತೀರ್ಮಾನವಾಗಿರುತ್ತದೆ.

**ನ್ಯಾಯಸ್ಥಾನ :**

ಪ್ರತಿಯೊಂದು ಗ್ರಾಮದಲ್ಲಿಯೂ ಕೂಡ ಕುಲದ ಮನೆಗಳಿವೆ. ಇಂತಹ ಸ್ಥಳದಲ್ಲಿ ಮತ್ತು ಊರ ಮುಂದಿನ ಅರಳೀಕಟ್ಟೆ ತೋಪುಗಳಲ್ಲಿ ಕೂಟ ಸೇರುವುದುಂಟು, ಕುಲದ ಸಮಾವೇಶಕ್ಕೆ ಅಲ್ಲಿ ಬಂದವರಿಗೆ ಊಟ, ನೀರು, ನೆರಳು, ವಿಳ್ಯ ಮುಂತಾದ ಸವಲತ್ತುಗಳನ್ನು ಅಲ್ಲಿಯ ಜನರೇ ನೀಡುತ್ತಿದ್ದರು. ಆ ಸ್ಥಳಕ್ಕೆ ಬಂದ ಕುಲಾಧಿಪತಿಗಳು ಮತ್ತು ಜನರಿಗೆ ತಳಿಕಳಸ ಶರಣು ಸಂಬಂಧ ಸ್ವಾಗತ ನೀಡಲಾಗುವುದು, ಕಾಲಿಗೆ ನೀರನ್ನು ಹಾಕಿ, ಕಾಲು ಒರೆಸಿ ಕುಲಸ್ವಾಮಿಗಳನ್ನು ಸ್ವಾಗತಿಸಲಾಗುವುದು. ಎಲ್ಲರೂ ಸೇರಿದ ನಂತರ ನ್ಯಾಯ ಸಮಾವೇಶದಲ್ಲಿ ಧರ್ಮರಾಯನ ಗದ್ದುಗೆ ಹಾಕಿ, ರಾಶಿಯ ಅನುಮತಿ ಪಡೆದು ನ್ಯಾಯ ಬಗೆಹರಿಸುವ ಕಾರ್ಯ ಆರಂಭವಾಗುವುದು. ಅಲ್ಲಿ ಮದ್ಯಪಾನ, ಧೂಮಪಾನ ಮಾಡಿದವರಿಗೆ ಅವಕಾಶವಿರುವುದಿಲ್ಲ. ನಂತರ ಮುದ್ರೆ ರಾಶಿಯ ಅನುಮತಿಯನ್ನು ಪಡೆದು ರೀತಿ ರಿವಾಜುಗಳನ್ನು ಆದೇಶಿಸುವನು ಅಲ್ಲಿ ಸೇರಿದ ಇಡೀ ರಾಶಿಯು ವಿಷಯದಲ್ಲಿ ಮುಕ್ತವಾಗಿ ಮಾತನಾಡಬಹುದು. ಅದರೆ ಅವರು ಕ್ರಮವರಿತು ಎದ್ದುನಿಂತು ಒಬ್ಬರಾದ ನಂತರ ಮತ್ತೊಬ್ಬರಂತೆ ರಾಶಿಯ ಅನುಮತಿಯನ್ನು ಪಡೆದು ಮಾತನಾಡಬೇಕಿತ್ತು ನಂತರ ಕೊನೆಯಲ್ಲಿ ಎಲ್ಲ ಚರ್ಚೆಯು ಮುಗಿದ ಮೇಲೆ ನಂತರ ಯಜಮಾನ ತೀರ್ಪನ್ನು ಹೇಳಿ ತಪ್ಪಿಸ್ಥರಿಗೆ ಶಿಕ್ಷೆಯನ್ನು ವಿಧಿಸಿ ತಪ್ಪಿನ ವೀಳ್ಯೆವನ್ನು ಅವನಿಂದ ಕೊಡಿಸುತ್ತಿದ್ದರು.ಇದಕ್ಕೆ ಬದಲಾಗಿ ತೀರ್ಪಿಗೆ ತಲೆಭಾಗದ ಉದ್ಧಟವಾದಿಗಳನ್ನು ಅನಾಮತ್ತಿನಲ್ಲಿಡಲಾಗುವುದು. ಆತ ಶರಣು ಬಂದಾಗ ಮಾತ್ರ ಒಪ್ಪಿ ಅವನ ಸ್ಥಾನಮಾನಗಳನ್ನು ನೀಡಲಾಗುತ್ತಿತ್ತು. ನಂತರ ಅವನ ಕಷ್ಟ ಸುಖದಲ್ಲಿ ಬಾಗಿಯಾಗಲು ಅವಕಾಶ ನೀಡುವುದು.

**ಅಂಚೆ ಪದ್ಧತಿ :**

ತಿಗಳ ಜನಾಂಗದವರಿಗೆ ಸಂಬಂಧಪಟ್ಟಂತಹ ನ್ಯಾಯ ಪಂಚಾಯಿತಿಗಳು, ಕುಲದೇವತಾ ಕಾರ್ಯಗಳು ವಿಶೇಷ ಸಭೆ ಸಮಾರಂಭಗಳು, ಕೂಟ ಸೇರುವ ಸುದ್ದಿ ತಲುಪಿಸಲು ಅಥವಾ ಕರೆಕೊಡಲು ತಿಗಳ ಸಮುದಾಯದಲ್ಲಿ ಸರಳವೂ, ಶ್ರೇಷ್ಠವೂ, ಸುಲಭ ವೆಚ್ಚದಲ್ಲಿ ಆಗಬಹುದಾದ ಅಂಚೆ ಪದ್ಧತಿ ಇದೆ.

ಇಲ್ಲಿ ಸುದ್ದಿ ಧೂತನಾಗಿ ಮುದ್ರೆ ಕಾರ್ಯನಿರ್ವಹಿಸುವನು. ಅಂದರೆ ಅದು ಪೂರ್ಣ ಪ್ರಮಾಣದ ಕಟ್ಟೆಯಿಂದ ಹಿಡಿದು ಗ್ರಾಮಮಟ್ಟದ ರಾಶಿಯವರೆಗೂ ಸುದ್ದಿ ಹಂತ ಹಂತವಾಗಿ ಸಾಗುತ್ತದೆ. ಕಟ್ಟೆಯಿಂದ– ದೇಶಕ್ಕೆ ಗಡಿಗಳು – ಹಗ್ಗಡಲುಗಳು ರಾಶಿಗೆ ಮುದ್ರೆಗಳು ಆಯಾ ಕೇಂದ್ರದಿಂದ ಮುಂದಕ್ಕೆ ಆಯಾ ಮುದ್ರೆಗಳು ದಿನಬೆಳಗಾಗುವುದರೊಳಗಾಗಿ ಸುದ್ದಿ ರವಾನಿಸಲಾಗುವುದು.

ಮುದ್ರೆಗಳ ವಿಶ್ವಾಸಾರ್ಹತೆಯನ್ನು ಪ್ರಶ್ನಿಸಲಾಗುವುದಿಲ್ಲ. ಅಷ್ಟು ನಿಖರವಾಗಿರುತ್ತದೆ. ಆಯಾ ಹಂತದ ಮುದ್ರೆಗಳಿಗೆ ಅಲ್ಲಿಯ ಘಟಕದ ಯಜಮಾನ ಪ್ರಮಾಣ ಭತ್ಯೆ ನೀಡುವನು. ಯಾವುದೇ ವ್ಯಕ್ತಿ ಮುದ್ರೆಯು ತಿಳಿಸಿದ ವಿಷಯಕ್ಕೆ ತಲೆಬಾಗಿ ಹಾಜರಾಗದಿದ್ದರೆ ಮತ್ತೊಮ್ಮೆ ಇಬ್ಬರು ಮುದ್ರೆಯನ್ನು ಕಳುಹಿಸುವರು. ಇಂತಹ ಪದ್ಧತಿಗೆ ಜೋಡಿ ಮುದ್ರೆ ಕಳಿಸುವುದು ಎನ್ನುತ್ತಾರೆ. ಇವರು ನೀಡಿದ ಕರೆಯನ್ನು ಉಲ್ಲಂಘಿಸುವ ಅಧಿಕಾರ ಅಥವಾ ಎದೆಗಾರಿಕೆ ಯಾವ ರಾಶಿ ಕುಲಾಧಿಪತಿಗಳಿಗೂ ಇರುವುದಿಲ್ಲ.

ತಿಗಳರು ಸಂಘ ಜೀವಿಗಳು ತಮ್ಮ ಸಮಾಜದಲ್ಲಿ ಕಟ್ಟೆಮನೆ ಬಗ್ಗೆ ಅಪಾರ ಗೌರವವಿದ್ದು, ತಮ್ಮ ಜನಾಂಗದ ಯಜಮಾನರ ಮಾತಿಗೂ ಅಷ್ಟೇ ಮನ್ನಣೆ. ಅಣೆಕಾರರ ಬಗ್ಗೆಯೂ ಅಪಾರವಾದ ಗೌರವ, ಜನಾಂಗದ ಓರೆ–ಕೋರೆಗಳನ್ನೆಲ್ಲಾ ಇವರು ಸುಲಭವಾಗಿ ಬಗೆಹರಿಸಿ ಸಂಘವನ್ನು ಸುಭದ್ರವಾಗಿಡುತ್ತಿದ್ದರು. ಇವರಲ್ಲಿ ವ್ಯಕ್ತಿಗಿಂತ ಜಾತಿ ಬಹಳ ದೊಡ್ಡದು ಇವರ ಸಂಪ್ರಾದಾಯಗಳು ಸ್ವಲ್ಪಮಟ್ಟಿಗೆ ಸುಧಾರಿಸಿ ವಿದ್ಯಾವಂತರ ಸಂಖ್ಯೆ, ಬುದ್ಧಿ ಜೀವಿಗಳ ಸಂಖ್ಯೆ ಬೆಳೆದಂತೆ ತನ್ನ ಕಟ್ಟು ನಿಟ್ಟಿನ ಪ್ರಾಚೀನ ನಿಯಮಗಳು, ಸಂಪ್ರಾದಾಯಗಳು ಆಧುನಿಕ ದಿನಮಾನಗಳಿಗೆ ತಕ್ಕಂತೆ ಬದಲಾವಣೆಯಾಗುತ್ತಿವೆ. ಇದು ಅತ್ಯಗತ್ಯ. ಇಂತಹ ಪರಿವರ್ತನೆ ಸಮಾಜದ ಏಳ್ಗೆಗೆ ಖಂಡಿತಾ ಪೂರಕವಾಗಿದ್ದು, ಇದಕ್ಕೆ ಜನಾಂಗದ ಹಿರಿಯರು ಕಿರಿಯರಿಗೆ ಪ್ರಾಂಜಲ ಚಿತ್ತದಿಂದ ಅವಕಾಶ ಮಾಡಿಕೊಡಬೇಕಾಗಿದೆ.

**ಕೊನೆ ಟಿಪ್ಪಣಿಗಳು:**

೧) ತಿಗಳ ಜನಾಂಗದ ಇತಿಹಾಸ ಮತ್ತು ಕರಗ ಶಕ್ತೋತ್ಸವ, ಲೇ.ಕೆ. ಲಕ್ಷ್ಮಣ ಪು.೧೩

೨) ಕರ್ನಾಟಕದ ತಿಗಳರು : ಲೇ.ಕವಿತಾಕೃಷ್ಣ, ಪು.ಸಂ.೩೧

**ಆಕಾರ ಗ್ರಂಥ**

೧) ಕವಿತಾಕೃಷ್ಣ : ಕರ್ನಾಟಕದ ತಿಗಳರು; ಪ್ರಕಾಶಕರು : ಟಿ.ಆರ್. ಗೋವಿಂದಯ್ಯ.

೨) ಲಕ್ಷ್ಮಣ ಕೆ.: ತಿಗಳ ಜನಾಂಗದ ಇತಿಹಾಸ ಮತ್ತು ಕರಗ ಶಕ್ತೋತ್ಸವ ಪ್ರಕಾಶಕರು : ಶ್ರೀಮತಿ ಸುಶೀಲ ಲಕ್ಷ್ಮಣ್ –೧೯೯೯.

೩) ಚಿಕ್ಕಣ್ಣ ಎಣ್ಣೆಕಟ್ಟೆ : ತುಮಕೂರು ಜಿಲ್ಲೆಯ ಜಾನಪದೀಯ ಅಧ್ಯಯನ ಪ್ರಕಟಣೆ : ಗಡಿನಾಡು ಜಾನಪದ ಸಂಪರ್ಕ ಕೇಂದ್ರ, ಶಿರಾ–೨೦೦೧



# ರವೀಂದ್ರನಾಥ ಠಾಕೂರರ 'ಗೋರ' ಕಾದಂಬರಿಯಲ್ಲಿ ರಾಷ್ಟ್ರೀಯತೆ ಚಿತ್ರಣ

**ನಾಗೇಶ ಎಸ್. ಜಿ.**

ಆರೋಗ್ಯಕರ ರಾಷ್ಟ್ರೀಯತೆಗಾಗಿ ದುರಾಭಿಮಾನವನ್ನು ಹಿಮ್ಮೆಟ್ಟಿಸೋಣ. ಈ ಹಂತದಲ್ಲಿ ನಮ್ಮ ದೇಶವಾಸಿಗಳಿಗೆ ಮತ್ತು ಯುವಮಿತ್ರರಿಗೆ ರಾಷ್ಟ್ರೀಯತೆಯ ಮೇಲೆ ನಡೆಯುತ್ತಿರುವ ಹಲ್ಲೆಯನ್ನು ಕುರಿತು ಎಚ್ಚರಿಸಬೇಕಾಗಿದೆ. **'ರಾಷ್ಟ್ರೀಯತೆ'** ಎನ್ನುವ ನಿರ್ವಚನದಲ್ಲಿ ರಾಷ್ಟ್ರ–ರಾಷ್ಟ್ರೀಯತೆಗಳ ಕುರಿತು ಅಪವ್ಯಾಖ್ಯಾನಗಳು, ತಾತ್ವಿಕ ಗೊಂದಲಗಳು, ತಮ್ಮ ಸಂಕುಚಿತ ವ್ಯಾಖ್ಯಾನಗಳಿಂದ ದ್ವೇಷಕ್ಕೂ, ಹಿಂಸೆಗೂ, ರಕ್ತಪಾತಕ್ಕೂ, ಅವಮಾನಗಳಿಗೂ ಕಾರಣವಾಗುತ್ತಿವೆ. ಆದರೆ ನಮಗೆ ತಿಳಿದಿರುವುದು **'ರಾಷ್ಟ್ರೀಯತೆ'** ಎನ್ನುವುದರಲ್ಲಿನ ಅರ್ಥ ವಿವಿಧತೆಯಲ್ಲಿ ಐಕ್ಯತೆಯನ್ನು ಒಂದುಗೂಡಿಸುವಂತದ್ದು ಇದರ ಮುಖ್ಯ ಉದ್ದೇಶ. ಸ್ವಭಾವದಲ್ಲಿ ಮಾತ್ರ ಅಮೂರ್ತವಾಗಿ ನಿಶ್ಚಲತೆಯಲ್ಲಿರುವಂತೆ ಕಾಣುವ ರಾಷ್ಟ್ರೀಯತೆ ಪರಿಕಲ್ಪನೆಯೂ ವಾಸ್ತವದಲ್ಲಿ ತೀವ್ರವಾಗಿ ಕ್ರಿಯಾಶೀಲವಾಗಿದೆ. ಮಿಶನರಿಗಳ ಮತಪ್ರಸಾರ, ಬ್ರಿಟಿಷರ ಆಡಳಿತ ಪದ್ಧತಿ, ಇಂಗ್ಲಿಷ್ ವಿದ್ಯಾಭ್ಯಾಸ ಇವುಗಳ ಫಲವಾಗಿ ಹುಟ್ಟಿಕೊಂಡ ದೇಸಿ ವಿದ್ಯಾವಂತ ವರ್ಗದ ಅಂತರಂಗದಲ್ಲಿ ಮೊಳಕೆಯೊಡೆದ ರಾಷ್ಟ್ರೀಯತೆಯ (Nationalism) ಮನೋಭಾವ ೧೯ನೆಯ ಶತಮಾನದ ಉತ್ತರಾರ್ಧದಲ್ಲಿ ಎದ್ದು ತೋರಲಾರಂಭಿಸಿತು.

ಬಹುತೇಕ ರಾಷ್ಟ್ರಗಳಲ್ಲಿ ದೇಶಪ್ರೇಮ ಕೇವಲ ಭೌತಿಕಸ್ವರೂಪಕ್ಕೆ ಸೇರಿದೆ. ಆದರೆ ಭಾರತೀಯರ ರಾಷ್ಟ್ರಪ್ರೇಮ ಭಿನ್ನ ರೀತಿಯದ್ದು. ಭಾರತೀಯನ ಪ್ರೇಮ ಬರಿಯ ನೆಲದ ಪ್ರೀತಿಯಲ್ಲ, ತನ್ನ ನೆಲವನ್ನು ಬರಿಯ ಮಣ್ಣು ಎಂದು ತಿಳಿಯದೇ **"ಮಾತಾ ಭೂಮಿಃ ಪುತ್ರೋಹಂ ಪೃಥಿವ್ಯಾಃ"** ಎಂದು ಭಕ್ತಿಯಿಂದ ಆದರಿಸುತ್ತಾರೆ. ಭಾರತದ ಜನತೆಯ ಅಂತರಂಗದಲ್ಲಿ ಬೇರೂರಿದ ರಾಷ್ಟ್ರೀಯತೆಯ ಭಾವನೆ ಆಧ್ಯಾತ್ಮಿಕವಾದದು, ಸುಸಂಸ್ಕೃತವಾದದು. ಈ ಪ್ರಜ್ಞೆ ಮಾನವನ ಹುಟ್ಟಿನಿಂದಲೇ ಬೆಳೆದು ಬಂದ ಜೀವನಸ್ವರೂಪವೇ ಆಗಿದೆ. ಈ ಭಾವನೆ ಕಾಲದ ಎಣಿಕೆಗೆ ಸಿಗದಷ್ಟು ಪ್ರಾಚೀನತೆಯನ್ನು ಪಡೆದು ಭಾರತೀಯರ ಇಡೀ ಬದುಕನ್ನೇ ಆವರಿಸಿ ನಿಂತಿದೆ. ಯುಗಯುಗಗಳಿಂದ ಜನತೆಯ ಏಕತೆಗಾಗಿ ನಮ್ಮ ಪ್ರಾಚೀನ ಋಷಿಗಳು, ವಿದ್ವಾಂಸರು, ಧರ್ಮಶಾಸ್ತ್ರಕಾರರು ಹಲವು ಬಗೆಯಲ್ಲಿ ಶ್ರಮಿಸಿದ್ದಾರೆ. ಅದರ ಫಲವಾಗಿ ಭಾರತದ ಧಾರ್ಮಿಕ, ಸಾಮಾಜಿಕ, ಸಾಂಸ್ಕೃತಿಕ ಜೀವನ, ಎಲ್ಲವೂ ಒಂದೇ ಕೇಂದ್ರಬಿಂದುವಿನಲ್ಲಿ ಅಡಕಗೊಳಿಸಿ ಇಡೀ ಜನಾಂಗದ ದೃಷ್ಟಿಯನ್ನು ಭಾವೈಕ್ಯತೆಯ ಕಡೆಗೆ ಹರಿಸಿದ್ದಾರೆ. ಅಂಥವರಲ್ಲಿ ಬಂಗಾಳಿಯ ಪ್ರಸಿದ್ಧ ದಾರ್ಶನಿಕರಾಗಿರುವ ರವೀಂದ್ರನಾಥ ಠಾಕೂರರು ಸಮಾನತೆಯ ವಿಶ್ವಮಾನವ ಸಂದೇಶವನ್ನು ಸಾರಿದ ಧೀಮಂತರು. ಅಂತೆಯೇ ಕನ್ನಡ ಮತ್ತು ಬಂಗಾಳಿಯ ನಂಟು ನಿಕಟವೂ ಆತ್ಮೀಯವೂ ಆಗಿರುವಂತದ್ದು. ಠಾಕೂರವರ ಬಹುತೇಕ ಬರವಣಿಗೆಗಳು ವಿಶ್ವಪ್ರಜ್ಞೆಯನ್ನು ಮೂಡಿಸಿವಂತದ್ದು ಆಗಿವೆ. ರಾಷ್ಟ್ರೀಯತೆಯನ್ನು ಬಿಂಬಿಸುವ ಠಾಕೂರರ **'ಗೋರ'** ಕಾದಂಬರಿಯು ಪ್ರಸ್ತುತ ದಿನಮಾನಗಳಿಗೆ ಬೆಳಕು ಕೊಡುವಂತದ್ದು.

ಠಾಕೂರರು ಬರೆದಿರುವ ಮಹಾಕಾವ್ಯದಂತೆ ಗೋಚರಿಸುವ ಕಾದಂಬರಿ **ಗೋರ.** ೧೯೧೦ರಲ್ಲಿ ಪ್ರಕಟಗೊಂಡ ಕಾದಂಬರಿಯಾಗಿದೆ. ಆಂಗ್ಲ ಶಿಕ್ಷಿತ ಭಾರತೀಯ ಮಧ್ಯಮ ವರ್ಗದವರ ಸಂಕಟ, ಅವರ ಆಶಯ ಹಾಗೂ ಸಾಧನೆಯ ಮೂಲಭೂತ ನಿರರ್ಥಕತೆಯ ಬಗ್ಗೆ ಮೊದಲು ಬೊಟ್ಟುಮಾಡಿ ತೋರಿಸಿದವರು. ಬಂಗಾಳದಲ್ಲಿ ನಡೆದ ಪರಕೀಯರ ಆಡಳಿತ ಪದ್ಧತಿಯನ್ನು ಖಂಡಿಸುವ ಹಾಗೂ ಒಪ್ಪಿಕೊಳ್ಳುವ ನೈಜತೆಯನ್ನು ಇಲ್ಲಿ ಕಾಣಬಹುದು. ಠಾಕೂರವರು ಗೋರನ ಮೂಲಕ ಭಾರತೀಯತ್ವವೆಂದರೆ ಹಿಂದುತ್ವ ಅಥವಾ ಬ್ರಹ್ಮತ್ವವಲ್ಲ, ಭಾರತೀಯತ್ವದಡೆಗೆ  ವಿಶ್ವಮಾನವ ಸ್ವನಿರ್ಭರಗಳನ್ನು ಭಾರತೀಯತ್ವದ ಕಡೆಗೆ ನಾಯಕ ಮುಖಮಾಡಿರುವುದು ಮತ್ತು ಯಾವ ರೀತಿಯಾಗಿ ಪಡೆಯಲೂ ಸಿದ್ಧನಾಗಿದ್ದಾನೆ ಎಂಬುದನ್ನು ತಿಳಿಸುವುದು ಈ ಕಾದಂಬರಿಯ ವಸ್ತು. ಗೋರನು ತನ್ನ ವೃತ್ತಾಂತವನ್ನು ತಿಳಿದುಕೊಳ್ಳದೇ ಹಿಂದುತ್ವದ ಬಗ್ಗೆ ಅಪಾರವಾದ ಪ್ರೀತಿಯನ್ನು, ಶ್ರದ್ಧೆಭಕ್ತಿಯನ್ನು ತೋರಿಸಿರುವುದು ಇಲ್ಲಿ ಕಂಡುಬರುತ್ತದೆ. ತನ್ನ ತಾಯಿ ತಂದೆಯರು ಯಾರು ಎನ್ನುವ ಸತ್ಯಾಂಶವನ್ನು ತಿಳಿಯದೇ ದೇಶ ಪ್ರೇಮವನ್ನು ಹಿಂದುತ್ವದಲ್ಲಿ ಕಾಣಲು ಬಯಸುತ್ತಾನೆ. ಯಾರೇ ಬಂದರೂ ಅವರಿಗೂ ಹಿಂದುತ್ವ ಪ್ರಜ್ಞೆಯನ್ನು ಇಟ್ಟುಕೊಂಡು ವಾದ ವಿವಾದಗಳನ್ನು ಮಾಡಿ ಅವರಿಗೆ ಸೋಲನ್ನು ಒಪ್ಪಿಕೊಳ್ಳುವಂತೆ ಮಾಡುವ ಕೌಶಲ್ಯ ಗೋರನಲ್ಲಿರುವುದು ಸ್ಪಷ್ಟವಾಗಿದೆ. ಅನನ್ಯವಾದ ಸ್ನೇಹ ಸಂಬಂಧಗಳನ್ನು ಇಟ್ಟುಕೊಂಡಿರುವುದು ಗೋರ ಆತ್ಮೀಯ ಸ್ನೇಹಿತನಾದ ವಿನಯನಲ್ಲಿ ಹಿಂದುತ್ವವನ್ನು ಪ್ರತಿಪಾದಿಸಲು ಮುಂದಾಗಿರುವುದನ್ನು ಕಾಣಬಹುದು. ಈ ಕಾದಂಬರಿಯಲ್ಲಿ ರಾಷ್ಟ್ರೀಯತೆ ಭಾವನೆ ಒಂದು ಕಡೆಯಾದರೆ ಧರ್ಮಗಳಲ್ಲಿ ಶ್ರೇಷ್ಠತೆ ಕನಿಷ್ಟತೆಗಳನ್ನು ಹೆಣೆಯಲಾಗಿದೆ. ಗೋರ ಅತಿಹೆಚ್ಚು ಹಿಂದುತ್ವವಾದಿ ತನ್ನ ಸುತ್ತಮುತ್ತಲ್ಲಿನ ವಾತಾವರಣವನ್ನು ಅಲ್ಲಿನ ಜನರನ್ನು ಹೇಗೆ ಮೋಡಿಮಾಡುತ್ತ ಅವನ ಎದುರಿಗೆ ಯಾರೂ ಮಾತನಾಡದಂತೆ ಮಾಡುತ್ತಾನೆ. ಇಲ್ಲಿ ಬ್ರಹ್ಮಸಮಾಜದ ಪಾವಿತ್ರತೆಯನ್ನು ರೂಢಿ–ಸಂಪ್ರದಾಯಗಳನ್ನು ನೋಡಿದರೆ ಮತ್ತೊಂದು ಕಡೆ ಹಿಂದುತ್ವವನ್ನು ಶ್ರೇಷ್ಠತೆಯ ಭಾಗವಾಗಿ ಕಾಣುವಂತದ್ದು. ಈ ಎರಡು ಗುಂಪುಗಳ ನಡುವೆ ಸಮುದಾಯಗಳ ಹಿನ್ನೆಲೆಯಲ್ಲಿ ಸಂಘರ್ಷಕ್ಕೆ ಎಡೆಮಾಡಿಕೊಟ್ಟಿದೆ.

ಬ್ರಿಟಿಷರ ಆಡಳಿತ ಪದ್ಧತಿಯ ಜೊತೆಯಲ್ಲಿಯೇ ಬ್ರಹ್ಮಸವಾಜದ ಸಂಪ್ರದಾಯಗಳು ಹಿಂದುತ್ವವನ್ನು ಪ್ರತಿಪಾದಿಸುವ ಗುಂಪುಗಳು ಶ್ರೇಷ್ಠ ಕನಿಷ್ಟತೆಗಳ ನಡುವೆ ಸಿಕ್ಕಿಕೊಂಡಿರುವುದು ವಿಷಾದದ ಸಂಗತಿಯಾಗಿದೆ. ಈ ಕಾದಂಬರಿಯಲ್ಲಿ ಬರುವ ಪಾತ್ರಗಳನ್ನು ವಿಭಿನ್ನ ರೀತಿಯ ಜಾಡನ್ನು ತುಳಿಯುತ್ತ ಸ್ವಾಭಿಮಾನಗಳಿಗೆ ಯಾವುದೇ ರೀತಿಯ ಧಕ್ಕೆ ಬರದಂತೆ ರೂಪಿಸಿದ್ದಾರೆ. ರಾಷ್ಟ್ರೀಯ ಪ್ರೇಮವನ್ನು ಒಳಗೊಂಡಂತೆ ಧರ್ಮ, ಜಾತಿ, ಭೂ ಗಡಿರೇಖೆ ಹಾಗೂ ಭಾಷೆಯನ್ನು ಮೀರಿದ ಬೃಹತ್ ಜಾತ್ಯಾತೀತ ರಾಷ್ಟ್ರೀಯತೆಯನ್ನು ಕಟ್ಟಿಕೊಡುವ ಪ್ರಯತ್ನವನ್ನು ಈ ಕಾದಂಬರಿಯಲ್ಲಿ ಠಾಕೂರವರು ಮಾಡಿದ್ದಾರೆ. ಪ್ರಾಚೀನತೆ ಹಾಗೂ ಆಧುನಿಕತೆಯ ನಡುವೆ ನಡೆಯುವ ತೊಳಲಾಟಗಳನ್ನು ಇಲ್ಲಿ ಗಮನಿಸಬಹುದು. ಬ್ರಹ್ಮಸಮಾಜದಲ್ಲಿ ಮೂಡಿರುವ ಪ್ರಾಚೀನತೆ, ಪರಂಪರೆಯ ಗುರುತನ್ನು ಮುಂದುವರೆಸಿಕೊಂಡು ಹೋಗುವ ದಾರಿ ಒಂದು ಕಡೆಯಾದರೆ, ಮತ್ತೊಂದು ಕಡೆ ಹಿಂದುತ್ವವನ್ನು ಪ್ರತಿಪಾದಿಸುತ್ತ ತನಗೆ ಬೇಕಾದ ಆಡಂಬರದ ಪ್ರೀತಿ, ವಾತ್ಸಲ್ಯವನ್ನು ಹಿಂದುತ್ವದಲ್ಲಿ ಕಾಣಬಹುದು. ಕಾದಂಬರಿಯ ಉದ್ದಕ್ಕೂ ಪ್ರಾಚೀನತೆ ಮತ್ತು ಆಧುನಿಕತೆಗಳು



ಮೇಳೈಸಿಕೊಂಡು ತಮ್ಮದೇಯಾದ ದಾರಿಯಲ್ಲಿ ಹೋಗುತಿರುವುದನ್ನು ಕಾಣಬಹುದು. ರಾಷ್ಟ್ರೀಯತೆ ಎಂಬ ಹೆಸರಿನೊಂದಿಗೆ ಧರ್ಮದಲ್ಲಿನ ಪ್ರೇಮವು ಗೋರಾ ಅಂತರಾಳದಲ್ಲಿ ಸದಾ ಮಿಡಿಯುವ ಶಕ್ತಿಯಾಗಿತ್ತು ಎಂದು ತಿಳಿಯುತ್ತದೆ.

**"ಹಿಂದುತ್ವ ಎಂದರೇ ಭಾರತ ಭಾರತ ಎಂದರೇ ಹಿಂದುತ್ವ"** ಎಂಬುದನ್ನು ಬದ್ಧವಾಗಿ ರೂಢಿಸಿಕೊಂಡ ಗೋರ ತನ್ನ ಜೀವನದ ಸತ್ಯಾಂಶಗಳೊಂದಿಗೆ ಹೇಗೆ ಅನುಸಂಧಾನ ಮಾಡಿಕೊಂಡ ಎಂಬುದನ್ನು ಇಲ್ಲಿ ಗಮನಿಸಬಹುದು. 'ಹಿಂದುತ್ವ' ಎಂದರೆ ಭಾರತ ಎನ್ನುವುದಾದರೆ ಭಾರತದಲ್ಲಿ ಹಿಂದುಗಳು ಮಾತ್ರ ಜೀವಿಸುತ್ತಿರುವರೇ? ಬೇರೆ ಧರ್ಮದವರಾದ ಮುಸ್ಲಿಂಮರು, ಕ್ರಿಶ್ಚಿಯನ್ನರು, ಸಿಖ್ಖರು, ಬೌದ್ಧರು, ಜೈನರು ಇವರು ಭಾರತದಲಿಲ್ಲವೇ? ಎಂಬ ಪ್ರಶ್ನೆಗಳು ಹುಟ್ಟಿಕೊಳ್ಳುತ್ತವೆ. ರಾಷ್ಟ್ರೀಯತೆ ಎಂದರೆ ಕೇವಲ ಒಂದು ಜಾತಿಗೆ, ಒಂದು ಧರ್ಮಕ್ಕೆ ಹೋಲಿಕೆ ಮಾಡಲಾಗುವುದಿಲ್ಲ. ಭಾರತವು ಬಹುತ್ವದ ರಾಷ್ಟ್ರವಾಗಿದೆ. ಎಲ್ಲ ಧರ್ಮದವರು ಭಾರತದಲ್ಲಿ ನೆಲೆಸಿದ್ದಾರೆ. ಅವರೆಲ್ಲರೂ ನಮ್ಮವರೆ ಇಲ್ಲಿ ಧರ್ಮಗಳು ಮುಖ್ಯವಲ್ಲ, ಎಲ್ಲ ಧರ್ಮಗಳು ಒಂದೇ ಎಂಬ ಐಕ್ಯತೆಯ ಮಂತ್ರವೇ ರಾಷ್ಟ್ರೀಯತೆ. ಗೋರ ಹಿಂದೂ ಕುಟುಂಬದ ಒಬ್ಬ ಕಟ್ಟಾ ಸಂಪ್ರದಾಯಸ್ಥನಾಗಿ ನಿಲ್ಲುತ್ತಾನೆ. ಈ ಬಿಸಿರಕ್ತದ ತರುಣ ಬ್ರಹ್ಮಸಮಾಜದ ನಿಯಮಗಳನ್ನು ಖಂಡಿಸಿ, ಹಿಂದೂ ಸಾಮ್ರಾಜ್ಯದ ಕನಸು ಕಂಡವನು. ಆದರೆ ಕಾದಂಬರಿಯ ಕೊನೆಯಲ್ಲಿ ಗೋರನಿಗೆ ತಾನು ಹಿಂದೂ ಅಲ್ಲ ಎಂಬ ಸತ್ಯ ಗೊತ್ತಾಗುತ್ತದೆ. ಆತನು ಬದಲಾವಣೆ ಹಾದಿಯನ್ನು ತುಳಿಯುತ್ತಾನೆ. ಹಿಂದುತ್ವದಲ್ಲಿದ್ದ ಅತಿಯಾದ ಮೋಹದಿಂದ ಒಂದು ರೀತಿಯ ಬಿಡುಗಡೆಯನ್ನು ಪಡೆಯುತ್ತಾನೆ. ಗೋರನಿಗೆ ಈಗ ಅಘಾತವಾಗಿದೆ, ಭ್ರಮನಿರಸನವಾಗಿದೆ. ಅದರ ಜೊತೆಯಲ್ಲಿ ಅವನಿಗೆ ಹೊಸ ಅರಿವೂ ಉಂಟಾಗಿದೆ. ಆ ಅರಿವೂ ಏನೆಂದರೆ ಎಲ್ಲಕ್ಕಿಂತ ಮುಖ್ಯವಾಗಿರುವುದು ಜಾತಿ, ಮತ, ಧರ್ಮ, ಭೂ ಪ್ರದೇಶ, ಭಾಷೆ ಅಲ್ಲ ಎಂಬುದು. ಎಲ್ಲರೊಡನೆ ಒಂದಾಗುವಂತ ಮುಕ್ತ ಮನಸ್ಸು, ಪ್ರೀತಿ, ಮತ್ತು ಮಾನವೀಯ ಮೌಲ್ಯಗಳನ್ನು ತುಂಬಿಕೊಳ್ಳುತ್ತಾನೆ. ಈ ಕಾರಣದಿಂದಾಗಿಯೇ ಅವನು ಕಾದಂಬರಿಯ ಕೊನೆಯಲ್ಲಿ ಹೇಳುತ್ತಾನೆ.

ಪರೇಶಬಾಬುವಿಗೆ ಹಗಲೂ ರಾತ್ರಿ ನಾನು ಯಾವುದಕ್ಕಾಗಿ ಹಂಬಲಿಸಿ ನಿರಾಶನಾಗುತ್ತಿದ್ದೆನೋ ಅದನ್ನು ಈ ದಿನ ನಾನು ಪಡೆದಿದ್ದೇನೆ ಎಂದು. ಇವತ್ತು ನಾನು ನಿಜವಾಗಿಯೂ ಭಾರತೀಯನಾಗಿದ್ದೇನೆ. ಈಗ ನನ್ನಲ್ಲಿ ಹಿಂದೂ, ಮುಸ್ಲಿಂ, ಕ್ರಿಶ್ಚಿಯನ್ ಎಂಬ ಯಾವುದೇ ಭೇದಭಾವವಿಲ್ಲ. ನಾನು ಈಗ ಸಮಾನತೆಯ ದಾರಿಯನ್ನು ಕಂಡುಕೊಂಡಿದ್ದೇನೆ. ಭರತವರ್ಷದ ಪ್ರತಿಯೊಂದು ಜಾತಿಯೂ ನನ್ನ ಜಾತಿ, ಎಲ್ಲರ ಆಹಾರವೂ ನನ್ನ ಆಹಾರ ಎಂದು ಹೆಮ್ಮೆಯಿಂದ ಹೇಳುತ್ತಾನೆ ಗೋರ. ಯಾವ ಮಡಿ ಮೈಲಿಗೆಯನ್ನು ನಂಬದ ತನ್ನ ಸಾಕು ತಾಯಿಯಲ್ಲಿ ಭಾರತಮಾತೆಯನ್ನು ಕಾಣುತ್ತಾನೆ. ಅಮ್ಮ ನೀನೆ ನನ್ನ ನಿಜವಾದ ತಾಯಿ ನಾನು ಎಲ್ಲೆಲ್ಲೋ ಹುಡುಕಾಡಿದ ತಾಯಿ ಇಲ್ಲೇ ನನ್ನ ಕೋಣೆಯಲ್ಲೇ ಇದ್ದಾಳೆ ನಿನಗೆ ಜಾತಿಯ ಹಂಗಿಲ್ಲ, ಭೇದವಿಲ್ಲ, ನಿನ್ನಲ್ಲಿ ದ್ವೇಷವೆಂಬುವುದಿಲ್ಲ. ನೀನು ಸದ್ಗುಣದ ಪ್ರತೀಕ. ನಮ್ಮೆಲ್ಲರ ಸಾಕ್ಷಾತ್ ಕಲ್ಯಾಣಮೂರ್ತಿ ನೀನೆ ನನ್ನ ಭಾರತಮಾತೆ ಎಂದು ಹೇಳುತ್ತಾನೆ ಆನಂದಮಯಿ ತಾಯಿಗೆ. ದೇಶಕೊಸ್ಕರ ನಾನೇನು ಮಾಡಬೇಕು ಎಂದು ಗೋರನಿಗೆ ವಿನಯ ಕೇಳುತ್ತಾನೆ. ಅದಕ್ಕೆ ಗೋರನ ಉತ್ತರ ಸಾಧನೆ ಮಾಡು ಮನಸ್ಸಿನಲ್ಲಿ ವಿಶ್ವಾಸವೊಂದು ದೃಢವಾಗಿದ್ದಲ್ಲಿ ಕಠೋರವಾದ

ಸಾಧನೆಯನ್ನು ಸುಖವನ್ನು ಪಡೆಯಬಹುದೆಂದು ಗೋರ ವಿನಯನಿಗೆ ತಿಳಿಸುತ್ತಾನೆ. ಇಲ್ಲಿ ವಿನಯ ಬ್ರಹ್ಮಸಮಾಜದ ಆಚಾರಣೆಗಳನ್ನು ಒಪ್ಪಿಕೊಳ್ಳುತ್ತಾನೆ. ವ್ಯಕ್ತಿ ಮತ್ತು ಧರ್ಮದ ಕಡೆಗೆ ವಿಚಾರಗಳು ನಡೆಯುತ್ತವೆ, ಆದರೆ ಗೋರನ ವಿಷಯ ವ್ಯಕ್ತಿ ಸಮಾಜಗಳನ್ನು ತುಚ್ಛವೆಂದೆನಿಸಿ ಕೇವಲ ಧರ್ಮವನ್ನೇ ನಾನು ಒಪ್ಪುವುದಿಲ್ಲ ಎಂದು ತಿಳಿಸುತ್ತಾನೆ. ಗೋರ ಮತ್ತು ವಿನಯನ ನಡುವೆ ವಾದ–ವಿವಾದಗಳು ಜರಗುತ್ತವೆ. ಸಹೃದಯತೆಯಿಂದ ಅರಿಯುವ ವಿಚಾರ, ಬ್ರಹ್ಮಸಮಾಜದ ಕನ್ಯೆಯನ್ನು ಮದುವೆಯಾಗಿ ನೀನು ದೇಶದ ಸರ್ವಸಾಧಾರಣ ಜನರಿಂದ ನಿನ್ನನ್ನು ಬೇರೆ ಮಾಡಿಕೊಳ್ಳಬಯಸುತ್ತಿರುವುದೇ ನನ್ನ ಪಾಲಿಗೆ ಬಹಳ ದುಃಖದ ಸಂಗತಿಯಾಗಿದೆ. ಈ ಕೆಲಸವನ್ನೂ ನೀನು ಮಾಡಬಲ್ಲೆ, ನಾನು ಮಾತ್ರ ಈ ರೀತಿ ಮಾಡುವುದಿಲ್ಲ ಮಾಡಲಾರೆ. ಇದೇ ಸ್ಥಳದಲ್ಲಿ ನನಗೂ ನಿನಗೂ ಇರುವ ಭಿನ್ನತೆ. ಜ್ಞಾನದಲ್ಲಾಗಲಿ ಅಥವಾ ಬುದ್ಧಿಯಲ್ಲಾಗಲಿ ಭಿನ್ನತೆಯಿಲ್ಲ. ನಿನಗೆ ಪ್ರೇಮವಿದೆಯೋ ಅದರಲ್ಲಿ ನನಗೆ ಅಸಕ್ತಿಯಿಲ್ಲ ನನಗೆ ಇರುವುದು ದೇಶದ ಬಗ್ಗೆ ಪ್ರೀತಿ ವಿಶ್ವಾಸ ಎಂದು ಹೇಳುತ್ತಾನೆ. ನಾನು ಭರತವರ್ಷವನ್ನು ಪ್ರೀತಿಸುತ್ತೇನೆ. ನೀನು ಕತ್ತಿಯಿಂದ ಪ್ರಹಾರಮಾಡಿ ನಿನ್ನನ್ನು ಬಿಡಿಸಿಕೊಳ್ಳಲೆತ್ನಿಸುತ್ತಿರುವಯೋ ಅಲ್ಲಿ ನಿನ್ನಲ್ಲಿ ವೇದನೆಯಿಲ್ಲ. ಆದರೆ ನನ್ನ ಪ್ರಾಣವೇ ಭರತವರ್ಷದ ತಾಯಿಯ ಮೇಲಿದೆ. ನಾನು ಭರತವರ್ಷವನ್ನು ಪ್ರೀತಿಸುತ್ತೇನೆ. ನೀನು ಮನ ಬಂದಂತೆ ನಿಂದಿಸು, ಮನಬಂದಂತೆ ದೂಷಿಸು! ಆದರೆ ನಾನು ಅದನ್ನೇ ಪ್ರೀತಿಸುತ್ತೇನೆ. ಅದಕ್ಕಿಂತ ಹೆಚ್ಚಾಗಿ ನಾನು ನನ್ನನಾಗಲಿ ಅಥವಾ ಬೇರೆಯವರನ್ನಾಗಲಿ ಪ್ರೀತಿಸುವುದಿಲ್ಲ. ಭರತವರ್ಷದೊಡನೆ ನನ್ನ ಸಂಬಂಧವು ಯಾವುದೇ ರೀತಿಯ ಲೋಪವಾಗದಂತೆ ನೋಡಿಕೊಳ್ಳುತ್ತೇನೆ. ಭರತಮಾತೆಗೆ ವಿರುದ್ಧವಾಗಿ ಕೂದಲು ಎಳೆಯಷ್ಟಾದರೂ ವಿಚ್ಛೇದನಾಗುವಂತಹ ಕೆಲಸವನ್ನು ನಾನು ಕನಸ್ಸಿನಲ್ಲಿಯೂ ಮಾಡಲಾರೆ ಎಂದು ಹೇಳುತ್ತಾನೆ ವಿನಯನಿಗೆ.

**ಉಪಸಂಹಾರ:**

ಇಲ್ಲಿ ತಿಳಿಯ ಬೇಕಾದ ಮುಖ್ಯ ವಿಚಾರ ಎಲ್ಲ ಧರ್ಮಗಳನ್ನು ಒಂದುಗೂಡಿಸುವ ಮತ್ತು ಅವುಗಳನ್ನು ಬೆಸೆಯುವ ಕೆಲಸ ಮಾಡಬೇಕಾಗಿದೆ. ವಿಶಾಲವಾದ ಭವ್ಯವಾದ ಭಾರತದ ಮಡಿಲಲ್ಲಿ ಎಲ್ಲ ಮಕ್ಕಳನ್ನು ಸಾಕುತ್ತಿರುವವಳು ಜನನಿ ಜನ್ಮಭೂಮಿ ಭಾರತಮಾತೆ ತಾಯಿಯಾಗಿದ್ದಾಳೆ. ಈ ತಾಯಿಗೆ ಅಪಕೀರ್ತಿಯನ್ನು ತರದಂತೆ ನೋಡಿಕೊಳ್ಳಬೇಕಾಗಿದೆ. ಮಾನವ ಜನಾಂಗವು ಅಪೇಕ್ಷಿಸುವ ಎಲ್ಲ ಆದರ್ಶ ಮೌಲ್ಯಗಳು ಭಾರತಮಾತೆಯ ಮಡಿಲಲ್ಲಿವೆ. ಸತ್ಯ, ನಿಸ್ವಾರ್ಥತೆ, ಒಳ್ಳೆಯತನ, ಮತ್ತು ಸುಂದರ ಎಂಬುವು ಆ ನಿರ್ದೇಶಗಳಾಗಿವೆ. ಸತ್ಯನಿಷ್ಠೆ ಪ್ರಾಮಾಣಿಕತೆ ಮತ್ತು ಸದೃಢತೆಯನ್ನು ಭಾರತದ ರಾಷ್ಟ್ರೀಯತೆ ನಮಗೆ ಕಲಿಸಿಕೊಟ್ಟಿದೆ. ಸೇವಾ ಮನೋಭಾವ ಮತ್ತು ತ್ಯಾಗಬುದ್ಧಿ ಸಹ ಅದರ ಕಾಣಿಕೆಯಾಗಿದೆ. ರಾಷ್ಟ್ರಪ್ರೇಮದಿಂದ ದೇಶಭಕ್ತಿಯಿಂದ ನಮ್ಮಲ್ಲಿಯೇ ಸೃಜನಾತ್ಮಕ ಶಕ್ತಿಯನ್ನು ಹಿಗ್ಗಿಸಿದೆ. ಶತಮಾನಗಳ ಕಾಲ ಆ ಶಕ್ತಿಯು ನಮ್ಮ ಜನರಲ್ಲಿ ಸುಪ್ತವಾಗಿತ್ತು. ಭಾರತದ ಪ್ರಜೆಯೂ ಎಲ್ಲ ರಾಷ್ಟ್ರಗಳನ್ನು ಗೌರವಿಸುವ, ಅಭಿನಂದಿಸು, ಪ್ರೀತಿ ವಿಶ್ವಾಸಗಳನ್ನು ತೋರಿಸುವ ಮನಸ್ಸನ್ನು ಹೊಂದಿರುವಂತವರು ಭಾರತದ ಪ್ರಜೆಗಳು. ಭಾರತದ ರಾಷ್ಟ್ರೀಯತೆಗೆ ಯಾವುದೇ ರೀತಿಯ ಧಕ್ಕೆ ಬರದಂತೆ ಕಾಪಾಡವುದು ಪ್ರತಿಯೊಬ್ಬ ಭಾರತೀಯ ಪ್ರಜೆಯ ಜವಾಬ್ದಾರಿಯಾಗಿದೆ.



**ಆಕರಗಳು**

೧. ಸಾವಿತ್ರಮ್ಮ ಎಚ್. ವಿ, (೧೯೯೨), ಗೋರ, ಮೂಲ ರವೀಂದ್ರನಾಥ ಠಾಕೂರ್, ಕಾವ್ಯಾಲಯ ಪ್ರಕಾಶಕರು, ಜಯನಗರ ಮೈಸೂರು.

೨. ಗಣೇಶ ಶರ್ಮ, (ಪರಿಷ್ಕೃತ ಮುದ್ರಣ ೨೦೧೨) ಗೋರ, ಸರಸ್ವತಿ ಪ್ರಕಾಶನ,

೩. ಜಯಪ್ರಕಾಶ ಬಂಜಿಗೆರೆ, (೨೦೦೦) ಕನ್ನಡ ರಾಷ್ಟ್ರೀಯತೆ, ಅಭಿನವ ಪ್ರಕಾಶನ, ಬೆಂಗಳೂರು.

೪. ನಿರುಪಮ ಲಲಿತಾ ಶಾಸ್ತ್ರಿ, (೨೦೧೨), ರಾಷ್ಟ್ರೀಯತೆ ಮತ್ತು ಕಾವ್ಯ, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು.

೫. ನಾಯಕ ಹಾ. ಮಾ, (೨೦೧೫) ರವೀಂದ್ರನಾಥ ಠಾಕೂರ್, ಗೀತಾಂಜಲಿ ಪುಸ್ತಕ ಪ್ರಕಾಶನ, ಬೆಂಗಳೂರು.

೬.ರಾಮಕೃಷ್ಣ ಜಿ, (೨೦೧೮) ರಾಷ್ಟ್ರೀಯತೆಯ ವ್ಯಾಖ್ಯಾನ, ಹೊಸತು ಮಾಸ ಪತ್ರಿಕೆ.

೭.ಶಿವರಾಮ ಪಡಿಕ್ಕಲ್, (೨೦೦೧) ನಾಡು ನುಡಿಯ ರೂಪಕ, ಪ್ರಸಾರಾಂಗ, ಮಂಗಳೂರು ವಿಶ್ವವಿದ್ಯಾಲಯ, ಮಂಗಳ ಗಂಗೋತ್ರಿ.



# ಜೈನ ಧರ್ಮ ಮತ್ತು ಬಂಕಾಪುರ

ಜಗದೀಶಗೌಡ ಚ. ಸಿದ್ದನಗೌಡ್ರ

ಒಂದು ನಾಡಿನ ಜೀವಂತಿಕೆಯ ಸಾಕ್ಷಿ ಅಲ್ಲಿ ಬಾಳಿ ಬೆಳಗಿದ ಧರ್ಮಗಳು. ಅಂತೆಯೇ ಕರ್ನಾಟಕವು 'ಸರ್ವಧಮಗಳ ಆಡುಂಬೊಲ'ವೆನಿಸಿಕೊಂಡಿದೆ. ಈ ಕರ್ನಾಟಕದಲ್ಲಿ ಒಂದು ಅಂಗೈ ಅಗಲದ ಪ್ರದೇಶ ಬಂಕಾಪುರ. ಇಲ್ಲಿ ಬಾಳಿ ಬೆಳಗಿದ ಧರ್ಮಗಳಿಗೆ ಸಾಕ್ಷಿಯಾಗಿ ಗುಡಿ ಗೋಪುರಗಳು, ಜೈನಬಸದಿ, ಮಸೀದಿಗಳೂ ತಲೆ ಎತ್ತಿ ನಿಂತಿದೆ. ಧರ್ಮಜ್ಯೋತಿಗೆ ತೈಲವನ್ನೆರೆದು ಬೆಳಗಿಸಿ ಧರ್ಮಜಾಗೃತಿಗೈದ ಆಚಾರ್ಯ ಪರಂಪರೆ ಇಲ್ಲಿದೆ. ಸತ್ಯಕಥೆಯನ್ನು ಬಿತ್ತರಿಸುವ ಧಾರ್ಮಿಕ ಅವಶೇಷಗಳಿವೆ, ಕಾಲಾಂತರದಲ್ಲಿ ತಲೆ ಎತ್ತಿದ ಜೈನ ಶೈವಧರ್ಮಗಳ ಇತಿಹಾಸ ಇಲ್ಲಿದೆ. ದಕ್ಷಿಣ ಭಾರತದ ಜೈನಧರ್ಮದ ಇತಿಹಾಸವೆಂದರೆ ಕರ್ನಾಟಕದ ಶ್ರವಣಬೆಳಗೊಳ ಕಾಲಾಂತರದಲ್ಲಿ ಕೊಪ್ಪಳ, ಕಾರ್ಕಳ, ಹುಂಚ, ಬಂಕಾಪುರ ನೆನಪಾಗುತ್ತವೆ. ಜೈನಧರ್ಮದ ಅಧ್ವರ್ಯುಗಳಾದ ಪೂಜ್ಯಪಾದ, ಜಿನಸೇನಾಚಾರ್ಯ, ಗುಣಭದ್ರಾಚಾರ್ಯ, ಅಜಿತಸೇನಾಚಾರ್ಯ, ದೇವೇಂದ್ರಮುನಿಗಳು ಒಂದಿಲ್ಲೊಂದು ರೀತಿಯಲ್ಲಿ ಬಂಕಾಪುರ ಸಂಬಂಧವಿರಿಸಿಕೊಂಡಿದ್ದವರು. ರಾಷ್ಟ್ರಕೂಟ, ಗಂಗರ ಕಾಲಕ್ಕೆ ತಮ್ಮ ವಿದ್ವತ್ತು, ತಪಸ್ಸು, ಪಾಂಡಿತ್ಯಗಳಿಂದ ರಾಜಪೂಜಿತರಾದವರು. ತಮ್ಮ ಅಮೂಲ್ಯ ಕೃತಿಗಳ ಮೂಲಕ ಜೈನಸಾಹಿತ್ಯವನ್ನೂ ತನ್ಮೂಲಕ ಜೈನಧರ್ಮವನ್ನೂ ಶ್ರೀಮಂತಗೊಳಿಸಿದ ಮಹನೀಯರು. ಇವರ ವ್ಯವಸ್ಥಿತ ಬದುಕನ್ನು ಶಾಸನ ಮತ್ತು ಕಾವ್ಯಗಳು ಮನದುಂಬಿ ಹೊಗಳಿವೆ.

**ಪೂಜ್ಯಪಾದರು:**

ಜೈನಧರ್ಮದ ಇತಿಹಾಸದಲ್ಲಿ ಪೂಜ್ಯಪಾದರದ್ದು ಬಹುದೊಡ್ಡ ಹೆಸರು. ಕರ್ನಾಟಕದ ಕೊಳ್ಳೇಗಾಲಪುರದಲ್ಲಿ ಮಾಧವಭಟ್ಟ ಮತ್ತು ಶ್ರೀದೇವಿಯರ ಮಗನಾದ ದೇವನಂದಿಯ ಪಾದಗಳನ್ನು ದೇವತೆಗಳು ಪೂಜಿಸಿದ್ದರಿಂದ ಇವನು ಪೂಜ್ಯಪಾದನೆಂಬ ಹೆಸರು ಪಡೆದನೆಂದು ಶ್ರವಣಬೆಳಗೊಳ ಶಾಸನದ ಹೇಳಿಕೆ. ಸೋದರಮಾವ ವೈಯಾಕರಣಿ ಪಾಣಿನಿ, ಸೋದರಳಿಯ ತಾಂತ್ರಿಕ ನಾಗಾರ್ಜುನ. ತರ್ಕ, ವ್ಯಾಕರಣ, ದರ್ಶನ, ವೈದ್ಯ ಮೊದಲಾದ ವಿಷಯಗಳಲ್ಲಿ ಪರಿಣಿತರೆನಿಸಿದ ಇವರು 'ಸರ್ವಾರ್ಥ ಸಿದ್ಧಿ', 'ಸಮಾಧಿತಂತ್ರಶತಕ' ಮತ್ತು 'ಇಷ್ಟೋಪದೇಶ' ಕೃತಿಗಳ ಕರ್ತೃಗಳು. ರಾಜಾವಳಿ ಕಥೆಯಲ್ಲಿ 'ಪೂಜ್ಯಪಾದಯತೀಂದ್ರಂ ಪದನಾಡಿನೊಳು ತಪಂಗೆಯ್ಯುತ್ತೆ ತೀರ್ಥ ವಂದನೆಯಂ ಪೂಡಲೆಂದು ಆಂಧ್ರಕರ್ನಾಟಚೋಳಪಾಂಡ್ಯ ಮೊದಲಾದ ಎಲ್ಲಾ ದೇಶಂಗಳಂ ವಿಹಾರಿಸಿ ಕೌಂಗೆಲೆಯ ಶೈಲಕ್ಕಂಬಂದು ಜಿನಾಗಮಂ ಕೆಲವು ನೋಡಿ ತಿಳಿದುಪದೇಶಂ ಮಾಳ್ಪವರಿಲ್ಲದೆ ಕೆಲವು ಸಿದ್ಧಾಂತಂ ಮರೆಗರೆದಿರ್ದುದರಿಂ ಸಂದೇಹಗ್ರಸ್ತಮಾಗೆ ಪೂರ್ವವಿದೇಹಕ್ಕೆ ಪಾದಲೇಪೌಷಧಿ ಸಾಮರ್ಥದಿಂ ಪೋಗಿ, ಸಮವಸರಣದೊಳಿರ್ದ ಶ್ರೀ ಜಿನಪತಿಗಳಂ ವಂದಿಸಿ, ತತ್ತ್ವಮಂ ನಿಸ್ಸಣದೇಹಮಾಗರಿದಲ್ಲಿಯ ಪುಸ್ತಕದೊಳ್ ಬರೆದುಕೊಂಡು ದೈವಯತ್ತದಿಂ ಭರತಕ್ಷೇತ್ರಮನೆಯ್ದುವಲ್ಲಿ ಸೂರ್ಯಕಿರಣೋಷ್ಣದಿಂ ದೃಷ್ಟಿಪೋಗಿ ಬಂಕಾಪುರವಂಬುದರೊಳ್ ಶಾಂತೀಶ್ವರರಂ ವಂದಿಸಿ ಶಾಂತ್ಯಷ್ಟಕಮಂ ಪೇಳಿ ದೃಷ್ಟಿಯಂ ಪಡೆದು ಬಂದು ಸಿದ್ಧಾಂತಮಂ ಶಿಷ್ಯ ಪ್ರಶಿಷ್ಯರ್ಗ್ಗಮುಪದೇಶಂಗೆಯ್ದು ಲೌಕಿಕ ಪರಮಾರ್ಥಂಗಳಂ ರಚಿಸಿ ಸದ್ಗತಿ ಪ್ರಾಪ್ತರಾದರ್' ಎಂಬ ಘಟನೆ ಇದೆ. ಇಂಥ ಜ್ಞಾನಪಿಪಾಸು ಕುಟುಂಬದ ಪೂಜ್ಯಪಾದ ಕ್ರಿ. ಶ ೫ನೆಯ ಶತಮಾನದಲ್ಲಿ ಬಂಕಾಪುರದ ಶಾಂತಿನಾಥನನ್ನು ಕುರಿತು ಅಷ್ಟಕ ರಚಿಸಿ, ಕಳೆದುಕೊಂಡಿದ್ದರೆಂದು ದೃಷ್ಟಿಯನ್ನು ಮರಳಿ ಪಡೆದುಕೊಂಡಿದ್ದರೆಂದು ಪದ್ಮರಾಜನ ಪೂಜ್ಯಪಾದ ಚರಿತೆ ತಿಳಿಸುತ್ತದೆ.

**ಜೀನಸೇನಾಚಾರ್ಯರು:**

ಜೈನಧರ್ಮ, ಸಾಹಿತ್ಯವನ್ನು, ಶ್ರೀಮಂತಗೊಳಿಸಿದ ಇನ್ನೊಬ್ಬ ಆಚಾರ್ಯರು ಜಿನಸೇನರು. ಇವರ ಕಾಲ ಕ್ರಿ.ಶ. ೯ನೆಯ ಶತಮಾನ. ಪೂಜ್ಯಪಾದರ ಶಿಷ್ಯ ವೀರಸೇನಾರ್ಯ, ಜಿನಸೇನಾಚಾರ್ಯರ ಗುರು. ರಾಷ್ಟ್ರಕೂಟವಂಶದ ಕೀರ್ತಿಯನ್ನು ಬೆಳಗಿದ ನೃಪತುಂಗನ ಗುರು ಜಿನಸೇನರು ತ್ರಿಷಷ್ಟಿ ಶಲಾಕಾಪುರುಷ ಮಹಾಪುರಾಣ 'ಪೂರ್ವಪುರಾಣ'ದ ರಚಕರು. ಮಹಾಪುರಾಣದ ೪೨ ಪರ್ವಗಳನ್ನು ಬರೆಯುವಲ್ಲಿ ಇವರು ಅಕಾಲಮರಣ ಹೊಂದಲು, ಅವರ ಶಿಷ್ಯ ಗುಣಭದ್ರಾಚಾರ್ಯ ಅದರ ಮುಂದಿನ ಭಾಗ 'ಉತ್ತರಪುರಾಣ' ರಚಿಸಿದರು. ಜಿನಸೇನರ ಪೂರ್ವಪುರಾಣದ ಆರಂಭೋತ್ಸವವು ರಾಷ್ಟ್ರಕೂಟ ಅರಸನ ಸಾನಿಧ್ಯದಲ್ಲಿ ವಟಗ್ರಾಮದ ಜಿನಮಂದಿರದಲ್ಲಿ ಆಯಿತೆಂದು ಪ್ರತೀತಿ. ಬಂಕಾಪುರದ ಒಂದು ಭಾಗವೆನಿಸಿದ ಒಳಕೇರಿ (ವಳಕೇರಿ೭ ವಟಕೇರಿ೭ ವಟಗ್ರಾಮ)ವಟಗ್ರಾಮವಾಗಿರಬೇಕೆಂಬುದು ದಿ. ಆರ್.ಎಸ್.ಪಂಚಮುಖಿಯವರ 'ಕರ್ನಾಟಕ ಇತಿಹಾಸ' ಪುಟ ಸಂಖ್ಯ ೧೫೫ ರಲ್ಲಿಹೇಳಿಕೆ ಇದೆ. ಈ ವಟಗ್ರಾಮ ಬಡೋದಾ ಜಿಲ್ಲೆಯ ವಟೋದರಾ ಎಂದು ಡಾ. ಅಲ್ಟೇಕರರ ಅಭಿಪ್ರಾಯವಿದೆ.

ಇತ್ತೀಚೆಗೆ ಗಂಡಸಿ ಗ್ರಾಮದಲ್ಲಿ ದೊರೆತ ಶಾಸನೊಂದರಲ್ಲಿ ಜಿನಸೇನಾಚಾರ್ಯ ಮತ್ತು ವೀರಸೇನಾಚಾರ್ಯರ ಪ್ರಸ್ತಾವಿದೆ. ಜಿನಸೇನಾಚಾರ್ಯರು ರಚಿಸಿದ 'ಪೂರ್ವಪುರಾಣ'ವನ್ನು ಬಂಕಾಪುರದಲ್ಲಿ ಆನೆಯ ಮೇಲೆ ಅಂಬಾರಿಯಿಟ್ಟು ಮೆರವಣಿಗೆ ಮಾಡಿದ್ದರೆಂದು 'ಕನ್ನಡ ಶಾಸನದಲ್ಲಿ ಜಿನಸೇನ ಹಾಗೂ ಗುಣಭದ್ರಚಾರ್ಯ' ಲೇಖನದಲ್ಲಿ ವಿವರಿಸಲಾಗಿದೆ.

**ಗುಣಭದ್ರಾಚಾರ್ಯರು:**

ಜೈನಸಂಪ್ರದಾಯದ ಗಣ್ಯ ಪರಂಪರೆಗೆ ಸೇರಿದ ಗುಣಭದ್ರರನ್ನು ಶ್ರವಣ ಬೆಳಗೊಳ (೧೩೯೮) ಶಾಸನ ಜಿನಸೇನರ ಅಗ್ರಪುತ್ರನೆಂದು ಕರೆದಿದೆ. ಜಿನಸೇನಾಚಾರ್ಯರು 'ಪೂರ್ವಪುರಾಣದ' ೪೨ ಪರ್ವಗಳನ್ನು ಬರೆಯುವದರೊಳಗಾಗಿ ಮರಣ ಹೊಂದಿದ್ದರಿಂದ ಅವರ ಶಿಷ್ಯ ಗುಣಭದ್ರಾಚಾರ್ಯರು ಅದನ್ನು ಮುಂದುವರೆಸಿ ೪೭ ಪರ್ವಗಳ 'ಉತ್ತರಪುರಾಣ' ರಚಿಸಿದರು. ಜೈನಧರ್ಮದ ಇತಿಹಾಸದಲ್ಲಿ ಇವೆರಡು ಮೈಲುಗಲ್ಲು ಕೃತಿಗಳು.

ಪೂರ್ವಪುರಾಣದ ಪ್ರಾರಂಭೋತ್ಸವ, ಉತ್ತರಪುರಾಣದ ಮುಕ್ತಾಯ ಸಮಾರಂಭವೂ ಇಲ್ಲಿಯೇ ಆದಂತೆ ತಿಳಿದುಬರುತ್ತದೆ. ರಾಷ್ಟ್ರಕೂಟ ಸಾಮಂತ ಚೆಲ್ಲಕೇತನ ಮನೆತನದ ಬಂಕೇಯನ ಮಗ ಲೋಕಾದಿತ್ಯನ ಆಶ್ರಯದಲ್ಲಿ ಮುಕ್ತಾಯ ಸಮಾರಂಭ:

**ಅಕಾಲವರ್ಷೆ ಭೂಪಾಲೇ ಪಾಲಯತ್ಯಖಿಲಾಮಿಲಾಂ**
**ತಸ್ಮಿನ್ ವಿಧ್ವಸ್ತನಿಶ್ಯೇಷದ್ವಿಷಿ ವೀಧ್ರಯಶೋಜಷಿ**

**ಪದ್ಮಾಲಯ ಮುಕುಲಕುಲ ಪ್ರವಿಕಾಸಕಸತ್ಪ್ರತಾಪತತಮಹಸಿ**
**ಶ್ರೀಮತಿ ಲೋಕಾದಿತ್ಯೇ ಪ್ರಧ್ವಸ್ತಪ್ರಥಿಶತ್ರುಸಂತಮಸೇ**
**ಶಕನೃಪ ಕಾಲಾಭ್ಯಂತರ ವಿಂಶತ್ಯಧಿಕಾಷ್ಟಶತಮಿತಾಬ್ದಾಂತೇ**
**ಮಂಗಲಮಹಾರ್ಥಕಾರಿಣಿ ಪಿಂಗಲನಾಮನಿ ಸಮಸ್ತಜನ ಸುಖದೇ**
**ಶ್ರೀ ಪಂಚಮ್ಯಾಂ ಬುಧರ್ದ್ರಾಯುಜಿ ದಿವಸಕರೇ ಮಂತ್ರಿವಾರೇ ಬುಧಾಂಶೇ**
**ಪೂರ್ವಾಯಾಂ ಸಿಂಹಲಗ್ನೇ ಧನುಷಿ ಧರಣೇಜೋ ವೃಶ್ಚಿಕೇರ್ಕೇ**
**ಸೂರ್ಯೇಶುಕ್ರೆ ಕುಲೀರೇಗವಿಚಸುರುಗುಕಾನಿಷ್ಠಿತಂ ಭವ್ಯ ವರ್ಯೈಃ**
**ತುಲಾಯಾಂ ಪ್ರಾಪ್ತೇಜ್ಯಂ ಸರ್ವಸಾರಂ ಜಗತಿ**
**ವಿಜಯತೆ ಪುಣ್ಯಮೇ ತತ್ಪುರಾಣಂ॥**

ಎಂದು ಉತ್ತರಪುರಾಣದ ಪೀಠಿಕಾಪದ್ಯ ತಿಳಿಸಿದೆ. ಕ್ರಿ.ಶ. ೮೯೮ರಲ್ಲಿ ನೃಪತುಂಗನ ಸಾಮಂತ ಚಲ್ಲಕೇತನ ಲೋಕಾದಿತ್ಯನಿಗೆ ಉದಾರ ಆಶ್ರಯ, ನೆರವು ನೀಡಿ ತನ್ನ ಮನೆತನದ ಕೀರ್ತಿಯನ್ನು ಶಾಶ್ವತ ಹೆಚ್ಚಿಸಿದೆ.

**ಅಜಿತಸೇನಾಚಾರ್ಯರು:**

ಬಂಕಾಪುರವನ್ನು ತಮ್ಮ ಆಧ್ಯಾತ್ಮಿಕ, ಸಾಹಿತ್ಯಿಕ ಕ್ಷೇತ್ರವನ್ನಾಗಿ ಮಾಡಿಕೊಂಡ ಇನ್ನೊಬ್ಬ ಪ್ರಮುಖ ಜಿನಯತಿ ಅಜಿತಸೇನರು. 'ಶಬ್ದಚತುರ್ಮುಖರುಂ ತಾರ್ಕಿಕ ಚಕ್ರವರ್ತಿಗಳುಂ ವಾದಿಭಸಿಂಹರುಮೆನಿಸಿದಜಿತಸೇನದೇವರೆ' ಎಂದು ಕರೆಸಿಕೊಂಡ ಇವರು ಚಂದ್ರಕವಾಟಾನ್ವಯದವರು. ಕನ್ನಡ ಸಾಹಿತ್ಯದಲ್ಲಿ ಕವಿ ಶ್ರೇಷ್ಠರಾಗಿ, ಸವ್ಯಸಾಚಿಗಳಾಗಿ ಬೆಳಗಿದ ಕವಿರನ್ನ, ನಾಗವರ್ಮ ಚಾವುಂಡರಾಯರ ಗುರುಗಳು, ಕವಿರನ್ನ 'ಬಿಳಿಯರಳೆಯಂತೆ ಗಂಗಾಜಳದಂತೆಸೆವಜಿತಸೇನ ಮುನಿಪತಿಯು ಗುಣಾವಳಿಯಂತೆ ನೆಗಳ್ದಿ ಕೊಪಣಾಚಳದಂತೆ' ಎಂದು ಹಾಡಿಹರಸುವಲ್ಲಿ ಅಜಿತಸೇನರ ದಿವ್ಯ ವ್ಯಕ್ತಿತ್ವ ಗೋಚರಿಸುತ್ತದೆ. ಗಂಗ ರಾಚಮಲ್ಲ, ಮಾರಸಿಂಹರು ಇವರ ಶಿಷ್ಯರೆನಿಸಿದ್ದರು. ಬಂಕಾಪುರದಲ್ಲಿ ಇವರಲ್ಲಿ ಕವಿರನ್ನ ತನ್ನ ವಿದ್ಯಾಭ್ಯಾಸ ಮುಗಿಸಿಕೊಂಡನೆಂದು ವಿದ್ವಾಂಸರ ಹೇಳಿಕೆ. ಗಂಗ ಮಾರಸಿಂಹ ಬಂಕಾಪುರ ಅಜಿತಸೇನಾಚಾರ್ಯರ ಪಾದಮೂಲದಲ್ಲಿ ಮೂರು ದಿವಸ ಆರಾಧನಾ ವಿಧಿಯಿಂದ ನೋನ್ತು ಸಮಾಧಿ ಮರಣ ಪಡೆದನು. ಇಂಥ ಗುರುವರ್ಗವನ್ನು ಪಡೆದ ಬಂಕಾಪುರ ಸಾಹಿತ್ಯಕವಾಗಿ ಧಾರ್ಮಿಕವಾಗಿ ಉಚ್ಚಮಟ್ಟದ ಸಂಸ್ಕೃತಿಯನ್ನು ಹೊಂದಿದ ಪ್ರದೇಶವೆನಿಸಿತ್ತು.

**ದೇವೇಂದ್ರಮುನಿ:**

'ವಂಕಾಪುರ ಮುನೀಂದ್ರೋ ಭೂದ್ದೇವೇಂದ್ರೋರುಂದ್ರ ಸದ್ಗುಣ ಸಿದ್ಧಾನ್ತಾದ್ಯಾಗಮಾರ್ತ್ಥಜ್ಞೋ ಸ ಜ್ಞಾನಾದಿಗುಣಾನ್ವಿತ' ಎಂದು ಸೂಚಿಸುವ ಶ್ರವಣಬೆಳಗೊಳ (೧೨೦೦) ಶಾಸನ ದೇವೇಂದ್ರಮುನಿಯನ್ನು ಪರಿಚಯಿಸಿದೆ. ೧೦ನೆಯ ಶತಮಾನಗಳ ಜಿನಮುನಿಗಳ ಮಾಲಿಕೆಯಲ್ಲಿ ಉಲ್ಲೇಖಿಸಲ್ಪಟ್ಟ ಈ ಮುನಿ 'ದೇವೇಂದ್ರ ವಂದಿತ' ಎಂದು ಹೊಗಳಿಸಿಕೊಂಡಿರುವವನು ಈ ದೇವೇಂದ್ರಮುನಿಯನ್ನು ಬೇತಾಳ ಕೈಮುಗಿದುಕೊಂಡು ಜೊತ್ತುಂಗನು ಬಾಗಿಲನ್ನು ಕಾಯ್ದುಕೊಂಡು ಸದಾಸೇವೆ ಮಾಡುತ್ತಿದ್ದರೆಂದು ಈ ಶಾಸನದ ಹೇಳಿಕೆ ಇದೆ. ಈತ ಕನ್ನಡದ ಆದಿಕವಿ ಪಂಪನ ಗುರು ಎಂಬುದು ಗಮನಿಸಬೇಕಾದ ಅಂಶ.



**ಜಿನಾಲಯಗಳು:**

ರಾಷ್ಟ್ರಕೂಟ ದೊರೆಗಳು ಶಿವಭಕ್ತರಾಗಿದ್ದರೂ ಜೈನಧರ್ಮದ ಕಡೆಗೆ ಅವರ ಒಲವಿತ್ತು. ೯ನೆಯ ಶತಮಾನ ಜೈನಧರ್ಮದ ರಸಘಟ್ಟಿಯ ಕಾಲ. ಗಂಗಚಮೂಪತಿ ಚಾವುಂಡರಾಯ, ರಾಷ್ಟ್ರಕೂಟ ರಾಜ್ಯದ ಶಂಕರಗಂಡ ಚಾಲುಕ್ಯ ರಾಜ್ಯದಲ್ಲಿದ್ದ ಅತ್ತಿಮಬ್ಬೆ ಮುಂತಾದವರ ತಪಸ್ಸಿಗೆ ಸಮನಾದ ಜೈನನಿಷ್ಠೆಯ ಸಾರವನ್ನುಂಡು ಜೈನಧರ್ಮವು ಪುಷ್ಟವಾಯಿತು. ರಾಷ್ಟ್ರಕೂಟರ ಸಾಮಂತ ಚಲ್ಲಕೇತನರು ಜೈನಮತೀಯರೇ ಆದುದರಿಂದ ಇವರ ಕಾಲದಲ್ಲಿ ಜೈನಧರ್ಮ ಸೊಂಪಾಗಿಯೇ ಬೆಳೆಯಿತು. ರಾಷ್ಟ್ರಕೂಟ ಅಮೋಘವರ್ಷ ನೃಪತುಂಗ, ಇಂದ್ರ, ಸಾಮಂತ ಬಂಕೆಯ ಲೋಕಾದಿತ್ಯರು ಜೈನಧರ್ಮ ಹೆಚ್ಚಳಕ್ಕೆ ಶ್ರಮಿಸಿದರು. ಜಿನಸೇನಾಚಾರ್ಯ, ಗುಣಭದ್ರಾಚಾರ್ಯ, ಅಜಿತಸೇನಾಚಾರ್ಯರಂತಹ ಜ್ಞಾನನಿಧಿ, ತಪೋನಿಧಿಗಳ ಸಾನಿಧ್ಯದಿಂದ ಇತ್ತಲಿನ ಪರಿಸರಗಳು ಹೆಚ್ಚೆಚ್ಚು ಜಿನಪ್ರಭಾವದಿಂದ ಬೆಳಗಿದವು. ಜಿನಧರ್ಮದ ಹೆಚ್ಚಳದಂತೆ ಧರ್ಮ ಸಂಘಟನೆ, ಬಸದಿ ನಿರ್ಮಾಣಕಾರ್ಯಗಳು ಭರದಿಂದ ಮುನ್ನೆಡೆದವು. ಈ ಶತಮಾನದ ವೇಳೆಗೆ ಬಸದಿಯನ್ನು ಬಿಟ್ಟು ಹೊರಗೆ ಹೋಗಲಾರದ ಜೈನಮುನಿಗಳು ಅವನ್ನು ತಮ್ಮ ವಸತಿ ಕೇಂದ್ರಗಳನ್ನಾಗಿ ಮಾಡಿ ಕೊಳ್ಳತೊಡಗಿದರು. ಜಿನದೇವಾಲಯಗಳನ್ನು ಬಸದಿ ಎಂದು ಕರೆಯುವದಕ್ಕೆ ಕಾರಣ ಇದೇ ಆಗಿರಬೇಕು.

ಈ ಮುನಿಗಳ ವಿದ್ವತ್ತು ಅಪಾರವಾಗಿತ್ತು. ಅವರಲ್ಲಿ ಕೆಲವರಿಗೆ ಜೈನ ಗ್ರಂಥಗಳಲ್ಲಿ ಮಾತ್ರವಲ್ಲ, ಎಲ್ಲ ದರ್ಶನಗಳಲ್ಲೂ, ಎಲ್ಲ ಕಲೆಗಳಲ್ಲೂ, ಅನೇಕ ಭಾಷಾ ಸಾಹಿತ್ಯಗಳಲ್ಲೂ ಅದ್ಭುತವಾದ ಪರಿಶ್ರಮವಿತ್ತು. ಮುನಿಗಳು ನೆಲೆನಿಂತ ಕ್ಷೇತ್ರಗಳು ಸಾಂಸ್ಕೃತಿಕ ಸ್ಥಳಗಳಾಗಿ ಪರಿವರ್ತನೆಗೊಂಡವು. ಜೈನಧಾರ್ಮಿಕ ಕೇಂದ್ರಗಳೆನಿಸಿದವು. ಜೈನರುಗಳ ಪಾಂಡಿತ್ಯಕ್ಕೆ ಮೆಚ್ಚಿದ ರಾಜರು ಅವರನ್ನು ರಾಜ್ಯಪೂಜ್ಯರನ್ನಾಗಿಸಿಕೊಂಡರು. ಇದರಿಂದ ಬಸದಿಗಳು ರಾಜೋಚಿತ ಪುರಸ್ಕಾರಕ್ಕೆ ಒಳಗಾಗತೊಡಗಿದವು. ಇದಕ್ಕೆ ಬಂಕಾಪುರ ಹೊರತಾಗಿರಲಿಲ್ಲ. ಬಂಕಾಪುರದಲ್ಲಿ ಇಂಥ ಸುಪ್ರಸಿದ್ಧ ಬಸದಿಗಳ ಮಾಲಿಕೆಯಲ್ಲಿ ಧೋರ ಜಿನಾಲಯ, ಉರಿಪಟ್ಟಾಯಣ ಬಸದಿ, ಕೊಂತಿಮಹಾದೇವಿ ಬಸದಿ ನಿಟ್ಟಸಿಂಗಿ ಬಸದಿಗಳು ಇದ್ದುದಾಗಿ ತಿಳಿಯುತ್ತದೆ.

ರಾಷ್ಟ್ರಕೂಟ ನಿತ್ಯವರ್ಷ ನಾಲ್ಕನೆಯ ಗೋವಿಂದನ ಅಸುಂಡಿ (೯೨೫) ಶಾಸನದಲ್ಲಿ 'ಬಂಕಾಪುರದ ಧೋರಜಿನಾಲಯ'ದ ಪಸ್ತಾಪವಿದೆ. ಚಂದ್ರಪ್ರಭಭಟಾರರು ಇದರ ಆಚಾರ್ಯರಾಗಿದ್ದು, ಅಸುಂಡಿಯ ಆಳ್ವಿಕೆ ನೋಡುತ್ತಿದ್ದರು. ೧೦ನೆಯ ಶತಮಾನದ ಉತ್ತರಾರ್ಧಕ್ಕೆ ರಾಷ್ಟ್ರಕೂಟರ ಪ್ರಭಾವ ಕಡಿಮೆಯಾಗುತ್ತಿದ್ದಂತೆ ಕಲ್ಯಾಣದ ಚಾಲುಕ್ಯರು ತಲೆಯೆತ್ತಿದರು. ಜೈನಮತವನ್ನು ಪೋಷಿಸುವ ಹೊಣೆ ಈಗ ಚಾಲುಕ್ಯರ ಹೆಗಲಿಗೆ ಇಳಿಯಿತು. ಉತ್ತರಕರ್ನಾಟಕದ ಈ ಚಾಲುಕ್ಯರು ಹಿಂದೂಧರ್ಮೀಯರು, ಶೈವ ಪಕ್ಷಪಾತಿಗಳು, ಆದ್ದರಿಂದ ಮೊದಲಿನಷ್ಟು ಪ್ರೋತ್ಸಾಹ, ಆಶ್ರಮ ದೊರೆಯದೇ ಹೋಯಿತು. ಮುಂದೆ ಜೈನಧರ್ಮ ಹೊಯ್ಸಳರ ಕಾಲದಲ್ಲಿ ಪುನಶ್ಚೇತನಗೊಂಡಂತೆ ಕಾಣುತ್ತದೆ.

ಸುದತ್ತಾಚಾರ್ಯರೆಂಬ ಜೈನಗುರುವಿನ ಆಶೀರ್ವಾದದಿಂದ ಹುಟ್ಟಿದ ಹೊಯ್ಸಳ ಮನೆತನ ಅನೇಕ ವ್ಯಕ್ತಿಗಳು, ಬಹುಸಂಖ್ಯೆಯ ಮಾಂಡಲಿಕರು, ಮಂತ್ರಿವರ್ಯರು ಧರ್ಮಪಾಲನೆಗೈದು ಜಿನಧರ್ಮವನ್ನು ಶ್ರೀಮಂತಗೊಳಿಸಿದರು.

ಹೊಯ್ಸಳ ವಿಷ್ಣುವರ್ಧನನ ದಂಡನಾಯಕ ಗಂಗರಾಜನ ಕಾಲವು ಜೈನಧರ್ಮದ ರಸಘಟ್ಟನೆಯ ಕಾಲ. ಅವನ ಮರಣಾನಂತರ ಅವನ ಮಗ ಬೊಪ್ಪಣದಂಡನಾಯಕ ತಂದೆಗೆ ಪರೋಕ್ಷವಿನಯವಾಗಿ ದೋರಸಮುದ್ರದಲ್ಲಿ ತಂದೆಯ ಬಿರುದಿನ 'ದ್ರೋಹ ಘರಟ್ಟ' ಜಿನಾಲಯ ನಿರ್ಮಿಸಿದ. ಅದರ ಮಂಗಳಶೇಷೆಯನ್ನು ಇಂದ್ರರು ಬಂಕಾಪುರಲ್ಲಿ ಬೀಡುಬಿಟ್ಟಿದ್ದ ವಿಷ್ಣುವರ್ಧನನಿಗೆ ತಲುಪಿಸಲು ಬಂದರು. ವಿಷ್ಣುವರ್ಧನ ಅದೇ ಆಗ ಕದಂಬ ಮಸಣವನ್ನು ಸೋಲಿಸಿ ಜಯಸಂಪಾದನೆ ಮಾಡಿಕೊಂಡು ಬಂದಿದ್ದ ಇದೇ ಸಂದರ್ಭದಲ್ಲಿ ವಿಷ್ಣುವರ್ಧನನ ಕುಮಾರನ ಜನ್ಮೋತ್ಸವದ ಶುಭಸಮಾಚಾರವು ಬಂದಿತು. ಈ ಮಂಗಳಕರ ಸಂದರ್ಭದಲ್ಲಿ ಅತ್ತ ವಿಜಯೋತ್ಸವಮುಂ ಕುಮಾರ ಜನ್ಮೋತ್ಸವಮುಮಾಗೆ' ಸಂತುಷ್ಟನಾದ ವಿಷ್ಣುವರ್ಧನ ಪಾರ್ಶ್ವದೇವರ ಗಂಧೋದಕ ಶೇಷಗಳನ್ನು ತೆಗೆದುಕೊಂಡು 'ಬಂದಿರ್ದಿಂದ್ರಂ ಕೆಂಡು ಬರವೇಳ್ಪಿದಿದಿರೆದ್ದು ಪೊಡವಟ್ಟು ಗಂಧೋದಕಮುಂ ಪೇಶೆಯುಮಂ ಕೊಂಡೆನಗೀದೇವರ ಪ್ರತಿಷ್ಟೆಯ ಫಲದಿಂ ವಿಜಯೋತ್ಸವಮುಂ ಕುಮಾರ ಜನ್ಮೋತ್ಸವಮುವಮಾದುದೆಂದು ಸಂತೋಷ ಪರಂಪರೆಯನ್ನು ದೇವರ್ಗೆ ಶ್ರೀ ವಿಜಯಪಾರ್ಶ್ವದೇವರೆಂಬ ಪೆಸರುಮಂ ಕುಮಾರಂಗೆ ಶ್ರೀ ವಿಜಯನಾರಸಿಂಹನೆಂಬ ಪಸರನಿಟ್ಟು' ಹರುಷ ವ್ಯಕ್ತಪಡಿಸಿದುದನ್ನು ಶ್ರವಣಬೆಳಗೊಳ ಶಾಸನ ವರ್ಣಿಸಿದೆ.

ಹೊಯ್ಸಳ ಕಾಲದಲ್ಲಿ ಜೈನಮತಕ್ಕೆ ದೊರೆತ ಮನ್ನಣೆ ರಾಜಮನೆತನಕ್ಕಿಂತ ಅಧಿಕವಾಗಿ ಮಂತ್ರಿ ಮತ್ತು ಅಧಿಕಾರವರ್ಗದವರದು. ಇವರಲ್ಲಿ ಪ್ರಮುಖ ವ್ಯಕ್ತಿಗಳೆಂದರೆ ವಿಷ್ಣುವರ್ಧನನ ದಂಡನಾಯಕ ಗಂಗರಾಜ ಮತ್ತು ನಾರಸಿಂಹ ಮಂತ್ರಿ ಹುಳ್ಳದಂಡಾಧಿಪರು. ಶ್ರವಣಬೆಳಗೊಳದ:

**ಸ್ಥಿರಜಿನಶಾಸನೋದ್ಧರಣರಾದಿಯೊಳಾರೆನೆ ರಾಚಮಲ್ಲಭೂವರ**
**ವರಮಂತ್ರಿರಾಯನೆ ಬಳಿಕ್ಕೆ ಬುಧಸ್ತುತನಪ್ಪ ವಿಷ್ಣುಭೂವರ**
**ವರಮಂತ್ರಿ ಗಂಗಣನೆ ಮತ್ತೆ ಬಳಿಕ್ಕೆ ನೃಸಿಂಹದೇವಭೂವರ**
**ವರಮಂತ್ರಿ ಹುಳ್ಳನೆ ಪೆರಂಗಿನಿತುಳ್ಳದೆ ಪೇಳಲಾಗದೆ//**

ಎಂಬ ಶಾಸನಪದ್ಯ ಗಂಗರಾಚಮಲ್ಲನ ಮಂತ್ರಿ ಚಾವುಂಡರಾಯ, ಹೊಯ್ಸಳ ವಿಷ್ಣುವರ್ಧನ ಮಂತ್ರಿ ಗಂಗರಾಜ, ನಾರಸಿಂಹನ ಮಂತ್ರಿ ಹುಳ್ಳರಾಜರನ್ನು ಪರಿಚಯಿಸಿದೆ. ಈ ಮೂವರು ಉದಾರ ಜಿನಧರ್ಮಾಭಿಮಾನಿಗಳು. ಇವರಲ್ಲಿ ಹುಳ್ಳನಿಗೆ ಸಂಬಂಧಿಸಿ ಕೆಲವು ವಿಶೇಷಗಳು ಬಂಕಾಪುರದಲ್ಲಿ ದೊರಕುತ್ತವೆ. ಈತ

**ಜಿಗೇಹೋದ್ಧರಣಂಗಳಿಂ ಜಿನಮಹಾಪೂಜಾಸಮಾಜಂಗಳಿಂ**
**ಜಿನಯೋಗಿಬ್ರಜದಾನದಿಂ ಜಿನಪದಸ್ತೋತ್ರಕ್ರಿಯಾನಿಷ್ಠೆಯಿಂ**
**ಜಿನಸತ್ಪುಣ್ಯ ಪುರಾಣ ಸಂಶ್ರವಣದಿಂ ಸನ್ತೋಷಮಂ ತಾಳ್ದಿಭ**
**ವ್ಯನುತ ನಿಚ್ಚಲುಮಿನ್ತೆ ಪುರ್ತುಗಳೆವಂ ಶ್ರೀ ಹುಳ್ಳದಂಡಾಧಿಪಂ//**

ಎನ್ನುವಲ್ಲಿ ಜಿನಮಂದಿರಗಳ ಜೀರ್ಣೋದ್ದಾರ, ಜಿನಮಹಾಪೂಜೆ, ಜಿನಯೋಗಿ ಸಮೂಹಕ್ಕೆ ಕೈಕೊಳ್ಳುವ ಚತುರ್ವಿಧದಾನ, ಜಿನಪದಸ್ತೋತ್ರಗಳ ಕ್ರಿಯಾನಿಷ್ಠೆ ಜಿನಸತ್ಪುಣ್ಯಪುರಾಂ ಶ್ರವಣ ಇವು ಹುಳ್ಳದಂಡಾಧಿಪನ ಬದುಕಿನ ಮುಖಗಳೆನಿಸಿದ್ದವು. ಈತ ಕೈಕೊಂಡ ಸೇವಾಕಾರ್ಯಗಳನ್ನು ವಿದಿತಪಡಿಸುವ ಶ್ರವಣಬೆಳಗೊಳ ಶಾಸನ

**ನಿಪ್ಪಟಮೆ ಜೀರ್ಣ್ಣಮಾದುದ**



**ನುಪ್ಪಟ್ಟಾಯ್ತನ ಮಹಾಜಿನೊಂದ್ರಾಲಯಮಂ**
**ನಿಪ್ಪೊಸತು ಮಾಡಿದಂ ಕರ**
**ಮೊಪ್ಪಿರೆ ಹುಳ್ಳಂ ಮನಸ್ವಿ ಬಂಕಾಪುರದೊಳ್//**

ಎಂದು ತಿಳಿಸಿದೆ. ಜೀರ್ಣವಾದ ಮಹಾಜಿನೆಂದ್ರಾಲಯವೊಂದರ ಜೀರ್ಣೋದ್ಧಾರಕ ಹುಳ್ಳ ಎಂಬುದು ಈ ಶಾಸನ ವಿಷಯ. ಇಲ್ಲಿಯ ಉಪ್ಪಮತಾಯ್ಚನ ಉಪ್ಪಟ್ಟಾಯ್ತನ, ಉರಿಪಟ್ಟಾಯ್ತನ, ಉರಿಪಟ್ಟಾಯಣ ಹೆಸರುಗಳ ವೈವಿಧ್ಯ ಉರಿಪಟ್ಟಾಯಣ ಬಸದಿಯನ್ನೇ ಸೂಚಿಸುತ್ತದೆ. ಹಾಗಾದರೆ ಈ ಉರಿಪಟ್ಟಾಯಣ ಬಸದಿಯ ನಿರ್ಮಾಪಕರಾರು? ಎಂಬ ಸಮಸ್ಯೆಗೆ ಇದೇ ಶಾಸನದ ಮುಂಭಾಗ ಉತ್ತರ ಹೇಳುತ್ತದೆ.

**ಕಲಿತನಮುಂ ವಿಟತ್ವಮುಮನುಳ್ಳವನಾದಿಯೊಳೊರ್ವ್ವನುರ್ವಿಯೊಳ್**
**ಕಲಿವಿಟನೆಂಬಾತನ ಜಿನಾಲಯಮಂ ನೆರೆ ಜೀರ್ಣಮಾದುದಂ**
**ಕಲಿಸಲೆದಾನದೊಳ್ಪರಮ ಸೌಖ್ಯರಮಾರತಿಯೊಳ್ವಿಟಂವಿನಿ**
**ಶ್ಚಲಮೆನಿಸಿರ್ದ್ದ ಹುಳ್ಳನದನೆತ್ತಿಸಿದಂ ರಜತಾದ್ರಿತುಂಗಮಂ//**

ಪ್ರಾಚೀನ ಕಾಲದಲ್ಲಿ ಕಲಿವಿಟನೆಂಬಾತ ಕಟ್ಟಿಸಿದ ಜಿನಾಲಯ ಜೀರ್ಣಗೊಳ್ಳಲು ಆ ಜಿನೇಂದ್ರಾಲಯವನ್ನು ಹುಳ್ಳ ಜೀರ್ಣೋದ್ಧಾರಗೊಳಿಸಿದನೆಂದು ತಿಳಿಯುತ್ತದೆ. ಇದರಿಂದ ಮೇಲಿನ ಪದ್ಯದಲ್ಲಿಯ 'ನಿಪ್ಪಟಮೆ ಜೀರ್ಣ್ಣಮಾದುದನುಪ್ಪಟ್ಟಾಯ್ತನ ಮಹಾಜಿನೇಂದ್ರಾಲಯ'ವನ್ನು ಹುಳ್ಳ ಸರಿಪಡಿಸಿದುದು ಸ್ಪಷ್ಟವಾಗಿ ಗೊತ್ತಾಗುತ್ತದೆ. ಇದಕ್ಕೆ ಪೂರಕವಾಗುವಂತೆ ಕದಂಬ ಹರಿಕೇಸರಿದೇವ, ಹರಿಕಾಂತದೇವರು ಮತ್ತು ತೋಯಿಮರಸರು ಇದೇ ಉಪ್ಪಮತಾಯ್ಚನ ಬಸದಿ ಹಾಗೂ ಕೊಂತಿ ಮಹಾದೇವಿಯರ ಬಸದಿಗೆ ದಾನವಿತ್ತ ವಿಷಯವಿದೆ. ಹೀಗಾಗಿ ಕಲಿವಿಟನಿಂದ ನಿರ್ಮಿತವಾದ ಈ ಉರಿಪಟ್ಟಾಯಣ ಬಸದಿ ಜೀರ್ಣವಾಗಲು ಹುಳ್ಳ ಅದನ್ನು ಜೀರ್ಣೋದ್ಧಾರ ಮಾಡಿಸಿದನೆಂಬ ವಿಷಯ ಇಲ್ಲಿ ಸ್ಪಷ್ಟವಾಗುತ್ತದೆ. ಆತನ ಸೇವೆಯಿಂದ ಅದೊಂದು ಮಹಾಜಿನೇಂದ್ರಾಲಯವೆನಿಸಿತು.

ಕ್ರಿ.ಶ ೧೧ನೆಯ ಶತಮಾನದಲ್ಲಿ ಬಂಕಾಪುರದಲ್ಲಿ ಕೊಂತಿಮಹಾದೇವಿಯರ ಬಸದಿಯೊಂದು ಇದ್ದುದಾಗಿ ತಿಳಿಯುತ್ತದೆ. ಬಂಕಾಪುರವನ್ನು ಕೇಂದ್ರವಾನ್ನಾಗಿರಿಸಿಕೊಂಡು ಆಳಿದ ಚಲ್ಲಕೇತನ ಮನೆತನದಲ್ಲಿ ಕಲಿವಿಟ ಹೆಸರಿನ ಇಬ್ಬರು ವ್ಯಕ್ತಿಗಳು ಆಗಿಹೋಗಿರುವರು. ಇವರಲ್ಲಿ ಲೋಕಾದಿತ್ಯನ ಮಗ ಒಬ್ಬನಾದರೆ, ಮೊಮ್ಮಗ ಇನ್ನೊಬ್ಬ. ಇವರು ಕ್ರಮವಾಗಿ ೯೧೩-೧೪,೯೨೮-೯೪೬ರವರೆಗೆ ಆಳಿದರು. ಈ ಇಬ್ಬರಲ್ಲಿ ಕಲಿವಿಟ ಜಿನಾಲಯದ ಕರ್ತೃವನ್ನು ಅರಸುವುದು ಸಂದಿಗ್ಧವಾದರೂ ಕಾಲಮಾನದ ದೃಷ್ಟಿಯಿಂದ ಎರಡನೆಯ ಕಲಿವಿಟ ಜಿನಾಲಯದ ನಿರ್ಮಾಪನಾಗಿರುವ ಸಾಧ್ಯತೆ ಇದೆ.

ಬಂಕಾಪುರದ ಈ ಮಹಾಜಿನೇಂದ್ರಾಲಯವನ್ನು ಒಳಗೊಂಡು ಹುಳ್ಳ ಇನ್ನೂ ಅನೇಕ ಬಸದಿಗಳನ್ನು ಜೀರ್ಣೋದ್ಧಾರಗೊಳಿಸಿದನೆಂದು ಶ್ರವಣಬೆಳಗೊಳ ಶಾಸನದ ಹೇಳಿಕೆ ಇದೆ. ಅದರಲ್ಲಿ ಬಂಕಾಪುರದ ಪ್ರಾಚೀನ ದೋರಜಿನಾಲಯವೂ ಸೇರಿಕೊಂಡಿರುವ ಸಾಧ್ಯತೆ ಇದೆ. ಚಲ್ಲಕೇತನ ಮನೆತನದಲ್ಲಿ ದೋರ ಹೆಸರಿನ ಇಬ್ಬರು ವ್ಯಕ್ತಿಗಳಿರುವರು. ಇವರಲ್ಲಿ ಯಾವ ದೋರನ ಹೆಸರಿನಿಂದ ಈ ಬಸದಿಯಾಗಿದೆಯೋ ಹೇಳಲುಬಾರದು. ಅಸುಂಡಿಯ ಶಾಸನದಿಂದ ಪ್ರಥಮ ಬಾರಿಗೆ ಗೋಚರವಾಗಿವ ಈ ದೋರಜಿನಾಲಯವನ್ನು

ಹುಳ್ಳ ದುರಸ್ತಿಗೊಳಿಸಿರಬೇಕು.

ಡಾ. ಶೆಟ್ಟರ ಅವರು ತಮ್ಮ 'ಶ್ರವಣಬೆಳಗೊಳ' ಕೃತಿಯಲ್ಲಿ ಹುಳ್ಳ ಬಂಕಾಪುರದಲ್ಲಿ ಎರಡು ಬಸದಿಗಳನ್ನು ಜೀರ್ಣೋದ್ಧಾರಗೊಳಿಸಿದನೆಂದು ಬರೆದಿದ್ದು, ಅವು ಯಾವುವು ಎಂಬುದರ ಬಗೆಗೆ ಬರೆದಿಲ್ಲ. ಈ ಹಿಂದಿನ ವಿವರಣೆಯಿಂದ ಅವು ಉರಿಪಟ್ಟಾಯಣ ಮತ್ತು ದೋರಜಿನಾಲಯವೆಂದು ಗುರುತಿಸಬಹುದಾಗಿದೆ. 'ಜೈನಪೂಜಾಸಮಾಜ ಮಹೋತ್ಸಾಹಪರಂಪುರನ್ದರಂ' ಬಿರುದಾಂಕಿತ ಹುಳ್ಳ ನಯಕೀರ್ತಿಸಿದ್ಧಾಂತದೇವರ ಶಿಷ್ಯ. ವಾಜಿವಂಶದ ಯಕ್ಷರಾಜ, ಲೋಕಾಂಬಿಕೆಯರು ಈತನ ತಾಯಿತಂದೆಗಳು. ತನ್ನ ಉದಾರಹಸ್ತದಿಂದ 'ಹಿರಿಯದಾನಿ'ಯೆನಿಸಿದ ಈ ಹುಳ್ಳರಾಜ ಬಂಕಾಪುರವನ್ನಲ್ಲದೇ ಈತನ ಕಾರ್ಯಕ್ಷೇತ್ರ ಕಲ್ಲಂಗೆರೆ ಮತ್ತು ಗೊಮ್ಮಟಪುರಗಳನು ಒಳಗೊಂಡಿತ್ತು. ಅಲ್ಲಿಯೂ ಈತ ಜಿನಬಸದಿ ಚತುರ್ವಿಂಶ ಪ್ರತಿಮಾಗೇಹಗಳನ್ನು ರಚಿಸಿರುವನು.

**ಕೃತದಿಗ್ಜೈತ್ರವಿಧಂ ಬರುತ್ತೆ ನರಸಿಂಹಕ್ಷೋಣಿಪಂ ಕಂಡು ಸ**
**ನ್ನುತಿಯಿಂ ಗೊಮ್ಮಟಪಾರ್ಶ್ವಜಿನರಂ ಮತ್ತೀ ಚತುರ್ವಿಂಶತಿ**
**ಪ್ರತಿಮಾಗೇಹನಿನ್ತಿವರ್ಕ್ಕೆ ವಿನತಂ ಪ್ರೋತ್ಸಾಹದಿಂ ಬಿಟ್ಟನ**
**ಪ್ರತಿಮಲ್ಲಂ ಸವಣೇರನೂರನಭಯ ಕಲ್ಪಾನ್ತರಂ ಸಲ್ವಿನಂ॥**

ಹುಳ್ಳರಾಜನ ಈ ಕಾರ್ಯ ಮೆಚ್ಚಿದ ಹೊಯ್ಸಳ ದೊರೆ ನಾರಸಿಂಹ ಆತನಿಗೆ ಪ್ರೋತ್ಸಾಹಾರ್ಥವಾಗಿ ಅಂದು ಸವಣೇರ ಅಂದರೆ ಇಂದಿನ ಸವಣೂರನ್ನು ಬಿಟ್ಟುಕೊಟ್ಟಿರುವನು. ಬಂಕಾಪುರದಲ್ಲಿ ಈ ಮೂರು ಜಿನಬಸದಿಗಳಲ್ಲದೇ ನಿಟ್ಟಸಿಂಗಿಯ ಬಸದಿ ಎಂಬ ಇನ್ನೊಂದು ಜಿನಾಲಯವಿದ್ದುದಾಗಿ ವಿಷಯವಿದೆ. ಜಿಂಜಿಯ ಬಾಮಯನ ಮಗ ಲಖಿಯನೆಂಬುವ ಈ ನಿಟ್ಟಸಿಂಗಿಯ ಬಸದಿಗೆ ಚೌವೀಸ ತೀರ್ಥಂಕರ ವಿಗ್ರಹವನ್ನು ಮಾಡಿಸಿಕೊಟ್ಟಿರುವನೆಂದು ತಿಳಿದುಬರುತ್ತದೆ. ಸುಮಾರು ಮೂರು ಶತಮಾನಗಳವರೆಗೆ ಬಂಕಾಪುರದಲ್ಲಿ ಬಾಳಿ ಬೆಳಗಿದ ಜೈನಧರ್ಮ, ಜಿನಬಸದಿಗಳು ಇಂದು ಇದ್ದವೋ ಇಲ್ಲವೋ ಎನ್ನುವಷ್ಟರಮಟ್ಟಿಗೆ ನಶಿಸಿ ಹೋಗಿವೆ. ಇತ್ತೀಚೆಗೆ ಇವುಗಳ ಕೆಲವು ಅವಶೇಷಗಳು ಸಿಗುತ್ತಿದ್ದು, ಇವುಗಳ ವಿವರಣೆಗೆ ಪ್ರಾಚ್ಯವಸ್ತು ಶೋಧನ ಭಾಗವನ್ನು ನೋಡುವುದು.

**ಸಮಾಧಿ ಮರಣ:**

ಜೈನಧರ್ಮದಲ್ಲಿ ಸಮಾಧಿಮರಣ ಬಸದಿ ನಿರ್ಮಾಣದಷ್ಟೇ ಪವಿತ್ರ, ಪೂಜ್ಯಕಾರ್ಯ. ಇಂತಹ ಮರಣ ಪ್ರಕ್ರಿಯೆಗೆ ಪವಿತ್ರ ಕ್ಷೇತ್ರಗಳ ಅವಶ್ಯಕತೆ ಇತ್ತು. ಪ್ರಾಚೀನ ಕರ್ನಾಟಕದಲ್ಲಿ ಶ್ರವಣಬೆಳಗೊಳ, ಕೊಪ್ಪಳಗಳು ಈ ಮಾಲಿಕೆಯಲ್ಲಿ ಮಹತ್ವದ ಪ್ರದೇಶಗಳೆನಿಸಿದಂತೆ ಬಂಕಾಪುರವೂ ಒಂದನೆಸಿತ್ತು.

**ಉಪಸರ್ಗೇದುರ್ಭಿಕ್ಷೆ ಜರಸಿ ರುಜಾಯಾಂ ಚಸಿಃ ಪ್ರತಿಕಾರೇ**
**ಧರ್ಮಾಯ ತನುವಿಮೋಚನಮಾಹುಃ ಸಲ್ಲೇಖನಾಮಾರ್ಯಃ"**

ರತ್ನಕರಂಡಕ ಪು. ೫೧೬-೫೬

ಜೈನಮತೀಯನಿಗೆ ಜೀವನದಲ್ಲಿ ಆಪತ್ತು ಒದಗಿದರೆ, ಮುಪ್ಪಿನಿಂದ ಜರ್ಜರಿತನಾಗಿದ್ದರೆ, ಗುಣಪಡಿಸಲಾಗದ ವ್ಯಾಧಿಗೆ ಒಳಗಾದರೆ, ಜೀವನದಾಸೆ ಬತ್ತಿ ಹೋಗಿದ್ದರೆ, ಅಂಥವನು ಸಲ್ಲೇಖನಾ ವಿಧದಿಂದ ಮರಣವನ್ನಪ್ಪುವುದೆಂದು ರತ್ನಕರಂಡಕದ ಹೇಳಿಕೆ. ಸಲ್ಲೇಖನವ್ರತ ಕೈಕೊಂಡ ಕೆಲಕಾಲದಲ್ಲಿ ಮರಣದಲ್ಲಿ ಪರ್ಯವಸಾನವಾಗುವ ಕ್ರಿಯೆಯೆ ಸಮಾಧಿಮರಣ. ಈ ಕ್ರಿಯೆಗೆ ಪವಿತ್ರಸ್ಥಳಗಳನ್ನು ಅಯ್ಕೆ ಮಾಡುತ್ತಿದ್ದರು.



ವ್ರತ ಸ್ವೀಕರಿಸಿದ ಸ್ಥಳದಲ್ಲಿಯೇ ಸಮಾಧಿಮರಣ ಹೊಂದುವ ಪರಿಪಾಠವಿತ್ತು. ಕೆಲವು ಸಲ ವ್ರತ ಸ್ವೀಕಾರ ಮಾಡಿದ ವ್ಯಕ್ತಿ ಆ ಸ್ಥಳ ಬಿಟ್ಟು ಮತ್ತೊಂದು ಸ್ಥಳದಲ್ಲಿ ಸಮಾಧಿ ಹೊಂದುವ ಸಂದರ್ಭವೂ ಇತ್ತು. ಕುಮಾರಸೇನನೆಂಬುವವ ಮುಳುಗುಂದದಲ್ಲಿ ವ್ರತ ಸ್ವೀಕರಿಸಿ ಸೊಗಸುಗಾಣದೆ ಕೊಪ್ಪಳಕ್ಕೆ ಹೋಗಿ ಸಮಾಧಿಮರಣ ಪಡೆದುದು ಇತಿಹಾಸ ಪ್ರಸಿದ್ಧ ವಿಷಯ.

ಗಂಗದೊರೆ ಮಾರಸಿಂಹ 'ಮಣ್ಣಳಿಕೆ ತ್ರಿಣೇತ್ರ' ಎಂದು ಬಿರುದಾಂಕಿತನಾದವ. ತನ್ನ ಅಧಿಕಾರದ ಅವಧಿಯಲ್ಲಿ ಸಮರ್ಥ ದೊರೆಯಾಗಿ ಅನೇಕ ದಾನದತ್ತಿಗಳನ್ನು ಬಿಟ್ಟಿರುವನು. ಜೀವಮಾನದಲ್ಲಿ ಹಲವಾರು ಬಸದಿ ಮಾನಸ್ತಂಭಗಳನ್ನು ಮಾಡಿಸಿ 'ಧರ್ಮಗಳಂ ನಮಸ್ಯಂ' ನಡೆಯಿಸಿದವನು. ತನ್ನ ಬದುಕಿನ ಬಹುಮುಖ ಸಾಧನೆ ಪೂರೈಸಿದ ನೊಳಂಬಕುಲಾಂತಕ ಮಾರಸಿಂಹ ಸಮಾಧಿಮರಣ ಪಡೆಯಬಯಸಿದ. ಬಂಕಾಪುರದ ಅಜಿತಸೇನಾಚಾರ್ಯರು ಅವನ ಸಮಾಧಿಮರಣದ ಮಾರ್ಗದರ್ಶಕ ಆಚಾರ್ಯರಾದರು. ಮಾರಸಿಂಹ 'ಬರಿಯಮೊನ್ದುವರ್ಷ ರಾಜ್ಯಮಂ ಪತ್ತುವಿಟ್ಟು ಬಂಕಾಪುರದೊಳಜಿತಸೇನಭಟ್ಟಾರಕರ ಶ್ರೀಪಾದಸನ್ನಿಧಿಯೊಳಾರಾಧನಾವಿಧಿಯಿಂ ಮೂರುದಿವಸ ನೋನ್ತು ಸಮಾಧಿಯಂ ಸಾಧಿಸಿದರ್' ಎಂದಿದೆ. ಶ್ರವಣಬೆಳಗೊಳ ಕೂಗೆ ಬ್ರಹ್ಮದೇವರ ಕಂಬದ ಮೇಲಿದ್ದ ಶಾಸನದ ಒಕ್ಕಣಿಕೆ ಇದು. ತಲಾಕಾಡಿನಂತಹ ಪ್ರಶಸ್ತ ಪ್ರದೇಶದ ರಾಜ್ಯಭಾರ ಕೈಕೊಂಡ ಮಾರಸಿಂಹ ಇಷ್ಟೂ ದೂರದ ಸ್ಥಳಕ್ಕೆ ಬಂದು ತನ್ನ ಗುರುಗಳ ಸಾನಿಧ್ಯದಲ್ಲಿ ಆರಾಧಾನಾವಿಧಿಯಿಂದ ಮುಡಿಪಬೇಕಾದರೆ ಸ್ಥಳಮಹಿಮೆ, ಆಚಾರ್ಯ ಸಾನಿಧ್ಯದ ಪ್ರಾಮುಖ್ಯತೆ ಗೋಚರಿಸದೆ ಇರದು. ಸಮಾಧಿಮರಣದ ಕ್ಷೇತ್ರ ಮಹಿಮೆಯಲ್ಲಿ ಬಂಕಾಪುರ ಪಡೆದ ಸ್ಥಾನವೂ ಗಮನಾರ್ಹವೆನಿಸಿದೆ.

ಈ ರೀತಿ ಸಲ್ಲೇಖನವಿಧಿ ಸ್ವೀಕರಿಸಿದ ಸಮಾಧಿಮರಣ ಹೊಂದಿದವರ ಸ್ಮರಣೆಗಾಗಿ ಸಮಾಧಿಮರಣದ ಸ್ಥಳದಲ್ಲಿಯೋ ಅಥವಾ ಯಾವುದೋ ಜೈನಧಾರ್ಮಿಕ ಪರಿಸರದ ಪ್ರದೇಶದಲ್ಲಿಯೋ ಸ್ಮಾರಕಗಳನ್ನು ನಿಲ್ಲಿಸುವ ಪರಿಪಾಠವಿತ್ತು. ಇಂಥ ಸ್ಮಾರಕಗಳು ಆಯಾ ವರ್ಗದ ಶ್ರೇಷ್ಠತೆಯನ್ನನುಸರಿಸಿ ನಿಷಧಿಶಿಲೆಗಳು, ಮಂಟಪ, ಶಿಲಾ ಬಸದಿಗಳಾಗಬಹುದಿತ್ತು. ಬಂಕಾಪುರದಲ್ಲಿ ಸಮಾಧಿಮರಣ ಹೊಂದಿದ ಮಾರಸಿಂಹನ ಮರಣ ದಾಖಲೆ ದೊರಕುವುದು ಶ್ರವಣಬೆಳಗೊಳದ ಕೂಗೆ ಬ್ರಹ್ಮದೇವರ ಶಿಲಾಸ್ತಂಭದ ಶಾಸನ ಬರಹದಿಂದ. ಹೀಗಾಗಿ ಬಂಕಾಪುರ ಜೈನಧರ್ಮದ ಪ್ರಭಾವಿ ಪ್ರದೇಶವೆನಿಸಿತ್ತು. ಇಂದು ಇಲ್ಲಿ ಸಿಗುತ್ತಿರುವ ಜೈನಧರ್ಮದ ಪ್ರಾಚೀನ ಅವಶೇಷಗಳು ಈ ವಿಷಯವನ್ನು ಸ್ಪಷ್ಟಪಡಿಸುತ್ತವೆ. ಇಂದು ಇಲ್ಲಿರುವ 'ಮಾಗಿಕೇರಿ' ಎಂಬ ಪ್ರದೇಶ ಅಂದು ಜೈನಧರ್ಮದ ನಿಬಿಡವರ್ತಿ ಪ್ರದೇಶ 'ಮಹಾವೀರಕೇರಿ' ಎಂದಾಗಿರಬಹುದಿದ್ದು, ಆ ಸ್ಥಳದಲ್ಲಿ ಸರಿಯಾಗಿ ಉತ್ಖನನ ಕಾರ್ಯ ಕೈಕೊಂಡರೆ ಜೈನಧರ್ಮದ ಹೆಚ್ಚಿನ ಐತಿಹ್ಯ ಕಂಡು ಬರಬಹುದು.

**ಆಧಾರ ಗ್ರಂಥಗಳು:**

೧ ಡಾ. ಚನ್ನಕ್ಕ ಯಲಿಗಾರ, "ಬಂಕಾಪುರ ಶೋಧನ"; ಚನ್ನಗಂಗಾ ಪ್ರಕಾಶನ ಧಾರವಾಡ

೨. ವಾಸುದೇವ ಬಡಿಗೇರ, (ಸಂ), ಸ್ಥಳೀಯ ಚರಿತ್ರೆ ಮತ್ತು ಪುರಾತತ್ವ ಮಾಲೆ-ಹಾನಗಲ್ಲು

# ಮಹಿಳೆಯರ ಕಳ್ಳ ಸಾಗಣಿಕೆಯನ್ನು ತಡೆಗಟ್ಟಲು ಸರ್ಕಾರದ ಯೋಜನೆಗಳು ಮತ್ತು ಅರಿವು

**ಬಸವರಾಜ ಎಂ.**

ಮಹಿಳೆಯರ ಕಳ್ಳ ಸಾಗಣಿಕೆಯನ್ನು ತಡೆಗಟ್ಟಲು ಸರ್ಕಾರ ಕೆಲವು ಯೋಜನೆಗಳನ್ನು ಹಾಕಿಕೊಂಡಿದೆ. ಅವುಗಳೆಂದರೆ-ಸಮಾಜಿಕ ಅರಿವು, ಸಾಮಾಜಿಕ ರಕ್ಷಣೆ, ಕೌಶಲ್ಯ ಅಭಿವೃದ್ಧಿ, ಆರ್ಥಿಕ ಸೇರ್ಪಡೆ, ಉದ್ಯಮ ಶೀಲತೆ, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ, ಬಡತನ ಇಳಿತ, ಸೇವೆಗಳು, ಸಾಮಾಜಿಕ ಭದ್ರತೆ, ಅಧಿನಿಯಮಗಳನ್ನು ತಂದಿದೆ. ಆದರೂ ಸರ್ಕಾರದಿಂದ ಇವುಗಳನ್ನು ತಡೆಯಲು ಸಾಧ್ಯವಾಗುತ್ತಿಲ್ಲ. ಮಹಿಳೆಯರ ಸಾಗಣಿಕೆಯು ಇತ್ತೀಚಿನ ದಿನಗಳಲ್ಲಿ ಹೆಚ್ಚಿನ ಪ್ರಮಾಣದಲ್ಲಿ ನಡೆಯುತ್ತಿದೆ. ಇದು ಆತಂಕಕಾರಿ ಬೆಳವಣಿಗೆಯಾಗಿದೆ. ಈ ಪಿಡುಗನ್ನು ಸ್ಥಳೀಯ ಮಟ್ಟದಲ್ಲಿ ತಡೆಯುವುದು ಅನಿವಾರ್ಯವಾಗಿದೆ. ಮಾನವ ಸಾಗಾಣಿಕೆಯನ್ನು ತಡೆಗಟ್ಟಲು ಮತ್ತು ಸಾಗಾಣಿಕೆಗೆ ಒಳಪಟ್ಟ ಮಹಿಳೆಯರ ಮತ್ತು ಮಕ್ಕಳ ಪುನರ್ವಸತಿ ಮಾಡುವುದು ನಾಗರಿಕ ಸಾಮಾಜದ ಪ್ರತಿಯೊಬ್ಬರ ಕರ್ತವ್ಯವಾಗಿರುತ್ತದೆ. ಈ ಪಿಡುಗನ್ನು ನಿಯಂತ್ರಿಸಲು ಜಿಲ್ಲಾ, ತಾಲ್ಲೂಕು ಮತ್ತು ಗ್ರಾಮ ಮಟ್ಟದಲ್ಲಿ ಜಾಗೃತಿಯನ್ನು ಮೂಡಿಸುವುದು ಅಗತ್ಯವೆಂದು ಇಲಾಖೆಯು ಭಾವಿಸಿ, ಈ ಮಹಿಳೆಯರ ಸಾಗಾಣಿಕೆ ನಿವಾಹಣೆ ಯೋಜನೆಯನ್ನು ೨೦೦೬-೦೭ರಲ್ಲಿ ಜಾರಿಗೆ ತರಲಾಗಿದೆ. ಮತ್ತು ೨೦೦೯-೧೦ನೇ ಸಾಲಿನಲ್ಲಿ ಸರ್ಕಾರ ೧೫.೦೦ ಲಕ್ಷಗಳನ್ನು ಈ ಯೋಜನೆಗೆ ಅನುದಾನವನ್ನು ಒದಗಿಸಿದೆ. ತಾಲ್ಲೂಕು ಮಟ್ಟದಲ್ಲಿ ತರಬೇತಿ ಸಂಸ್ಥೆಗಳ ಮೂಲಕ ತರಬೇತಿ ನಡೆಸಲು ಕ್ರಮಕೈಗೊಳ್ಳಲಾಗಿದೆ. ಇದೇ ರೀತಿ ರಾಜ್ಯ ಮಟ್ಟದಲ್ಲಿ ತರಬೇತಿ ಕಾರ್ಯಕ್ರಮವನ್ನು ಹಾಕಿಕೊಳ್ಳಲಾಗಿದೆ. ಸರ್ಕಾರ ಇತಂಹ ಇನ್ನು ಅನೇಕ ರೀತಿಯ ಹೊಸ ಕಾಯಿದೆ, ಯೋಜನೆಗಳನ್ನು ಜಾರಿಗೆ ತಂದರು. ಇವುಗಳನ್ನು ತಡೆಯಲು ಸಾಧ್ಯವಾಗುತ್ತಿಲ್ಲವೆಂದರೆ ನಾವು ಅರ್ಥ ಮಾಡಿಕೊಳ್ಳಬೇಕು ಇಂದು ಜಾಗತಿಕ ಮಟ್ಟದಲ್ಲಿ ದೊಡ್ಡ ಮಾಫಿಯ ಆಗಿ ಬೆಳದುಬಿಟ್ಟಿದೆ. ಕರ್ನಾಟಕ ರಾಜ್ಯದಲ್ಲಿ ಈ ಮಾಫಿಯ ಜಾಲಕ್ಕೆ ಬಲಿಯಾದ ಹೆಣ್ಣಮಕ್ಕಳಿಗೆ ದಮನಿತರು ಎಂದು ಕರೆಯುತ್ತರೆ.

ಭಾರತದಲ್ಲಿ ಪ್ರತಿ ೫೪ ನಿಮಿಷಕ್ಕೆ ಒಬ್ಬ ಮಹಿಳೆ ಅತ್ಯಾಚಾರಕೊಳ್ಳಗಾಗುತ್ತದ್ದಾಳೆ ಎಂದು ವಿಶ್ವಸಂಸ್ಥೆಯ ಸಮೀಕ್ಷೆಯು ತಿಳಿಸುತ್ತದೆ. ಸುಮಾರು ೧೦ ಸಾವಿರ ಮಹಿಳೆಯರುನ್ನು ಸಮೀಕ್ಷಿಸಲಾಗಿ ಪ್ರತಿಶತ ೫೦ರಷ್ಟು ಮಹಿಳೆಯರು ಮದುವೆಯ ಬದುಕಿನಲ್ಲಿ ಒಂದಲ್ಲ ಒಂದು ರೀತಿಯ ಹಿಂಸೆಯನ್ನು ಅನುಭಸುತ್ತಿದ್ದಾರೆ. ಶೇಕಡ ೪೨.೫ ರಷ್ಟು ಮಹಿಳೆಯರು ಪ್ರತಿನಿತ್ಯ ಮಾನಸಿಕ ನೆಮ್ಮದಿಯನ್ನು ಕೆಡಿಸಿಕೊಳ್ಳುವ ಯಾವುದಾದರೂ ಬೈಗುಳಕ್ಕೆ ಒಳಗಾಗುತ್ತಿದ್ದಾರೆ. ಶೇಕಡ ೪೦.೩ ರಷ್ಟು ಮಹಿಳೆಯರು ನಾನಾ ಬಗೆಯ ದೈಹಿಕ ಹಿಂಸೆಗಳಿಗೆ (ಹೊಡೆತ- ಬಡಿತ) ಬಲಿಯಾಗುತ್ತಿದ್ದಾರೆ ಎಂಬುದು ತಿಳಿದು ಬರುತ್ತದೆ. (ದಿಕ್ಸೂಚಿ ಜುಲೈ ೨೦೦೩) ಹೆಣ್ಣುಮಕ್ಕಳ ಅಕ್ರಮ ಸಾಗಣೆ ದಕ್ಷಿಣ ಭಾಗಕ್ಕಿಂತ ಉತ್ತರ ಕರ್ನಾಟಕ ಭಾಗದಲ್ಲಿ ಅಧಿಕವಾಗಿದೆ. ಹೆಣ್ಣು ಮಕ್ಕಳನ್ನು ಹೊರರಾಜ್ಯಗಳಿಗೆ ಅಕ್ರಮವಾಗಿ ಕರೆದೊಯ್ಯುವ ಹೇಯಕೃತ್ಯವನ್ನು ನಡೆಸುತ್ತಾರೆ. ಅದರಿಂದ ವಿದ್ಯಾವಂತರು, ಸಂಘ ಸಂಸ್ಥೆಗಳು, ಮಹಿಳಾ ಸಂಘಟನೆಗಳು ಈ ಬಗ್ಗೆ ಅರಿವು ಮೂಡಿಸಬೇಕು. ಇದನ್ನು ತಡೆಯಲು ಸರ್ಕಾರಗಳು ಹೊಸ ಕಾನೂನುಗಳನ್ನು ಜಾರಿಗೆ ತರಬೇಕು. (ವಿಜಯ ಕರ್ನಾಟಕ ಏಪ್ರೀಲ್ ೨೬ ೨೦೧೫) ದೇಶದಲ್ಲಿ ಮೂರನೆಯ ದೊಡ್ಡ ರಾಜ್ಯವೆಂದು ಕರ್ನಾಟಕ ದಾಖಲೆಯಾಗಿದೆ. ಶೇಕಡ ೪೫.೯ರಷ್ಟು ದಮನಿತರನ್ನು ಕದ್ದೊಯ್ದು ಈ ದಂಧೆಗೆ ನೂಕಲಾಗಿದೆ ಎಂಬ ಅಂಶವು ಬೆಳಕಿಗೆ ಬಂದಿದೆ. ಇದನ್ನು ಗಮನಿಸಿದಾಗ ನಮ್ಮ ರಾಜ್ಯ ಎಷ್ಟು ಅಸುರಕ್ಷಿತವಾಗಿದೆ ಎಂಬುದರ ಮುನ್ಸೂಚನೆಯಾಗಿದೆ. ಕಳೆದ ಹತ್ತು ವರ್ಷಗಳಲ್ಲಿ ಸುಮಾರು ೧೬.೩೬೭ ಬಾಲಕಿಯರಲ್ಲಿ ೧೪೯ ಬಾಲಕಿಯರು ಪತ್ತೆಯೇ ಆಗಿಲ್ಲದಿರುವುದನ್ನು ಗಮನಿಸಬಹುದು. ಹಾಗೆಯೇ ಕಾಣೆಯಾದ ೩೮.೧೨೦ ಮಹಿಳೆಯರಲ್ಲಿ ೪೧೯ ಮಹಿಳೆಯರನ್ನೂ ಪತ್ತೆಯಾಗಬೇಕಿದೆ.

ಪೋಲಿಸ್ ಇಲಾಖೆಯಲ್ಲಿರುವ 'ಮಾನವ ಕಳ್ಳಸಾಗಣಿಕೆ ನಿಯಂತ್ರಣ ಸೆಲ್‌ಗಳು ನಿದ್ದೆ ಹೋಗಿವೆಯೋ ಅಥವಾ ಕೋಮಾ ತಲುಪಿವೆಯೋ ಗೊತ್ತಿಲ್ಲ! ಎನ್ನುವ ಮಟ್ಟಕ್ಕೆ ಜನ ಯೋಚನೆ ಮಾಡುವಂತೆಯಾಗಿದೆ. ಮಧ್ಯವರ್ತಿಗಳು ಇವತ್ತು ಹಣ ಮಾಡಬೇಕು ಎನ್ನುವ ಹುಚ್ಚನ್ನು ಅಂಟಿಸಿಕೊಂಡು ಅಮಾಯಕರನ್ನು ಕರೆದುಕೊಂಡು ಹೋಗಿ ದೊಡ್ಡ ನಗರಗಳಾದ ಮೀರಜ್, ಮುಂಬೈ, ಬೆಂಗಳೂರು, ಸಾಂಗ್ಲಿ, ಪುಣೆ, ಗೋವಾ, ದೆಹಲಿ, ಹೈದ್ರಾಬಾದ್, ಕೊಲ್ಕತ್ತ ಮುಂತಾದ ನಗರಗಳ ಕಡೆ ಕರೆದುಕೊಂಡು ಹೋಗಿರುವುದು ಅಧ್ಯಯನಗಳಿಂದ ತಿಳಿದು ಬಂದಿದೆ.

ಒಟ್ಟಾರೆಯಾಗಿ ಅಂಕಿ-ಅಂಶಗಳನ್ನು ಗಮನಿಸಿದಾಗ ಶೇಕಡ ೩೬.೮ರಷ್ಟು ಹೆಣ್ಣು ಮಕ್ಕಳು ಪರಿಶಿಷ್ಟ ಜಾತಿಗೆ ಸೇರಿದವರು. ಶೇಕಡ ೬.೮ರಷ್ಟು ಪರಿಶಿಷ್ಟ ಪಂಗಡಕ್ಕೆ ಸೇರಿದವರು. ಶೇಕಡ ೧೮.೨ರಷ್ಟು ಹಿಂದುಳಿದ ವರ್ಗದವರು. ಶೇಕಡ ೩೮.೨ರಷ್ಟು ಇತರೆ ಹೆಣ್ಣು ಮಕ್ಕಳು ಇರುವುದನ್ನು ಗಮನಿಸಬಹುದು. ಧರ್ಮವಾರು ಲೆಕ್ಕಚಾರ ಮಾಡಿ ನೋಡುವುದಾದರೆ ಹಿಂದೂ ಶೇಕಡ- ೮೫ರಷ್ಟು, ಮುಸ್ಲಿಂ- ಶೇಕಡ ೯.೭, ಕ್ರಿಶ್ಚಿಯನ್ ೧.೭, ಜೈನ್ ೦.೪, ಬೌದ್ದ ೦.೪, ಸಿಖ್ ೦.೨. ಮತ್ತು ಇತರೆ ೨.೨ ಹೆಣ್ಣು ಮಕ್ಕಳು ಈ ವೇಶ್ಯಾವಾಟಿಕೆಗೆ ಬಿದ್ದಿರುವುದು ವಿಧಾನ ಸಭೆ ಸದಸ್ಯರಾದ ಜಯಮಾಲ ಅವರ ಅಧ್ಯಕ್ಷತೆಯಲ್ಲಿ ೨೧ಜನ ಸದಸ್ಯರನ್ನೊಳಗೊಂಡ ಮೇ ೨೦೧೫ರಲ್ಲಿ ನೇಮಿಸಿದ ಸಮಿತಿಯಲ್ಲಿ ತಿಳಿಯುತ್ತದೆ. ಆ ಸಮಿತಿಯು ರಾಜ್ಯಾದ್ಯಂತ ಇರುವ ೩೦ ಜಿಲ್ಲೆಗಳಲ್ಲಿ ಸ್ವತಃ ೩೦೦೦ ದಮನಿತರನ್ನು ಭೇಟಿಯಾಗಿ ಮುಖಾಮುಖಿ ಮಾತಾಡಿಸಿ ಎಲ್ಲಾ ೧೭೬ ತಾಲ್ಲೂಕುಗಳಿಂದ ೮೧೦೦ ಮಹಿಳೆಯರುನ್ನು ೧೯ ಪ್ರಶ್ನೆಗಳನ್ನು ಪ್ರಶ್ನಾವಳಿಗಳ ಮೂಲಕ ಅಧ್ಯಯನ ನಡೆಸಿರುತ್ತರೆ. ಇದರಲ್ಲಿ ಶೇಕಡ ೭೨ರಷ್ಟು ಮಂದಿ ಈ ದಂಧೆಗೆ ಅನಿವಾರ್ಯವಾಗಿ ಬಂದುಬಿಟ್ಟಿದ್ದೇವೆ. ಈಗ ನಾವು ಇದರಿಂದ ಹೊರಬಂದು ಒಳ್ಳೆರೀತಿಯಲ್ಲಿ ಜೀವನ ನಡೆಸಬೇಕು ಎಂದುಕೊಂಡಿದ್ದೇವೆ. ಒಂದು ರೀತಿಯಲ್ಲಿ ಹೇಳಬೇಕಾದರೆ ಇವರು ದಂಧೆ ಮಾಡುತ್ತಿರುವುದು ತಮ್ಮ ಮಕ್ಕಳಿಗೆ, ಕುಟುಂಬದವರಿಗೆ, ಸಂಬಂಧಿಕರಿಗೆ, ಮತ್ತು ನೆರೆಹೊರೆಯವರಿಗೆ ಗೊತ್ತಿಲ್ಲ ಒಂದು ವೇಳೆ ಗೊತ್ತಿದ್ದರೆ? ಆತ್ಮಹತ್ಯೆ ಮಾಡಿಕೊಳ್ಳಬೇಕಷ್ಟೇ. ನಾವೇನು ಇಷ್ಟಪಟ್ಟು ಇಲ್ಲಿಗೆ ಬಂದಿಲ್ಲ ವಿಧಿ ಇಲ್ಲದೇ ಬಿದ್ದಿದ್ದೀವಿ ಎನ್ನುವ ಉತ್ತರ ತಿಳಿಯುತ್ತದೆ. ಈ ಮೇಲಿನ ವಿಚಾರಗಳನ್ನು ಗಮನಿಸದಾಗ ನಮಗೆ ಆರ್ಥವಾಗುತ್ತದೆ ಇವರ‍್ಯಾರು ತಾವಗಿಯೇ ಬಂದು ಇದರಲ್ಲಿ ಬಲಿಯಾಗುವುದಿಲ್ಲ.

ಅವರ ಸಾಮಾಜಿಕ, ಆರ್ಥಿಕ ಪರಿಸ್ಥಿತಿ ಇಂದ. ಯಾರೋ ಮಾತಗಳನ್ನು ಕೇಳಿಕೊಂಡು ಬಂದು, ಮಧ್ಯವರ್ತಿಗಳ ರಾಜಕೀಯ ಪ್ರಭಾವಕ್ಕೆ ಬಲಿಯಾಗಿ ರಾಜ್ಯದಿಂದ ಹಿಡಿದು ದೇಶಗಳ ಗಡಿ ಮಾರ್ಗಗಳ ಮೂಲಕ ವಿದೇಶಗಳಿಗೆ ಮಾರಾಟ ಮಾಡುವ ಮಾನವ ಕಳ್ಳಸಾಗಣಿಕೆಯ ಗುಂಪುಗಳು ಇವತ್ತು ಬೆಳೆಯುತ್ತಿವೆ. ಯಾರೋ ಮಾಡುವ ತಪ್ಪಿಗೆ ಇನ್ನಾರೋ ಬಲಿಯಾಗಿ ಮತ್ಯಾರೋ ಲಾಭಗಳಿಸುತ್ತಾರೆ ಎನ್ನುವುದನ್ನು ತಿಳಿಯಬಹುದು.

ಹಿಂದೆ ಇದ್ದ ಅವಿಭಕ್ತ ಕುಟುಂಬಗಳು ಇಂದು ಕಾಣೆಯಾಗಿ ವಿಭಕ್ತ ಕುಟುಂಬಗಳು ಆಗಿವೆ. ಹೊಂದಾಣಿಕೆಯ ಸಮಸ್ಯೆ ಇದೆ. ಮಾನವ ಮೊದಲು ತಾನು ಚೆನ್ನಾಗಿರಬೇಕು. ನಂತರ ಹೆಂಡತಿ, ಮಕ್ಕಳು, ಆನಂತರ ತಂದೆ, ತಾಯಿ, ಎನ್ನುವ ಭಾವನೆಗೆ ಬಂದು ಬಿಟ್ಟಿದ್ದಾರೆ ಸಾಕಷ್ಟು ಜನ. ಅವರಿಗೆ ತಕ್ಕಂತೆ ಪ್ರಕೃತಿಯಲ್ಲಿಯೂ ಕೆಲವು ಮಾರ್ಪಡುಗಳಾಗಿವೆ. ಹಳ್ಳಿಯ ವಾತಾವಾರಣ ಅಶುದ್ದವಾಗುತ್ತಿದೆ. ಮಳೆಯೆನ್ನುವುದು ಅಪರೂಪವಾಗಿದೆ. ಮುಂಗಾರು ಮಳೆ, ಹಿಂಗಾರು ಮಳೆ ಯಾವಾಗ ಬರಬೇಕು ಆವಾಗ ಬರುವುದಿಲ್ಲ. ಯಾರಿಗೆ ಯಾವ ಸೌಲಭ್ಯಗಳು ಸಿಗಬೇಕು ಅವು ಅವರಿಗೆ ಸಿಗುವುದಿಲ್ಲ. ಅತಂಹ ಸನ್ನಿವೇಶದಲ್ಲಿ ತಪ್ಪುದಾರಿಗಳನ್ನು ಹಿಡಿದು ಇತರರನ್ನು ಹಾಳುಮಾಡುತ್ತಾನೆ. ಇದಕ್ಕೆಲ್ಲ ಯಾರು ಕಾರಣಕರ್ತರು? ಈ ಸಮಾಜವಲ್ಲವೇ? ಆದರೆ ಸಮಾಜ ಯಾವುದೇ ಸಂಬಂಧವಿಲ್ಲ ಎನ್ನುವ ಮಟ್ಟಕ್ಕೆ ಬಂದು ಬಿಟ್ಟಿದೆ. ಹಾಗಾದರೆ ಇವರನ್ನು ಕಾಪಡುವವರು ಯಾರು? ಅದು ನನಗೆ ಸಂಬಂಧವಿಲ್ಲದೇ ಇರುವ ವಿಷಯ. ಅವರ ಸಮಸ್ಯೆ ಅವರೇ ಬಗೆಹರಿಸಿಕೊಳ್ಳಲಿ ನಾವು ಏಕೆ? ಅವರಿಗೆ ನ್ಯಾಯ ದೊರಕಿಸಿಕೊಡಬೇಕು ಅವರೇ ನೋಡಿಕೊಳ್ಳಲಿ ಎನ್ನುವವರೇ ಜಾಸ್ತಿ.

ಈ ವಿಷಯವನ್ನು ನೋಡಿದರೆ ಒಂದು ಚಿಕ್ಕ ಕತೆ ನೆನಪಾಗುತ್ತದೆ. ನನಗೆ ಆಂಧ್ರಪ್ರದೇಶದ ಸಿಬಿಐ ಅಧಿಕಾರಿ ವಿ.ವಿ.ಲಕ್ಷ್ಮೀನಾರಯಣರವರು ಹೇಳಿದ್ದು. ಒಬ್ಬ ರೈತನ ಮನೆಯಲ್ಲಿ ಒಂದು ಕೋಳಿ, ಆಡು, ಇಲಿ ಇರುತ್ತವೆ. ಒಂದು ದಿನ ರೈತನಿಗೆ ಮದುವೆ ಆಗುತ್ತದೆ. ಮನೆಯಲ್ಲಿ ಇಲಿಯ ಕಿರಿಕಿರಿ ಅವಳಿಗೆ ಇಷ್ಟವಿಲ್ಲದೇ ಅದನ್ನು ಬಂಧಿಸಲು ತನ್ನ ಗಂಡನ ಬಳಿ ಚರ್ಚೆಮಾಡುತ್ತ ಇರುತ್ತಾಳೆ. ಇದನ್ನು ಕೇಳಿಸಿಕೊಂಡ ಇಲಿ ತನಗೆ ಸಹಾಯ ಮಾಡುವಂತೆ ಆಡು ಮತ್ತು ಕೋಳಿಯನ್ನು ಕೇಳಿಕೊಳ್ಳುತ್ತದೆ. ಅವುಗಳು ಸಹಾಯಮಾಡಲು ಒಪ್ಪಿಕೊಳ್ಳವುದಿಲ್ಲ. ನಿನ್ನ ಸಮಸ್ಯೆ ಇದು ನೀನೇ ನೋಡಿಕೊ ಎನ್ನುವ ಉತ್ತರ ಬರುತ್ತದೆ. ಆ ದಂಪತಿಗಳು ದಿನಾಲು ಬೆಳಗ್ಗೆ ಜಳಕ ಮಾಡಲು ನದಿಗೆ ಹೋಗುತ್ತಾರೆ. ಆದ್ದರಿಂದ ಈ ಇಲಿ ನದಿಯಲ್ಲಿರುವ ಮೊಸಳೆಗೆ ಸಹಾಯವನ್ನು ಕೇಳಿದಾಗ ಅದು ಸಹ ಅವರು ಹೇಳಿದ ಉತ್ತರವನ್ನೇ ಕೊಡುತ್ತದೆ. ಅದರಿಂದ ಇಲಿ 'ಹೋದ ದಾರಿಗೆ ಸುಂಕವಿಲ್ಲದೆ' ಮರಳಿತು. ರೈತನ ಹೆಂಡತಿ ಇಲಿಯನ್ನು ಬಂಧಿಸುವ ಪೆಟ್ಟಿಗೆಯನ್ನು ತಂದು ಇಡುತ್ತಾಳೆ ಇಟ್ಟ ಸ್ವಲ್ಪ ಸಮಯದ ನಂತರ ಜೋರಾದ ಸದ್ದು ಬರುತ್ತದೆ. ಇದನ್ನು ಗಮನಿಸಿ ಬಂದು ಪೆಟ್ಟಿಗೆಯನ್ನು ತೆರೆದರೆ ಅದರಿಂದ ಹೊರ ಬಂದ ಹಾವು ರೈತನ ಹೆಂಡತಿಗೆ ಕಚ್ಚಿಬಿಡುತ್ತದೆ. ವೈದ್ಯರಬಳಿ ಹೋದಾಗ, ಚಿಕಿತ್ಸೆ ಫಲಕಾರಿಗದೇ ಮನೆಗೆ ಬಂದು, ನಾಟಿವೈದ್ಯಕೀಯ ಮಾಡಿಸಿಕೊಳ್ಳುತ್ತಾರೆ. ಆ ಸಮಯದಲ್ಲಿ ಇವರನ್ನು ನೋಡಲು ಬಂದ ನೆಂಟರಿಗೆ ಮನೆಯಲ್ಲಿರುವ ಕೋಳಿಯನ್ನು ಕತ್ತರಿಸಿ, ಇವರ ಊಟಕ್ಕೆ ಸಿದ್ದಮಾಡಿ ಬಡಿಸುತ್ತಾರೆ. ಇನ್ನು ಸ್ವಲ್ಪ ಜನ ಜಾಸ್ತಿ ಬಂದಕಾರಣ ಮನೆಯಲ್ಲಿರುವ ಆಡು ಸಹ ಅತಿಥಿಗಳ ಊಟಕ್ಕೆ ಬಳಸುತ್ತಾರೆ. ಹಾವು ಕಚ್ಚಿ ವಾರ



ಕಳೆದುಹೋದರೂ ಗುಣವಾಗಲಿಲ್ಲ. ಆದ್ದರಿಂದ ನೆಂಟರ ಸಲಹೆ ಮೇರೆಗೆ ಪರಿಚಯ ಇರುವ ವೈದ್ಯರ ಬಳಿ ಕರೆದುಕೊಂಡು ಹೋಗುತ್ತಾರೆ. ಅವರು ಪರೀಕ್ಷಿಸಿದ ನತಂರ ಇವರಿಗೆ ಕಚ್ಚಿರುವುದು ಸಾಮಾನ್ಯ ಹಾವಲ್ಲ. ಇವರು ಗುಣ ವಾಗಬೇಕಾದರೆ ಮೊಸಳೆ ರಕ್ತ ಬೇಕು ಎಂದಾಗ ನೆಂಟರೆಲ್ಲ ಸೇರಿ ಆ ನದಿಯಲ್ಲಿ ಇರುವ ಮೊಸಳೆಯನ್ನು ಸಾಯಿಸಿ ತಂದು. ರೈತನ ಹೆಂಡತಿಯನ್ನು ಚೇತರಿಸಿಕೊಳ್ಳುವಂತೆ ಮಾಡುತ್ತಾರೆ.

ಈ ಕತೆಯನ್ನು ಓದಿದಾಗ ಅರಿವಾಗುವುದೇನೆಂದರೆ, ಸಹಾಯ ಕೇಳಲು ಬಂದ ಇಲಿ ಬಲಿಯಾಗಲಿಲ್ಲ. ಸಹಾಯ ಮಾಡದೇ ಇರುವ ಆಡು, ಕೋಳಿ, ಮತ್ತು ಮೊಸಳೆ ಬಲಿಯಾಗಿದೆ ಎಂದು. ಅದರಿಂದ ಮಾನವ ಸಮಾಜದಲ್ಲಿ ನಡೆಯುವ ಮಹಿಳೆ ಮತ್ತು ಮಕ್ಕಳ ಕಳ್ಳಸಾಗಣಿಕೆ, ವೈಶ್ಯವಾಟಿಕೆ, ಭಯೋತ್ಪದೆ, ಇತ್ಯಾದಿ ಕೆಟ್ಟ ಸಂಪ್ರದಾಯ ಮತ್ತು ಅನೈತಿಕ ಚಟುವಟಿಕೆಗಳಿಗೆ ನಮಗೆ ಯಾವುದೇ ಸಂಬಂಧವಿಲ್ಲವೆಂದು ಕೈ ಕಟ್ಟಿ ಕುಳಿತುಕೊಂಡರೆ ಯಾರೋ ಮಾಡುವ ತಪ್ಪಿಗೆ ಇನ್ಯಾರೋ ಬಲಿಯಾಗಬೇಕಾಗುತ್ತದೆ. ಆದರಿಂದ ಎಚ್ಚೆತ್ತುಕೊಂಡು ನಡೆಯಬೇಕಾಗುತ್ತದೆ.

**ಪರಾಮರ್ಶನ ಗ್ರಂಥಗಳು**


೧. ಡಾ. ಬಿ. ಶೇಷಾದ್ರಿ- 'ಮಹಿಳೆಯರ ದುಸ್ಥಿತಿ ಮತ್ತು ಸಬಲೀಕರಣ' ಮಹಿಳಾ ಅಧ್ಯಯನ ಕೇಂದ್ರ ಕನ್ನಡ ವಿಶ್ವವಿದ್ಯಾಲಯ ಹಂಪಿ.

೨. ಸಿದ್ದಗಂಗಮ್ಮ ಬುಡಕಟ್ಟು ಮಹಿಳೆ ಮತ್ತು ಅಭಿವೃದ್ಧಿ ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ ಹಂಪಿ( ಜೂನ್ ೨೦೦೭)

೩. ಡಾ. ಜ್ಯೋತಿ ಶಶಿಕುಮಾರ್ 'ಮಹಿಳಾ ಸಾಮಾಜಿಕತೆ' ಪ್ರಕಾಶಕರು ಮಹಿಳಾ ಅಧ್ಯಯನ ಕೇಂದ್ರ ಕನ್ನಡ ವಿಶ್ವವಿದ್ಯಾಲಯ ಹಂಪಿ.೨೦೦೭.

೪. ಡಾ. ಓ. ಆರ್. ಚಂದ್ರಶೇಖರ್ ಮಹಿಳೆ; ಸಾಮಾಜಿಕತೆ ಮತ್ತು ರಾಜಕೀಯ ಸಾವಾಲುಗಳು ಪ್ರಸಾರಾಂಗ ಗುಲ್ಬರ್ಗಾ ವಿಶ್ವವಿದ್ಯಾಲಯ ಗುಲ್ಬಾರ್ಗ, ೨೦೦೫.

೫. ಡಾ. ಓ. ಆರ್. ಚಂದ್ರಶೇಖರ್ ಮಹಿಳೆ; ಸಾಮಾಜಿಕತೆ ಮತ್ತು ರಾಜಕೀಯ ಸಾವಾಲುಗಳು ಪ್ರಸಾರಾಂಗ ಗುಲ್ಬರ್ಗಾ ವಿಶ್ವವಿದ್ಯಾಲಯ ಗುಲ್ಬಾರ್ಗ, ೨೦೦೫.

೬. ವೆಂಕಟೇಶ ಎ "ಮಹಿಳಾ ರಾಜಕಾರಣ" ಗೌತಮ್ ಬುಕ್ ಹೌಸ್ ಕಮಲಾಪುರ ಹೋಸಪೇಟೆ ೨೦೧೭..

೭. ಬೋಸರ ಎಸ್ತರ್, ವುಮೆನ್ಸ್ ರೂರಲ್ ಇನ್ ಎಕನಾಮಿಕ್ ಡೆವಲಪ್‌ಮೆಂಟ್, ಸೆಂಟ್ ಮಾರ್ಟಿನ್ಸ್, ನ್ಯೂಯಾರ್ಕ್, ೧೯೮೯.

೮. ಚಂದ್ರಪೂಜಾರಿ ಎಂ "ಅಭಿವೃದ್ಧಿ ಸಿದ್ಧಾಂತಗಳು". ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ. ೨೦೧೭.

೯. ಪ್ರಶಾಂತ. ಎಚ್.ಡಿ. "ಅಭಿವೃದ್ಧಿ ಮತ್ತು ಮಹಿಳೆ". ಅಭಿವೃದ್ಧಿ ಅಧ್ಯಯನ, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ ಸಂಪುಟ ೯ಸಂಚಿಕೆ ೧ ಜನವರಿ-ಜೂನ್೨೦೧೬

೧೦. ದಿಕ್ಸೂಚಿ ಜುಲೈ ೨೦೦೩

೧೧. ವಿಜಯ ಕರ್ನಾಟಕ ಏಪ್ರೀಲ್ ೨೬ ೨೦೧೫

೧೨. ಅಂತರಜಾಲ ಮಾಹಿತಿ

೧೩. http/www.womentstutes.co.in




# ದಾವಣಗೆರೆ ಜಿಲ್ಲೆಯಲ್ಲಿ ಪ್ರಾಚೀನ ಜೈನ ತೀರ್ಥಂಕರರ ಮೂರ್ತಿ ಶಿಲ್ಪಗಳು

**ನಾಗರಾಜ ಪಿ. ಕುರ್ಕಿ**

**ಡಾ.ಎಸ್.ಜಿ. ಚಲವಾದಿ**

ರಾಜ್ಯದ ಹೃದಯ ಭಾಗದಲ್ಲಿರುವ ದಾವಣಗೆರೆಯು ೧೫.೦೮.೧೯೭ರಂದು ಜಿಲ್ಲಾ ಕೇಂದ್ರವಾಯಿತು. ಕರ್ನಾಟಕದ ಮ್ಯಾಂಚೆಸ್ಟರ್, ದಕ್ಷಿಣ ಕರ್ನಾಟಕದ ಹೆಬ್ಬಾಗಿಲು, ಬೆಣ್ಣೆ ನಗರಿ, ದೇವನಗರಿ, ಸ್ಮಾರ್ಟ್‌ಸಿಟಿ ಮುಂತಾದ ಪದನಾಮಗಳಿಂದ ಕರೆಯಿಸಿಕೊಳ್ಳುತ್ತದೆ. ಪ್ರಸ್ತುತವಾಗಿ ದಾವಣಗೆರೆ, ಚನ್ನಗಿರಿ, ಜಗಳೂರು, ಹರಿಹರ, ಹೊನ್ನಾಳಿ ಮತ್ತು ನೂತನವಾಗಿ ಸ್ಥಾಪಿತವಾಗಿರುವ ನ್ಯಾಮತಿ ತಾಲೂಕುಗಳನ್ನು ಹೊಂದಿದೆ. ಕ್ರಿ.ಶ. ಆರಂಭದಿಂದ ೧೦ನೇ ಶತಮಾನದವರೆಗಿನ ಕಾಲವನ್ನು ಜೈನಧರ್ಮದ ಸಮೃದ್ಧಿಯ ಸುವರ್ಣ ಯುಗವೆನ್ನಬಹುದು. ಆನಂತರ ರಾಜಕೀಯ ಸ್ಥಿತ್ಯಂತರ, ಅನ್ಯಧರ್ಮೀಯರ ಆಕ್ರಮಣಗಳು, ಭಕ್ತಿಪಂಥ ಜನಪ್ರಿಯತೆ ಮುಂತಾದ ಅಂಶಗಳ ಕಾರಣದಿಂದ ಜೈನಧರ್ಮವು ಜನತೆಯ ಮೇಲಿದ್ದ ಹಿಡಿತವನ್ನು ಕಳೆದುಕೊಳ್ಳುತ್ತ ಬಂದಿತು. ಆದರೆ ಕರ್ನಾಟಕ ಸಾಂಸ್ಕೃತಿಕ ಚರಿತ್ರೆಗೆ ಅದು ಕೊಟ್ಟಿರುವ ಕಾಣಿಕೆ ಅಪರಿಮಿತ ಮತ್ತು ಉಪಮಾತೀತ ಕನ್ನಡ ಸಾಹಿತ್ಯ, ಕಲೆ ಮತ್ತು ವಾಸ್ತುಶಿಲ್ಪಗಳಿಗೆ ಜೈನಧರ್ಮದ ವಿಶಿಷ್ಟ ಕೊಡುಗೆ ಇದೆ.

'The art of organizing space' ಅಂದರೆ ನಿರಾಕಾರವಾದ ಆಕಾಶವನ್ನೇ ಒಂದು ವ್ಯವಸ್ಥೆಗೊಳಿಸಿ ಅದಕ್ಕೊಂದು (ವ್ಯವಸ್ಥೆ) ರೂಪಕೊಡುವುದೇ ಕಲೆ, ಕಲೆಯ ವಿವಿಧ ಬಗೆಗಳಲ್ಲಿ ಮೂರ್ತಿಶಿಲ್ಪವೂ ಒಂದು. ಶಿಲ್ಪ ಎನ್ನುವ ಮಾತು ಮೊದಲು ಬಹಳ ವ್ಯಾಪಕವಾದ ವಿಶಾಲವಾದ ಅರ್ಥವನ್ನು ಪಡೆದಿತ್ತು. ಪ್ರಸಿದ್ಧವಾದ ಅರವತ್ತನಾಲ್ಕು ಕಲೆಗಳಿಗೆಲ್ಲ 'ಶಿಲ್ಪ' ಎನ್ನುವ ಹೆಸರೇ ಅನ್ವಯವಾಗುತ್ತಿತ್ತು. ಈ ಶಾಸ್ತ್ರಕ್ಕೆ ಪ್ರಾಮಾಣಿಕವಾದ ಅಧಿಕೃತವೂ ಆದ **'ಮಾನಸಾರ'** ಎಂಬ ಗ್ರಂಥ ಈ ಎಲ್ಲಾ ವಿಷಯಗಳನ್ನು ವಿವರಿಸುತ್ತದೆ. ಆದರೆ ನಂತರ ಈ ಪದದ ವ್ಯಾಪ್ತಿಯು ಸೀಮಿತಿಗೊಂಡು ವಾಸ್ತುಶಿಲ್ಪ ಎಂದರೆ ಕಟ್ಟಡಗಳ ನಿರ್ಮಾಣ ಮತ್ತು ಶಿಲ್ಪ ಎಂದರೆ ಮೂರ್ತಿಗಳ ನಿರ್ಮಾಣ ಎಂಬ ಅರ್ಥ ಬೆಳೆದು ಬಂದಿದೆ.

ದೇವಾಲಯದ ಆರಾಧ್ಯ ವಿಗ್ರಹವನ್ನಾಗಲೀ ಅಥವಾ ಅಲ್ಲಲ್ಲಿ ಅಲಂಕಾರಕ್ಕಾಗಿ, ಅಗತ್ಯಕ್ಕಾಗಿ ನಿರ್ಮಿಸಿದ ವಿವಿಧ ವಿಗ್ರಹಗಳನ್ನು ಮೂರ್ತಿಶಿಲ್ಪವೆನ್ನಬಹುದು. ಜೈನಧರ್ಮ ಉಚ್ಛ್ರಾಯ ಸ್ಥಿತಿಯಲ್ಲಿದ್ದಾಗ ನಾಡಿನಾದ್ಯಾಂತ ಜಿನ ದೇವಾಲಯಗಳು, ಬಸದಿಗಳು, ನಿಷಿಧಿಗಲ್ಲುಗಳು, ಜೈನತೀರ್ಥಂಕರರ ಮೂರ್ತಿಗಳು ಕಂಡುಬರುತ್ತವೆ. ಕರ್ನಾಟಕ ಪ್ರಾಚೀನ ಸಾಂಸ್ಕೃತಿಕ ಚರಿತ್ರೆಯಲ್ಲಿ ತೀರ್ಥಂಕರರ ಮೂರ್ತಿಗಳು ಸಹ ಅಮೂಲ್ಯವಾದವುಗಳು. ದಾವಣಗೆರೆ ಜಿಲ್ಲೆಯಲ್ಲಿ ಕಂಡುಬರುವ ಪ್ರಾಚೀನ ಜೈನ ತೀರ್ಥಂಕರ ಮೂರ್ತಿಗಳು ಮತ್ತು ಅವುಗಳ ಪ್ರಸ್ತುತ ಸ್ಥಿತಿಗತಿಗಳನ್ನು ಲೇಖನದಲ್ಲಿ ಸವಿವರವಾಗಿ ಸಾದರಪಡಿಸಲಾಗಿದೆ.

ದಾವಣಗೆರೆ ಮಹಾನಗರ ಪಾಲಿಕೆ ವ್ಯಾಪ್ತಿಗೆ ಒಳಪಟ್ಟಿರುವ ನಗರ ಕೇಂದ್ರದಿಂದ ಸುಮಾರು ೩ ಮೈಲಿ ದೂರದಲ್ಲಿರುವ ಶ್ಯಾಮನೂರು ಸುಮಾರು ೮೦೦ ವರ್ಷಗಳಿಗೂ



ಅಧಿಕ ಐತಿಹಾಸಿಕತೆಯನ್ನು ಹೊಂದಿದೆ ಎಂಬುದಕ್ಕೆ ಇಲ್ಲಿನ ಈ ಪ್ರಾಚೀನ ದೇವಾಲಯಗಳು, ಎರಡು ವೀರಗಲ್ಲುಗಳು, ಮಾರುಕಟ್ಟೆ ಶಾಸನ ಮುಂತಾದವುಗಳು ಇಲ್ಲಿನ ಸಾಂಸ್ಕೃತಿಕ ಇತಿಹಾಸವನ್ನು ತಿಳಿಸುತ್ತವೆ. ಶಾಮನೂರಿನ ಕೋಟೆಯ ಪ್ರದೇಶದಲ್ಲಿ ಒಂದು ಅಂಕಣದ ಚೌಕಾಕಾರದ ಗುಡಿಯಿದೆ. ಈ ಗುಡಿಯಲ್ಲಿ ಸುಮಾರು ನಾಲ್ಕು ಅಡಿ ಎತ್ತರದ, ಅಷ್ಟೇ ಅಗಲದ ಪದ್ಮಾಸನ ಹಾಕಿ ಕುಳಿತಿರುವ ಭಂಗಿಯಲ್ಲಿರುವ ಅತ್ಯಂತ ಸುಂದರವಾದ ಮಹಾವೀರ ತೀರ್ಥಂಕರ ವಿಗ್ರಹವಿದೆ. ಗ್ರಾಮಸ್ಥರು ಈ ಸ್ಥಳಕ್ಕೆ ಜೈನ ಬಸದಿ ಎಂದು ಕರೆಯುತ್ತಾರೆ. ಆದರೆ ಈ ಗುಡಿಯು ಬಸದಿಯ ಲಕ್ಷಣವನ್ನು ಹೊಂದಿಲ್ಲ. ವಿಗ್ರಹವು ಕಪ್ಪುಕಲ್ಲಿನಲ್ಲಿ ನಿರ್ಮಿತವಾಗಿದ್ದು ಪದ್ಮಾಸನ ಹಾಕಿ ಕುಳಿತಿರುವ ಪ್ರಶಾಂತ ಮುಖಮುದ್ರೆಯ ತೀರ್ಥಂಕರರ ವಿಗ್ರಹವು ನೋಡುಗರನ್ನು ಆಕರ್ಷಿಸುತ್ತವೆ. ಇದು ಯಾವ ಕಾಲಮಾನದ್ದು ಎಂದು ತಿಳಿಯದೇ ಹೋದರೂ ಹಿಂದೆ ಇಲ್ಲಿ ಭವ್ಯವಾದ ಜೈನ ಬಸದಿ ಇದ್ದಿರಬಹುದು. ಕಾರಣ ಈ ಗುಡಿಯ ಮೂಲೆಯಲ್ಲಿ ಎರಡು ಕಲಾತ್ಮಕ ಕಲ್ಲುಗಳು ಮತ್ತು ಮೂಕಬಸಪ್ಪನ ಗುಡಿಯ ಮುಂದಿನ ಕಂಬದ ಕಲಾತ್ಮಕ ಕಂಬದ ಕಲ್ಲು ಇದೆ. ಅಲ್ಲದೇ ಇಲ್ಲಿನ ಮಾರುಕಟ್ಟೆ ಶಾಸನದ ಉಲ್ಲೇಖದಿಂದ ಸೂರ್ಯ ನಾಯಕನ ಪಿರಿಯ ನಾಯಕಿತಿ ಕಾಳಿಯಕ್ಕಂ. . . . . . . . ಜಿನಧರ್ಮಕ್ಕಾಗಿ ಅಜಿತಭಟ್ಟಾರಕರ ಅಗ್ರಶಿಷ್ಯರಾದ ಶಾಮನೂರಿನ ಸ್ಥಾಪನಚಾರ್ಯರಾದ, ಶ್ರೀಶಾಂತಿಶಯನ ಪಂಡಿತರಿಗೆ ಶ್ರೀ ಚಾಲುಕ್ಯ ವಿಕ್ರಮಕಾಲದ ೫೩ನೆಯ ಕೀಲಕ ಸಂವತ್ಸರದ ಸಂಕ್ರಮಣದಂದು ಶಾಮನೂರಿನ ಪಾರ್ಶ್ವದೇವರ ಕೂಟಕ್ಕೆ ಪೂಜಾರಿಯ ಬಿಯಕಂ . . . . . . ಕಟ್ಟೆಯ ಕೆಳಗೆ ಬಿಟ್ಟ ಗದ್ದೆ ಕಮ್ಮ–೪೫೦ ಕೆರೆಯ ಪಡುವಣ ಕೊಡಿಯಲ್ಲಿ ಬೆದ್ದಲು ಭೂಮಿಯನ್ನು ದಾನವಾಗಿ ನೀಡಿರುವ ಉಲ್ಲೇಖವಿದೆ.

ದಾವಣಗೆರೆ ನಗರ ಕೇಂದ್ರದಿಂದ ೩ ಕಿ.ಮೀ ದೂರದಲ್ಲಿರುವ ಬೇತೂರು ಐತಿಹಾಸಿಕ ಮಹತ್ವದ ಗ್ರಾಮ ತ್ರಿಭುವನ ಪಾಂಡ್ಯನು ಮಹಾಮಂಡಳೇಶ್ವರನಾಗಿದ್ದಾಗ ಬೇತೂರನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ಆಡಳಿತ ಮಾಡಿದ ಸ್ಥಳವಾಗಿದೆ. ಬೇತೂರಿನಲ್ಲಿರುವ ಐತಿಹಾಸಿಕ ಸ್ಮಾರಕಗಳು ನಾಡಿನ ಸಂಸ್ಕೃತಿಯನ್ನು ಸಾದರಪಡಿಸುತ್ತವೆ. ಬೇತೂರಿನ ರೇವಣಸಿದ್ದೇಶ್ವರ ಮತ್ತು ಸಮಗದ್ದುಗೆ ಸಂಗಮೇಶ್ವರನ ದೇವಾಲಯದ ಜೀರ್ಣೋದ್ಧಾರ ಕಾರ್ಯಮಾಡುವಾಗ ಸುಮಾರು ಮೂರು ಮೂರುವರೆ ಅಡಿ ಎತ್ತರದ ಮೂರು ತೀರ್ಥಂಕರರ ವಿಗ್ರಹಗಳು ದೊರೆತಿವೆ. ಇವನ್ನು ದೇವಸ್ಥಾನದ ಪಕ್ಕದ ಜಗುಲಿಯ ಮೇಲೆ ಮರದ ನೆರಳಿಗೆ ಇರಿಸಿದ್ದಾರೆ. ಅದರ ಹಿಂದೆ ಗಿಡ–ಗಂಟೆಗಳು ಬೆಳೆದಿದ್ದು ಅವನ್ನು ನಿರ್ಲಕ್ಷಿಸಿದಂತೆ ಕಂಡುಬರುತ್ತದೆ. ಇವು ಕಪ್ಪು ಕಲ್ಲಿನಲ್ಲಿ ನಿರ್ಮಿತವಾಗಿದ್ದು ಇದು ಸ್ವಲ್ಪ ಮಾಸಿದಂತೆ ಕಂಡುಬರುತ್ತದೆ. ಪದ್ಮಾಸನ ಹಾಕಿ ಕುಳಿತಿದ್ದು ಪ್ರಶಾಂತ ಧ್ಯಾನ ಮುದ್ರೆಯಲ್ಲಿವೆ. ಇಲ್ಲಿನ ಒಂದು ಜೈನ ಶಾಸನವು ಕೂಂಚರಾಜ ಮತ್ತು ಅವನ ಗುರು ಶ್ರೀಮಜ್ಜಿನ ಭಟ್ಟಾರದೇವರನ್ನು ವೈಭವಯುತವಾಗಿ ವರ್ಣಿಸುವುದಲ್ಲದೇ ಕೂಂಚರಾಜನ ಪತ್ನಿ ಮರಣ ಹೊಂದಲು ಆಕೆಯ ಜ್ಞಾಪಕಾರ್ಥವಾಗಿ ಲಕ್ಷ್ಮೀ ಜಿನಾಲಯವನ್ನು ಕಟ್ಟಲಾಗಿತ್ತು ಎಂದು ತಿಳಿದುಬರುತ್ತದೆ.

ದಾವಣಗೆರೆ ಜಿಲ್ಲೆ ಚನ್ನಗಿರಿ ತಾಲ್ಲೂಕು ಕೇಂದ್ರದ ವಾಯುವ್ಯಕ್ಕೆ ಸುಮಾರು ೨೫ ಕಿ.ಮೀ. ದೂರದಲ್ಲಿರುವ ಸುತ್ತಲೂ ಬೆಟ್ಟಗಳಿಂದ ಆವೃತವಾಗಿ ಕಿರಿದಾದ ಕಣಿವೆಯಲ್ಲಿ ಇರುವ ಐತಿಹಾಸಿಕ ಪ್ರಾಮುಖ್ಯತೆಯುಳ್ಳ ಊರು ಬಸವಪಟ್ಟಣ, ಸುಮಾರು ೨೦

ವರ್ಷಗಳ ಹಿಂದೆ ಜಮೀನು ಉಳುಮೆ ಮಾಡುವಾಗ ಗ್ರಾಮದ ಪಶ್ಚಿಮಕ್ಕೆ ಭರಮಜ್ಜರ ಹಾಲಸಿದ್ಧಪ್ಪನವರ ಅಡಿಕೆ ತೋಟದ ಜಮೀನಿನಲ್ಲಿ ಎರಡು ಜೈನ ವಿಗ್ರಹಗಳು ಮತ್ತು ಒಂದು ಯಕ್ಷ ವಿಗ್ರಹವು ದೊರೆತಿದೆ. ೧೦ನೇ ಶತಮಾನದ ಶಿಲ್ಪ ಲಕ್ಷಣಗಳಿರುವ ಪದ್ಮಾಸನ ಹಾಕಿ ಕುಳಿತಿರಬಹುದಾದ (ಕೆಳಭಾಗ ಮಣ್ಣಿನಲ್ಲಿ ಊನವಾಗಿದ್ದು ಕಾಣಿಸುವುದಿಲ್ಲ) ಈ ವಿಗ್ರಹಗಳು ಚಂದ್ರನಾಥ, ನೇಮಿನಾಥ ತೀರ್ಥಂಕರರೆಂದು ಗುರುತಿಸಲಾಗಿದ್ದು ನೋಡಲು ಬಹಳ ಸುಂದರವಾಗಿವೆ. ತೀರ್ಥಂಕರ ಕೇಶ ಮತ್ತು ಮುಖದ ಕೆಲಭಾಗ ಸ್ವಲ್ಪ ಮುಕ್ಕಾದಂತೆ ಕಂಡುಬರುತ್ತದೆ. ಅವು ಇತ್ತೀಚಿನ ಗುರುತುಗಳೆಂದು ಜಮೀನಿನ ಮಾಲೀಕರು ತಿಳಿಸಿರುವರು. ಯಕ್ಷನ ವಿಗ್ರಹದ ಕೈಗಳು ತುಂಡಾಗಿದ್ದು, ಅನೇಕ ಸೂಕ್ಷ್ಮ ಕೆತ್ತನೆಗಳಿಂದ ನೋಡಲು ತುಂಬಾ ಆಕರ್ಷಣೀಯವಾಗಿ ಕಾಣುತ್ತದೆ. ಚಿಹ್ನೆಗಳಿಲ್ಲದ ಅದು ಯಾವ ಯಕ್ಷ ಎಂದು ಗುರುತಿಸಲಾಗಿಲ್ಲ. ಅಲ್ಲಿನ ಸ್ಥಳೀಯರ ಹೇಳಿಕೆಯಂತೆ ಅವು ಭೂತಪ್ಪನ ವಿಗ್ರಹಗಳು. ಅಲ್ಲಿಗೆ ಹೋದರೆ ಅವು ಕಾಟವನ್ನು ಕೊಡುತ್ತವೆ ಎಂಬ ಇತ್ಯಾದಿ ಮೂಢನಂಬಿಕೆಗಳು ಇವೆ. ಇವು ಅಡಿಕೆತೋಟದ ಮಧ್ಯಭಾಗದಲ್ಲಿ ಮಣ್ಣಿನಲ್ಲಿ ಊನವಾಗುತ್ತಿವೆ. ಸುತ್ತಲೂ ಗಿಡಗಂಟೆಗಳಿರುವುದು ಕಂಡುಬರುತ್ತದೆ.



ಅದೇ ಗ್ರಾಮದಲ್ಲಿ ಸರಿ ಸುಮಾರು ೧೮–೨೦ ವರ್ಷಗಳ ಹಿಂದೆ ಸರ್ಕಾರಿ ಆಸ್ಪತ್ರೆ ಕಟ್ಟಡ ಕಟ್ಟಲು ಪಾಯ ತೆಗೆಯುವಾಗ ಒಂದೂವರೆ ಅಡಿ ಎತ್ತರದ ನಿಂತ ಭಂಗಿಯ ಇನ್ನೊಂದು ಪಾರ್ಶ್ವನಾಥ ವಿಗ್ರಹ ದೊರೆತಿದೆ. ಅದರ ಪೀಠಭಾಗದಲ್ಲಿ ಒಂದು ಸಾಲಿನ ಶಾಸನವಿದ್ದು ಅದರ ಅನುಸಾರ 'ಶ್ರೀ ಸೂರಪೀಠ ಗಣಪ . . . . . ಸಿದ್ಧಾಂತದೇವರು'. ವಿಗ್ರಹವು ಅಲ್ಲಿನ ರೆವೆನ್ಯೂ ಇನ್ಸಪೆಕ್ಟರ್‌ಗಳ ಕಛೇರಿಯಲ್ಲಿದ್ದು ಮುಕ್ಕಾಗಿದೆ. ಚನ್ನಗಿರಿ ತಾಲೂಕಿನ ಸಿದ್ದನಮಠ ಗ್ರಾಮದ ಶ್ರೀ ರಾಮೇಶ್ವರ ದೇವಾಲಯದ ಸಮೀಪ ಮನೆಯ ತಳಪಾಯ ತೆಗೆಯುವಾಗ ಮೂರು ಅಡಿ ಎತ್ತರದ ಸುತ್ತಲೂ ಮಕರ ತೋರಣವಿರುವ ವಿಹಂಗಮವಾಗಿ ನಿಂತ ಭಂಗಿಯಲ್ಲಿರುವ ಪಾರ್ಶ್ವನಾಥ ಸ್ವಾಮಿಯ ವಿಗ್ರಹ ದೊರೆತಿದೆ. ಅದರ ಸಮೀಪದಲ್ಲಿಯೇ ಆ ವಿಗ್ರಹಕ್ಕೆ ಹೊಂದುವ ಅದರದೇ ಆದ ಪಾಣಿಪೀಠವು ದೊರೆಯಿತು. ಆ ಪಾಣಿಪೀಠದ ಮೇಲೆ ಆ ವಿಗ್ರಹವನ್ನಿರಿಸಿ ಅದನ್ನು ಅಲ್ಲಿಯೇ ರಾಮೇಶ್ವರ ದೇವಾಲಯದಲ್ಲಿ ಸುಖನಾಸಿಯಲ್ಲಿಡಲಾಗಿದೆ. ಹಿಂದೆ ಇದು ಬಸದಿಯಾಗಿರುವ ಸಾಧ್ಯತೆ ಇದ್ದು ವಿಗ್ರಹವನ್ನು ಶಿವಾಲಯದಲ್ಲಿರಿಸಿ ಪಾರ್ಶ್ವನಾಥ



ಸ್ವಾಮಿಗೂ ವಿಭೂತಿ ಹಚ್ಚಿ, ನಿತ್ಯ ಅರ್ಪಣೆ, ಪೂಜೆ, ಅಭಿಷೇಕ ಮಾಡುತ್ತಾರೆ. ದೇವಸ್ಥಾನದ ಸಮೀಪದಲ್ಲಿ ಯಕ್ಷ–ಯಕ್ಷಿ ಮುಂತಾದ ಹಲವಾರು ಭಿನ್ನ ಭಿನ್ನ ವಿಗ್ರಹಗಳು ದೊರೆತಿದ್ದು ಅವನ್ನು ದೇವಾಲಯದ ಹಿಂಬದಿಯಲ್ಲಿ ಇಡಲಾಗಿದೆ.

ಚಿಕ್ಕಯರೇಹಳ್ಳಿಯು ಹೊನ್ನಳ್ಳಿಯ ಪಶ್ಚಿಮಕ್ಕೆ ಸುಮಾರು ೬ ಕಿ.ಮೀ. ದೂರದಲ್ಲಿದೆ. ಇಲ್ಲಿ ಜೈನಧರ್ಮೀಯರು ವಾಸವಾಗಿರುವ ಕುರುಹಗಳಿವೆ. ಇಲ್ಲಿ ಜೈನ ಬಸದಿಗಳಿದ್ದವೆನ್ನುವುದಕ್ಕೆ ಊರ ಪಕ್ಕದಲ್ಲಿರುವ ದಿಬ್ಬದ ಮೇಲಿನ ಕರಿಯಮ್ಮನ ಗುಡಿಯ ಬದಿಯ ತಿಪ್ಪೆಯಲ್ಲಿ ಜೈನಮೂರ್ತಿ ಹೊಂದಿದೆ. ಪದ್ಮಾಸನದ ಧ್ಯಾನ ಮುದ್ರೆಯಲ್ಲಿರುವ ಇದು ನಿರಾಲಂಕೃತವಾದ ಪ್ರಭಾಮಂಡಲವಿರುವ ಇದು ಏಕಶಿಲೆಯ ಕಪ್ಪು ಶಿಲ್ಪವಿದೆ. ಸಂಪೂರ್ಣ ನಿರ್ಲಕ್ಷಿಸಿದಂತೆ ಕಂಡುಬರುತ್ತದೆ. ಇಲ್ಲಿನ ರಾಮೇಶ್ವರ ದೇವಾಲಯದ ಹಿಂದೆ ದೊಡ್ಡ ದಿಣ್ಣೆಯ ಮೇಲೆ ನೆಡಲಾಗಿರುವ ಕಲ್ಲಿನ ಕಂಬದ ಮೇಲೆ ಜಿನ ಮೂರ್ತಿಯಂತೆ ಕಂಡುಬರುವ ಕೆತ್ತನೆಯು ಇದೆ.

ಬಳೇಶ್ವರವು ಹೊನ್ನಾಳಿಯಿಂದ ಉತ್ತರಕ್ಕೆ ೫ ಕಿ.ಮೀ. ದೂರದಲ್ಲಿರುವ ತುಂಗಭದ್ರಾ ನದಿಯ ದಡದಲ್ಲಿರುವ ಐತಿಹಾಸಿಕ ಮಹತ್ವದ ಸ್ಥಳ. ಇಲ್ಲಿ ಹೊಯ್ಸಳರ ಕಾಲದ ಅಮೋಘಶಿಲ್ಪ ಕಲೆಯಿಂದ ಕೂಡಿರುವ ತ್ರಿಕೂಟಾಚಲ ಶಿಲೆಯ ಬಳ್ಳೇಶ್ವರ ದೇಗುಲ ಮತ್ತು ಇಲ್ಲಿ ಶಾಸನವು ಆ ಗ್ರಾಮದ ಪ್ರಾಚೀನ ಇತಿಹಾಸವನ್ನು ಸಾದರಪಡಿಸುತ್ತದೆ. ಈ ಗ್ರಾಮದಲ್ಲಿ ಈಗಲೂ ಜೈನ ಮತ್ತು ವೀರಶೈವ ಹೆಚ್ಚಾಗಿದ್ದು ೨೦೦೧ ಮೇ ತಿಂಗಳಿನಲ್ಲಿ ಒಂದು ಜೈನ ಬಸದಿಯನ್ನು ನಿರ್ಮಿಸಲಾಗಿದ್ದು, ದಿಡಗೂರಿನ ಹೊಲದಲ್ಲಿ ಸಿಕ್ಕಂತಹ ಪ್ರಾಚೀನ ಜಿನಮೂರ್ತಿಯನ್ನು ಭವ್ಯ ದಿಗಂಬರ ಜಿನಮಂದಿರದಲ್ಲಿರಿಸಿ ಉದ್ಘಾಟಿಸಿ ಆರಾಧಿಸುತ್ತಿದ್ದಾರೆ.

ಜಿಲ್ಲೆಯ ಇನ್ನೂ ಅನೇಕ ಗ್ರಾಮಗಳಲ್ಲಿ ಪ್ರಾಚೀನ ತೀರ್ಥಂಕರರ ಮೂರ್ತಿಗಳು ಕಂಡುಬರುತ್ತವೆ. ಇವು ಜೈನಧರ್ಮದ ಸಾಂಸ್ಕೃತಿಕ ಪರಂಪರೆಯನ್ನು ಪ್ರತಿಬಿಂಬಿಸುತ್ತವೆ. ಕೆಲವು ಮೂರ್ತಿಶಿಲ್ಪಗಳನ್ನು ರಕ್ಷಿಸಿ ದೇವಾಲಯದ ಬಳಿ ಇರಿಸಿ ಪೂಜಾ ಕಾರ್ಯ ಕೈಗೊಂಡು ಮತ್ತೆ ಕೆಲವು ಅವು ಭೂತ–ಪ್ರೇತಗಳೆಂದು ಇನ್ನಿತರ ಮೂಢನಂಬಿಕೆಗಳಿವೆ. ಇನ್ನೂ ಕೆಲವು ವಿಗ್ರಹಗಳು ಊರ ಗ್ರಾಮಸ್ಥರಿಗೆ ಗೊತ್ತಿಲ್ಲದಿರುವುದು ಪ್ರಾಚ್ಯಾವಶೇಷಗಳ ಕಾಳಜಿಯ ಬಗ್ಗೆ ಜನತೆಗಿರುವ ನಿರ್ಲಕ್ಷತನವನ್ನು ತಿಳಿಸುತ್ತದೆ.

**ಆಕರ ಗ್ರಂಥಗಳು:**


೧. ದಾವಣಗೆರೆ ಇದು ನಮ್ಮ ಜಿಲ್ಲೆ, ಗಿರಿಜಾ ಟಿ., ನಿಹಾರಿಕಾ ಪ್ರಕಾಶನ, ದಾವಣಗೆರೆ, ೨೦೦೧

೨. ದಾವಣಗೆರೆ ಜಿಲ್ಲಾ ದರ್ಶಿನಿ, ಗುರು ಎಂ.ಪಿ., ಪಂಪ ಪ್ರಕಾಶನ, ದಾವಣಗೆರೆ, ೧೯೯೯

೩. ಹೊನ್ನೆ ನೆಲೆಗಳು, ಡಾ. ನಾ. ಕೊಟ್ರೇಶ ಉತ್ತಂಗಿ, ಸಹನಾದ್ರಿ ಪ್ರಕಾಶನ, ಹೊನ್ನಳ್ಳಿ, ೨೦೦೪.

೪. ಇತಿಹಾಸ ದರ್ಶನ, ಸಂಲೇಖನ ಬೆತೂರಿನ ಪ್ರಾಚಾವಶೇಷಗಳು, ಸಂತೇಬೆನ್ನೂರು ಸುಮತೀಂದ್ರ ನಾಡಿಗ್, ಕರ್ನಾಟಕ ಇತಿಹಾಸ ಅಕಾಡೆಮಿ, ಬೆಂಗಳೂರು, ೨೦೦೮

೫. ಇತಿಹಾಸ ದರ್ಶನ, ಚನ್ನಗಿರಿ ತಾಲೂಕಿನ ಜೈನವಿಗ್ರಹಗಳು, ಸಂತೇಬೆನ್ನೂರು ಸುಮತೀಂದ್ರ ನಾಡಿಗ್, ಕರ್ನಾಟಕ ಇತಿಹಾಸ ಅಕಾಡೆಮಿ, ಬೆಂಗಳೂರು, ೨೦೦೮

೬. ಕರ್ನಾಟಕ ಸಂಸ್ಕೃತಿ ಸಮೀಕ್ಷೆ, ತಿಪ್ಪೇರುದ್ರಸ್ವಾಮಿ, ಡಿ.ವಿ.ಕೆ. ಮೂರ್ತಿ ಪ್ರಕಾಶನ, ಮೈಸೂರು, ೨೦೧೧

೭. ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಚಿದಾನಂದ ಮೂರ್ತಿ, ಸ್ವಪ್ನ ಬುಕ್ ಹೌಸ್, ಬೆಂಗಳೂರು,

೮. ಕರ್ನಾಟಕ ಶಿಲ್ಪ ಸಂಸ್ಕೃತಿ, ಜಯದೇವಪ್ಪ ಜೈನಕೇರಿ, ಕರ್ನಾಟಕ ರಾಜ್ಯ ಪತ್ರಗಾರ ನಿರ್ದೇಶನಾಲಯ.

# ಸಮುದಾಯಗಳಲ್ಲಿ ಶಕುನ ಸಂಸ್ಕೃತಿ

ಪ್ರವೀಣ ಆರ್.

ಜನಪದರ ನಂಬಿಕೆ ಹಾಗೂ ಮೂಢನಂಬಿಕೆಗಳ ಭಾಗವಾಗಿಯೇ ಖಣಿ, ಶಕುನ, ಭವಿಷ್ಯ ಮುತಾದವು ರೂಪುಗೊಂಡಿವೆ. ಭವಿಷ್ಯ ಖಣಿ, ಕರ್ಮ, ಗ್ರಹ ನಕ್ಷತ್ರ ಇತ್ಯಾದಿ ಕಾರ್ಯಕಾರಣ ಸಂಬಂಧವನ್ನು ಹೇಳಲಾಗುತ್ತದೆ. ಹೀಗೆ ಹೇಳುವುದಕ್ಕೆ ಯಾವುದೇ ಖಚಿತ ಆಧಾರಗಳಿಲ್ಲ. ಜನಪದ ನಂಬಿಕೆಗಳು ಮತ್ತು ಅವುಗಳ ಆಚರಣೆಗಳನ್ನು ವಿಜ್ಞಾನಪೂರ್ವ ಕೇವಲ ಅರ್ಥಹೀನವೆಂದು ತಳ್ಳಿ ಹಾಕುವಂತಿಲ್ಲ. ಮಾನವನು ಮನೋಧರ್ಮದ ವಿಕಾಸವನ್ನೇ ತಿಳಿಯಬೇಕಾದರೆ ಶಕುನಗಳಂತಹ ಶಾಸ್ತ್ರವನ್ನು ಮನಶಾಸ್ತ್ರ, ಸಮಾಜಶಾಸ್ತ್ರ ಮುಂತಾದ ಶಾಸ್ತ್ರಗಳ ಹಿನ್ನೆಲೆಯಲ್ಲಿ ಅಧ್ಯಯನಿಸುವ ಅಗತ್ಯವಿದೆ.[೧]

ಖಣಿ, ಶಕುನ, ಭವಿಷ್ಯ, ಹಸ್ತಸಾಮುದ್ರಿಕ, ನಾಡಿಫಲ, ಗಿಣಿಶಾಸ್ತ್ರ, ಕವಡೆಶಾಸ್ತ್ರ, ಓಲೆಗರಿಶಾಸ್ತ್ರ, ಕಡ್ಡಿಶಾಸ್ತ್ರ, ಜಾತಕ ಮುಂತಾದವೆಲ್ಲ ಬಹುಮಟ್ಟಿಗೆ ಒಂದೇ ತರಹವೇ. ಯಾವುದಕ್ಕೂ ವೈಜ್ಞಾನಿಕ ತಳಹದಿಯಿಲ್ಲ. ಜಗತ್ತಿನ ಎಲ್ಲಾ ಪ್ರದೇಶಗಳಲ್ಲಿ, ಎಲ್ಲಾ ತರಹದ ಜನರಲ್ಲಿ ಇಂಥ ಸಂಗತಿಗಳ ಬಗ್ಗೆ ನಂಬಿಕೆ ಇದೆ. ಶಕುನವು ನಿಮಿತ್ತಗಳ ಮೂಲಕ ಶುಭಾಶುಭಗಳನ್ನು ತಿಳಿಸುವ ಶಾಸ್ತ್ರವೆಂದು ಅರ್ಥೈಸಲಾಗಿದೆ. ಜನಾಂಗಿಕವಾಗಿ, ಸಾಂದರ್ಭಿಕವಾಗಿ ಇಂತಹ ಶಕುನದ ಪ್ರಕ್ರಿಯೆಗಳಲ್ಲಿ ಭಿನ್ನತೆಗಳಿರುವುದು ಗಮನಾರ್ಹ. ಜಗತ್ತಿನ ಎಲ್ಲಾ ಪ್ರಾಚೀನ ಹಾಗೂ ಆರ್ವಾಚೀನ ಸಮಾಜಗಳಲ್ಲಿ ಶಕುನ ಕುರಿತ ನಂಬಿಕೆಗಳು ಆಚರಣೆಗಳು ಪ್ರಚಲಿತದಲ್ಲಿರುವುದನ್ನು ಕಾಣಬಹುದು. ಇಂತಹ ನಂಬಿಕೆಗಳು ಲೋಕದಾದ್ಯಂತ ಕಂಡುಬರುವುದು ವಿಶೇಷವಾಗಿದೆ. ಇವು ಮನುಷ್ಯನ ಮನಸ್ಸಿಗೆ ನೆಮ್ಮದಿಯನ್ನು ತರುವಂತಹ ಕೆಲಸವನ್ನು ಮಾಡುತ್ತಿದ್ದವು ಎಂಬುದು ಸತ್ಯವಾಗಿದೆ. ಸಮುದಾಯಗಳಲ್ಲಿ ಶಕುನ ಹೇಗೆ ಬಿಂಬಿತವಾಗಿದೆ ಎಂಬುದನ್ನು ಈ ಕೆಳಕಂಡಂತೆ ತಿಳಿಯಬಹುದು.

**ಇರುಳಿಗರು :**

ಇವರನ್ನು ಕಾಡು ಸೋಲಿಗರೆಂದು ಕರೆಯುವುದುಂಟು. ಹೆಚ್ಚಾಗಿ ಕಾಡು ಪ್ರದೇಶದಲ್ಲಿ ವಾಸಮಾಡುವ ಇರುಳುಗರಿಗೆ ಅವರದೇ ಆದ ಭಾಷೆ ಇದ್ದು, ಅದು ತಮಿಳಿಗೆ ಹತ್ತಿರವಾದುದಾಗಿದೆ. ಇರುಳರ ಮುಖಂಡನು ನಿರ್ದಿಷ್ಟ ದಿನದಂದು, ನಿರ್ದಿಷ್ಟ ವೇಶದೊಂದಿಗೆ ತಮಟೆ ನಾದೊಂದಿಗೆ ಶಕುನ ನುಡಿಯುತ್ತಾನೆ. ಇದು ಸಾಮಾನ್ಯವಾಗಿ ರಾತ್ರಿ ವೇಳೆಯಲ್ಲಿ ದೇವಸ್ಥಾನದಲ್ಲಿ ಮುಖ್ಯಸ್ಥನ ಮೈಯಲ್ಲಿ ದೇವರು ಬಂದು ನುಡಿಯುವ ಪ್ರಸಂಗವಿರುತ್ತದೆ. ಇರುಳರು ಬೆಂಗಳೂರು ಮತ್ತು ಮೈಸೂರು ಜಿಲ್ಲೆಗಳಲ್ಲಿ ಕೆಲವು ಪ್ರದೇಶಗಳಲ್ಲಿ ಕಾಣಿಸಿಕೊಳ್ಳುತ್ತಾರೆ. ಇದರೊಂದಿಗೆ ಭೌಗೋಳಿಕ ಪರಿಸರ ಉಡುಗೆ ತೊಡುಗೆ ಆಚರಣೆ ಸಂಪ್ರದಾಯಗಳನ್ನು ಈ ಶಕುನದ ಸಂದರ್ಭದಲ್ಲಿಯೂ ಕೂಡ ಅವರ ಸಂಸ್ಕೃತಿಯನ್ನು ಅರಿಯಲು ಸಹಾಯಕವಾಗುತ್ತದೆ.

**ಕಾಲಜ್ಞಾನಿಗಳು:**

ಕಾಲಜ್ಞಾನ ಎಂದರೆ ಮುಂದಾಗುವುದನ್ನು ಮೊದಲೆ ಹೇಳುವುದು. ಕಾಲಜ್ಞಾನ ಎನ್ನುವಲ್ಲಿ ಕಾಲ ಎನ್ನುವ ಪೂರ್ವಪದ, ಕಾಲ, ಸಮಯ, ಹೊತ್ತು, ವೇಳೆ, ಕಾಲಗಣನೆ ಎಂಬುದನ್ನು ಸೂಚಿಸಿದರೆ ಜ್ಞಾನ ಎನ್ನುವ ಉತ್ತರಪದವು ಅರಿವು, ತಿಳುವಳಿಕೆ ಎಂಬುದನ್ನು ಸೂಚಿಸುತ್ತದೆ. ಮುಂದೊದಗಬಹುದಾದ ವಿಪತ್ತುಗಳನ್ನು ಲೋಕದ ಜನತೆಗೆ ಸರಳ ಹಾಗೂ ಸುಲಭವಾಗಿ ತಿಳಿಸಿ, ಅವುಗಳಿಂದ ರಕ್ಷಿಸಕೊಳ್ಳಬೇಕಾದ ಉಪಾಯಗಳನ್ನು ಕಾಲಜ್ಞಾನ ಸಾಹಿತ್ಯ ತಿಳಿಸುತ್ತದೆ. ಕನ್ನಡದಲ್ಲಿ ಇದೊಂದು ಜನಸಮ್ಮುಖವಾದ ಸಾಹಿತ್ಯ ಪ್ರಕಾರವಾಗಿದೆ.[೨]

ಕಾಲಜ್ಞಾನವು ಮುಂದೊದಗುವ ಸಂಗತಿಗಳನ್ನು ವ್ಯಕ್ತಿಗತ ನೆಲೆಗಳಲ್ಲಿ ತಿಳಿಸುವ ಶಾಸ್ತ್ರವಾಗಿದ್ದು ಕಾಲಜ್ಞಾನವು ಲೋಕದ ಜನರಿಗೆಲ್ಲರಿಗೂ ಅನ್ವಯಿಸುವುದು. ಇದು ಗುಣಿಸುವ, ಕೂಡಿಸುವ, ಕಳೆಯುವ, ಗಣತೀಯ ಶಾಸ್ತ್ರವಲ್ಲ. ನಿಸರ್ಗದಲ್ಲಿನ ಚಲನ ವಲನಗಳನ್ನು ಅಂದರೆ ಗಾಳಿ, ಮೋಡ, ಮಳೆ, ಮಿಂಚು, ಗುಡುಗು, ಬಿಸಿಲು ಹಾಗೂ ಪ್ರಾಣಿಗಳ ಕ್ರಿಯೆ ಪ್ರತಿಕ್ರಿಯೆ ವಾತಾವರಣದಲ್ಲಿನ ವೈಪರಿತ್ಯಗಳು ಮುಂತಾದ ಸಂಗತಿಗಳನ್ನು ಸರಿಯಾದ ರೀತಿಯಲ್ಲಿ ಗ್ರಹಿಸಿ, ಅನುಭಾವಿಯೊಬ್ಬ ನುಡಿಯುವ ನುಡಿಗಟ್ಟುಗಳು ಗೊಂಚಲು. ಈ ಶಾಸ್ತ್ರಜ್ಞಾನಕ್ಕೆ ಲೋಕಜ್ಞಾನ ಪ್ರಮುಖವಾಗಿ ಬೇಕು. ಇದು ಕರಾರುವಕ್ಕಾದ ವಿಜ್ಞಾನವಲ್ಲ, ಶಾಸ್ತ್ರವೂ ಅಲ್ಲ, ಅನುಭಾವಿಗಳು, ಧಾರ್ಮಿಕ ಮಹಾಪುರುಷರು, ಕಾರಣಿಕರು ತಮ್ಮ ಲೋಕಾನುಭವದಿಂದ ನುಡಿದ ವಾಣಿಯೇ ಕಾಲಜ್ಞಾನ ಎಂದು ಕರೆಸಿಕೊಳ್ಳುತ್ತದೆ. ಅನ್ಯರ ಶ್ರದ್ಧೆ ವಿಶ್ವಾಸ ಇವರ ಜೀವಾಳವಾಗಿದೆ. ಕಾಲಗಣನೆಯಲ್ಲಿ ವಿಜ್ಞಾನಿ ಮತ್ತು ಅನುಭಾವಿಗಳ ರೀತಿ ಭಿನ್ನವಾದುದು. ಕಾಲವನ್ನು ಬಾಹ್ಯೇಂದ್ರಿಯ ಮೂಲಕ ಅರಿಯುವ ಅಖಂಡ ಜ್ಞಾನವನ್ನೇ ತ್ರಿಕಾಲ ಜ್ಞಾನವೆಂದೆ ಕರೆಯಲಾಗುತ್ತದೆ. ಪತಂಜಲಿಯಂತಹ ಯೋಗ ಮಾರ್ಗದಿಂದ ಇದನ್ನು ಅರಿಯಲು ಸಾಧ್ಯವೆಂದರೆ, ತಿಂತಿಣಿ ಮೌನೇಶ್ವರರಂತಹ ಸಂತರು ಅದನ್ನೆ ಅನುಭಾವ ಮೂಲದಿಂದ ಸಾಧಿಸಿ ತೋರಿಸಿದರು. ಹೀಗಾಗಿ ಸಂತನೊಬ್ಬನ ಅನುಭಾವದ ಅಮೃತತ್ವವೇ ಹೊರತು ಜೋತಿಷ್ಯವಲ್ಲ.[೩]

ಕಾಲಜ್ಞಾನದ ಮುಖ್ಯ ಕಾಳಜಿ ಕರ್ಮಕ್ಷಯವಾಗಿ, ಮನುಷ್ಯನು ಧರ್ಮವೂ ಉಳಿದು ನೀತಿ ನೆಲೆಗೊಳ್ಳಬಹುದಾಗಿದೆ. ಸವಾಜದಲ್ಲಿ ನೈತಿಕ ನೆಲೆಗಟ್ಟು ನಿರ್ಮಾಣವಾಗಬೇಕು. ನೀತಿಯೆನ್ನುವುದೇ ಕಾಲಜ್ಞಾನ ಸಾಹಿತ್ಯದ ಮುಖ್ಯತತ್ವ. ಬೆಡಗಿನ ರೂಪದಲ್ಲಿರುವುದು ಕಾಲಜ್ಞಾನ ಸಾಹಿತ್ಯದ ಮತ್ತೊಂದು ವಿಶೇಷ. ಪುರುಷ ನಿರ್ಮಿತವಾಗಿದೆ. ತಿಂತಿಣಿ ಮೌನೇಶ್ವರರು, ಕೋಡೆಕಲ್ಲು ಬಸವಣ್ಣನವರು, ಸಾಲೋಟಗಿ ಶಿವಯೋಗಿಗಳು ಕಾಲಜ್ಞಾನ ಸಾಹಿತ್ಯದ ಪ್ರಮುಖ ಹರಿಕಾರರು.

ಸಮುದಾಯಗಳಲ್ಲಿ ಗೋರವಯ್ಯನವರು, ಬಾಲಬಸವಣ್ಣನವರು, ಸಾರುವಯ್ಯರನವರ ಮೂಲಕ ಕಾಲಜ್ಞಾನ ಜನಪದ ಮಟ್ಟಕ್ಕಿಳಿದಿದೆ. ಅದರಲ್ಲೂ ಪ್ರಚಾರವಾಗಬಹುದಾದ ಮೈಲಾರಲಿಂಗ ಜಾತ್ರೆಯಲ್ಲಿ ಗೊರವಯ್ಯ ಹೇಳುವುದು ಕಾಲಜ್ಞಾನವಾಗಿದೆ. ಹಾಗೆಯೇ ಜನಪದರ ಕಾಲಜ್ಞಾನ ಪದಗಳು. ರುದ್ರಮುನಿಸ್ವಾಮಿ, ನೀಲಮ್ಮ ಮುಂತಾದವರ ಪದಗಳು ಜನಪದರಲ್ಲಿ ಬಳಕೆಯಾಗುತ್ತಿವೆ. ಈ ಕೆಳಗಿನದು ಕಲಿಯುಗದ ಕಾಲಜ್ಞಾನವಾಗಿದೆ.

ಮುಂದಿನ ಸಂರಚನೆ ಚೆನ್ನಾಗಿ ಹೇಳುವೆ ಕೇಳುಗರಲ್ಲಿ

**ಭೂಮಿ ಮೇಲಿನ ವೃಕ್ಷಗಳೆಲ್ಲವೂ ಮುರಿದಾವೂ ನೋಡಿರಣ್ಣಾ**
**ಸೀಮೆಗಳೆಲ್ಲವೂ ಹಾಳಾಗಿ ಹೋದವು ಕೇಳಿರಣ್ಣಾ**
**ಲೋಕಕ್ಕೆ ಮೀರಿದ ಚೆರಾಟರು ಬರುತ್ತಾರೆ ಕೇಳಿರಣ್ಣಾ**
**ಮಾರಾಟ ನಡೆಯಾದು ಹೋರಾಟವಾದಿತ್ತು ನೋಡಿರಣ್ಣ**[೪]

ಕಾಲಜ್ಞಾನವನ್ನು ಕುರಿತ ಇನ್ನೊಂದು ಜನಪದರ ಹಾಡು ಹೀಗಿದೆ:

**ಯತ್ತಗಿರಿಯ ಸುತ್ತ ಭೂತವೂ ಹೆಚ್ಯಾವೋ ಕೇಳಿರಣ್ಣಾ**
**ಪರವತ ಮಲ್ಲಯ್ಯಾ ಪಾರೆದು ಹೋದಾನು ಕೇಳಿರಣ್ಣಾ**
**ಊರಿಗೆ ಹೋದವರು ಊರಲ್ಲೇ ಸತ್ತಾರು**
**ನೀರಿಗೆ ಹೋದವರು ನೀರಲ್ಲೆ ಸತ್ತಾರು**
**ಆಕಾಶ ಒದರಿತು ಭೂಕಾಂತೆ ನಡೆಗ್ಯಾಳು**
**ಹಳ್ಳಿ ಪಟ್ಟಣಗಳ ಕೊಳ್ಳಿಲಿ ಸುಟ್ಟಾರು**
**ಗುಡಿ-ಗೋಪುರಗಳ ಸೊಡರೆದ್ದು ಸುಟ್ಟಿತು**
**ಅರಮನೆಯೆಲ್ಲವೂ ಬರಿಮನೆಯಾದವು**
**ಅರಸಿಯರೆಲ್ಲರು ಸೆರೆ ಸೂರಿಯಾದರು**
**ತಂಗೀಯ ಒಡನಾಟ ಸಂಗವ ಮಡ್ಯಾರೋ**[೫]

ಎಂದು ಮುಂತಾದ ಭಯಾನಕ ಸಂಗತಿಗಳನ್ನು ಸಾರಲಾಗುತ್ತದೆ. ಚನ್ನಬಸವಣ್ಣ ಹುಟ್ಟಿ ಬಂದು ಈ ಎಲ್ಲಾ ಕಾರ್ಯಗಳನ್ನು ಅಳಸಿ ಹಾಕಿ ಲೋಕೋದ್ದಾರಗೊಳಿಸುವನು ಎನ್ನುವುದರ ಮೂಲಕ ಮುಕ್ತಾಯಗೊಳ್ಳುತ್ತದೆ.

ಕಾಲಜ್ಞಾನ ರೀತಿಯಲ್ಲಿ ಬಾಲಬಸವ ಎಂಬ ಸಮೂದಾಯವು ಗ್ರಾಮೀಣ ಪ್ರದೇಶಗಳಲ್ಲಿ ಸಂಚರಿಸುತ್ತ, ಊರಿನ ಹೊರಗೆ ದ್ವಾರ ಬಾಗಿಲಿನಲ್ಲಿ ನಿಂತು, ಆ ವರ್ಷದ ಮಳೆ-ಬೆಳೆ, ಆಗು-ಹೋಗುಗಳನ್ನು ಹೇಳುತ್ತಾರೆ. ಇವರು ತಮ್ಮದೇ ವಿಶಿಷ್ಟವಾದ ವೇಶಭೂಷಣಗಳನ್ನು ಧರಿಸಿ, ಮೊದಲಿಗೆ **"ಕೇಳಿರಣ್ಣಾ ಗುರು ತಂದೆ, ಕೇಳಿರಣ್ಣ ಮತ್ತೆವೂ"** ಎಂದು ಪದ ಕಟ್ಟಿ ಹಾಡುತ್ತಾ ಕಾಲಜ್ಞಾನವನ್ನು ನುಡಿಯುತ್ತಾರೆ. ಇದು ಪ್ರಚಲಿತ ದಿನಮಾನಗಳಲ್ಲಿ ಗ್ರಾಮೀಣ ಪ್ರದೇಶಗಳಲ್ಲಿ ಕಂಡುಬರುತ್ತದೆ. ಕಾಲಜ್ಞಾನ ಸಾಹಿತ್ಯವನ್ನು ಸಾರುವಯ್ಯಗಳು ಸಂಜೆ ಹೊತ್ತು ಕೈಯಲ್ಲಿ ಕಂದೀಲು ಹಿಡಿದುಕೊಂಡು, ತಲೆ ಮೇಲೆ ಛತ್ರಿ ಎರಿಸಿಕೊಂಡು, ಓಣಿ ಓಣಿಗಳಲ್ಲಿ ಸಾರುತ್ತಾ ಬರುವರು. ಹಾದಿಗೆ ಕೌಲಿಚಣ್ಣ, ಕಾವಿ ಅಂಗಿ, ರೂಮಾಲು ಇವರ ವೇಷ. ಕಂದೀಲು ಜ್ಞಾನದ ಸಂಕೇತವಾದರೆ ಕೊಡೆ ತ್ರಿಕಾಲಜ್ಞಾನಿಗಳು ಎಂಬುವುದರ ಸಂಕೇತವಾಗಿದೆ.[೬]

ಒಟ್ಟಿನಲ್ಲಿ ಕಾಲಜ್ಞಾನ ಎನ್ನುವುದು ಲೋಕದ ಬದುಕಿಗೆ ಬೇಕಾದ ಎಚ್ಚರ ಮತ್ತು ನೈತಿಕ ಸಮಾಜದ ಒಂದರ ದರ್ಶನ ಪ್ರಜ್ಞೆಯುಳ್ಳದ್ದಾಗಿದೆ. ಇದು ನಿಸರ್ಗದಲ್ಲಾಗುವ ವೈಪರೀತ್ಯಗಳ ಆಧಾರದ ಅನುಭವದ ಮೇಲೆ ರೂಪಗೊಳ್ಳುವ ಸಂಗತಿಯಾಗಿದ್ದು, ಶಾಸ್ತ್ರ ಜ್ಞಾನಕ್ಕಿಂತ ನಿಸರ್ಗದ ಸೂಕ್ಷ್ಮಗ್ರಹಿಕೆಯಿಂದ ಹುಟ್ಟುವ ವಾಕ್‌ಸಿದ್ಧಿಯಾಗಿದೆ.

**ಕುರ್ರುಮಾಮಾ :**

ರಾಮಕೊಂಡಾಳಿ ಕುರುಮಾಮ ಎಂದು ವಿವಿಧ ಪ್ರದೇಶಗಳಲ್ಲಿ ಕರೆಸಿಕೊಳ್ಳುವ ಇವರು ಊರೂರು ಅಲೆದಾಡುತ್ತ ಭಿಕ್ಷೆ ಬೇಡುತ್ತ ಭವಿಷ್ಯ ಹೇಳುತ್ತ ಜೀವನ ಸಾಗಿಸುತ್ತಾರೆ. ಆಂಧ್ರಪ್ರದೇಶದ ಶ್ರೀಶೈಲ ಹಾಗೂ ಭದ್ರಾಚಲ ಪ್ರಾಂತ್ಯಗಳಿಂದ ಬಂದು ಕುರುಮಾಮಾ ಕನ್ನಡ ಚೆನ್ನಾಗಿ ಕಲಿತು, ಜನಪ್ರಿಯ ಭವಿಷ್ಯಗಾರರು ಅನಿಸಿಕೊಂಡಿದ್ದಾರೆ. ಭವಿಷ್ಯ ಹೇಳುವುದರೊಂದಿಗೆ ಇವರು ವೈದ್ಯ, ನಾಟಿವೈದ್ಯದಲ್ಲಿ ಸಿದ್ಧಹಸ್ತರು. ಇವರು ಸಂಚಾರಿ ಭವಿಷ್ಯಗಾರರು. ಹಸ್ತ ನೋಡಿ ಹೇಳುವುದು, ಮನುಷ್ಯನ ವರ್ತನೆ ನೋಡಿ ಹೇಳುವುದು ಇವರ ಮುಖ್ಯ ಕಸಬು.



ಕುರುಮಾಮಾಗಳು ಸಂಚಾರಿ ಶಾಸ್ತ್ರಗಾರರು. ವ್ಯಕ್ತಿ ಹೆಸರಿನ ಸಹಾಯದಿಂದ ಭವಿಷ್ಯ ನುಡಿಯುವುದು ಜೊತೆಗೆ ವೈದ್ಯರಾಗಿಯೂ ಜನರ ಆರೋಗ್ಯ ಸಮಸ್ಯೆ ನಿವಾರಣೆಯನ್ನು ಮಾಡುವುದರಲ್ಲಿ ಇವರ ಪಾತ್ರ ಮಹತ್ವದ್ದಾಗಿದ್ದು, ಆರೋಗ್ಯ ನಿವಾರಣೆಗೆ ಸಂಬಂಧಿಸಿದ ಪದ್ಯ ಈ ರೀತಿಯಿದೆ:

**ಮಂಡಿ ಬಾದಿಸಿ (ಬಾದೆಯನ್ನು)**
**ಕಿಲು ಹು ಭಾಧಿನಿ**
**ಮುಂಗೈ ಬಾಧಿನಿ**
**ತಲೆಲಬಾಧಿನಿ**
**ಮೂಗಿಲು ಪಡಿಸು (ಮುಕ್ಕು ಪಡಿಯ ತೆಲಗು ನೆಗಡಿ)**
**ನೆಗಡಿ ಕೆಮ್ಮೂಲು**
**ಏನಾದರೂ ಇರಲಿ**
**ಜೀವಸ್ಥಾನ ಜನ್ಮಸ್ಥಾನ**[೭]

**ಗಿಣಿಶಾಸ್ತ್ರ :**

ಮೊದಲೇ ಸಿದ್ದಪಡಿಸಿಕೊಂಡಿದ್ದ ದೇವಾನುದೇವತೆಗಳ ಚಿತ್ರಗಳನ್ನು, ವಿವಿಧ ಬೆರಳು ಸನ್ನೆಯಿಂದ ಗಿಣಿಯ ಮೂಲಕ ತೆಗೆಸಿ, ಅದರಲ್ಲಿ ಬರುವ ಚಿತ್ರ ಅಥವಾ ಸಂಗತಿಗಳ ಮೂಲಕ ಎದುರಿಗೆ ಕೂಳಿತವರಿಗೆ ಸದ್ಯ ಬಂದಿರುವ, ಮುಂದೆ ಬರುವ ಆಪತ್ತು ಹಾಗೂ ಅದಕ್ಕೆ ಪರಿಹಾರಗಳನ್ನು ಹೇಳುವುದೇ ಗಿಣಿಶಾಸ್ತ್ರವಾಗಿದೆ.[೮]

**ಗಣೆಯವರು :**

ಜುಂಜಪ್ಪನ ಭಕ್ತರಾದ ಗಣೆಯವರು ದೇವರು ಬಂದು ಭವಿಷ್ಯ ಹೇಳುತ್ತಾನೆಂದು ನಂಬುತ್ತಾರೆ. ಕೊಡಗಿನ ಜೋಯಿಪಾಟ್(ಜೋತಿಷ್ಯದ ಹಾಡು) ಜೋತಿಷ್ಯದ ಹಾಡಾಗಿದೆ. ದಕ್ಷಯಜ್ಞದಲ್ಲಿ ಸತಿ ದೇವಿ ಆಹುತಿಯಾದ ಸಿಟ್ಟಿನಲ್ಲಿ ಜಗದೀಶ್ವರ ಭೂಮಿಗೆ ಜಡೆಯನ್ನು ಬಡಿದಾಗ ವೀರಭದ್ರ ಹಾಗೂ ಇತರ ಗಣಂಗಳು ಹುಟ್ಟಿ ಹಾಡಿದ ಹಾಡೇ ಜೋಯಿಪಾಟ್ ಅಂದರೆ ಜೋತಿಷ್ಯದ ಹಾಡು.[೯]

**ಸುಡುಗಾಡು ಸಿದ್ದರು :**

ಕನ್ನಡದಲ್ಲಿ ಪ್ರಸಿದ್ದರಾಗಿರುವ ಶಾಸ್ತ್ರಕಾರರಲ್ಲಿ ಸುಡುಗಾಡು ಸಿದ್ದರು ಸೇರುತ್ತಾರೆ. ಇವರು ಸುಡುಗಾಡಿನಲ್ಲೆ ವಾಸಮಾಡುತ್ತಾರೆ. ಉತ್ತರ ಕರ್ನಾಟಕದಲ್ಲಿ ಕಾಣುವ ಇವರೂ ಈಗಲೂ ಯಕ್ಷಿಣಿ ವಿದ್ಯೆಯನ್ನು ಪ್ರದರ್ಶಿಸುವ ಶಕುನ ನುಡಿಯುತ್ತಾರೆ.

**ಸೋಣ ಜೋಗಿಗಳು :**

ದಕ್ಷಿಣ ಕನ್ನಡ ಜಿಲ್ಲೆಯ ಗ್ರಾಮೀಣ ಪ್ರದೇಶದಲ್ಲಿ ಇವರು ಕಾಣಿಸಿಕೊಳ್ಳುತ್ತಾರೆ. ತುಳು ಭಾಷೆಯಲ್ಲಿ ಸೋನ ಎಂದರೆ ಶ್ರಾವಣ. ಸೋಣಗ ಎಂದರೆ ಶಕುನ ಹೇಳುವವನೆಂಬ ಅರ್ಥವಿದೆ. ಇವರು ಡಪ್ಪು ವಾದ್ಯವನ್ನು ಹಿಡಿದು ಮನೆಮನೆಗೆ ಹೋಗಿ ಶಕುನ ಹೇಳುತ್ತಾರೆ.

ಮುಂಬರುವ ತೊಂದರೆಗಳನ್ನು ಹೇಳಿ ಅದಕ್ಕೆ ಪರಿಹಾರ ಸೂಚಿಸುವ ಸೋನ ಜೋಗಿಗಳ ಮೇಲೆ ಜನರಿಗೆ ತುಂಬ ನಂಬಿಕೆ.

**ಕೊರವಂಜಿ :**

ಕೊರವಂಜಿ ಜನಾಂಗವು ಅನೇಕ ಭಾಷೆ, ಉಪಭಾಷೆಗಳನ್ನು ಮಾತನಾಡುವ ಅಲೆಮಾರಿ ಬುಡಕಟ್ಟು ಜನಾಂಗವಾಗಿದೆ. ಪ್ರಾದೇಶಿಕವಾಗಿ ಇವರನ್ನು ಭಿನ್ನ ಭಿನ್ನ ಹೆಸರುಗಳಲ್ಲಿ ಗುರುತಿಸಲಾಗಿದೆ. ತೆಲಗು ದೇಶದಲ್ಲಿ ಯರಕುಲ ಅಥವಾ ಕೊರಚವಾಂಡು ಎಂದು ಕರೆಯಲಾಗುತ್ತದೆ. ಯರಕುಲವಾಡ್ಲೂ ಎಂದರೆ ಭವಿಷ್ಯ ಹೇಳುವವರು ಎಂದರ್ಥ. ಅಲ್ಲದೆ ಕುರುವಾಸ್ ಮತ್ತು ಯರೆಕಾನ್ ಎಂದು ಕರೆಯಲಾಗುತ್ತದೆ. ಕುರುಬರು ಎಂದರೆ ದಕ್ಷಿಣ ಭಾರತದಲ್ಲಿ ಅಲೆಮಾರಿ ಸಮುದಾಯದವರೆಂದು ಹೇಳಲಾಗುತ್ತದೆ. ಇವರು ಬುಟ್ಟಿ ಹೇಣೆಯುವರಿಂದ ಹಿಡಿದು ಭವಿಷ್ಯ ಹೇಳುವ ಮೂಲಕ ಜೀವನ ಸಾಗಿಸುತ್ತಾರೆ. ಭಾಷೆ ಹಾಗೆಯೇ ಭೌಗೋಳಿಕ ಹಿನ್ನೆಲೆಯಲ್ಲಿ ಕೊರವರಲ್ಲಿ ಹಲವಾರು ಗುಂಪು ಅಥವಾ ಪಂಗಡಗಳನ್ನು ವಿದ್ವಾಂಸರು ಗುರುತಿಸುತ್ತಾರೆ. ಪಟ್ಟಿಕಂಟ್ವಿ ಅಥವಾ ಗದ್ದೆಯವರು (ಭವಿಷ್ಯ ಹೇಳುವವರು ವಿಷಯ ಇನ್ನು ಭಿನ್ನವಾಗಿದೆ). ಒಂದು ಬುಟ್ಟಿ ಅಥವಾ ಮರವನ್ನು ಹಿಡಿದುಕೊಂಡು ಹಳ್ಳಿಗೆ ಹೊರಟ ಹೆಂಗಸರು ತಮ್ಮ ಕಸುಬಾದ ಹಚ್ಚೆ ಹೊಯ್ಯೂವುದು ಮತ್ತು ಭವಿಷ್ಯ ಹೇಳುವುದರಿಂದ ಕಾಳು-ಕಡಿ, ಹಣ ಸಂಪಾದಿಸುತ್ತಾರೆ. ಹಳೆ ಬಟ್ಟೆಗಳನ್ನು ಸರಿಪಡಿಸುತ್ತಾರೆ. ಹಳ್ಳಿಯ ಅದೃಷ್ಟಹೀನ ಹೆಂಗಸರು, ಸದಾ ಕಾಯಿಲೆ ಬೀಳುವರು, ಮಕ್ಕಳನ್ನು ಕಳೆದುಕೊಂಡವರು, ಬೀದಿಯಲ್ಲಿ ಹೋಗುವ ಪಟ್ಟಿಕುಟ್ಟಿ ಹೆಂಗಸನ್ನು ಮನೆಯ ಒಳಗೆ ಕರೆದು ಕೂಡಿಸಿ, ಸ್ವಲ್ಪ ದಾನ್ಯವನ್ನು ಬುಟ್ಟಿಗೆ ಸುರಿದು ತಮ್ಮ ಜೀವನದಲ್ಲಿ ಹಿಂದೆ ನಡೆದ ಮುಂದೆ ನಡೆಯಬಹುದಾದ ಘಟನೆಗಳನ್ನು ಹೇಳುವಂತೆ ಆಕೆಯನ್ನು ಕೇಳುವರು. ಮಾತಿನಲ್ಲಿ ಚತುರರಾದ ಈ ಹೆಂಗಸರು ಸೂಕ್ತ ಭಾಷೆಯಲ್ಲಿ ಅವರಿಗೆ ಉತ್ತಮ ಭವಿಷ್ಯವಿದೆ ಎಂದು ತಿಳಿಸಿ ಸಂತೋಷಪಡಿಸುತ್ತಾರೆ. ಒಳ್ಳೆಯ ಸುದ್ದಿಯನ್ನು ಹೇಳಿದಾಗ ಯಜಮಾನಿ ಬಹಳ ಬಹುಮಾನ ಕೊಡುವಳು ಎಂದು ಚಂದ್ರಶೇಖರ ಕಂಬಾರರು ಹೇಳಿದ್ದಾರೆಂದು ವೀರೇಶ ಬಡಿಗೇರರವರು ತತ್ವಕೊರವಂಜಿ ಕೃತಿಯಲ್ಲಿ ಉಲ್ಲೇಖಿಸಿದ್ದಾರೆ.[೧೦]

ಕೊರವಿ ಎಂಬ ಪರ್ಯಾಯ ನಾಮ ಕೊರವಂಜಿಗಳು, ಗೊಲ್ಲ ಜಾತಿಯ ಹೆಣ್ಣು ಮಕ್ಕಳು ಈಚಲು ಹುಲ್ಲುಗಳಿಂದ ಮಾಡಿದ ನೆಲವು, ಬಾರಿಗೆ ಮತ್ತು ಮಕ್ಕಳ ಆಟಿಕೆ ಮೊದಲಾದ ಕೈಗಾರಿಕೆ ವಸ್ತುಗಳನ್ನು ಮಾರುವುದು, ಕಣಿ ಹೇಳುವುದು ಇವರ ವೃತ್ತಿ ಎಂದು ಡಾ. ಎಂ.ಎಂ. ಕಲಬುರ್ಗಿ ಹೇಳಿದ್ದಾರೆಂದು, ವೀರೇಶ ಬಡಿಗೇರರವರು ತತ್ವಕೊರವಂಜಿ ಕೃತಿಯಲ್ಲಿ ಉಲ್ಲೇಖಿಸಿದ್ದಾರೆ.೧೧ ಕರ್ನಾಟಕ ಜಾನಪದಕೋಶದಲ್ಲಿ ಕೊರವಂಜಿ ಅಂದರೆ ಕಣಿ ಹೇಳುವ ಕೊರವರ ಹೆಂಗಸು. ಇವರು ಭವಿಷ್ಯವನ್ನು ಹಾಡಿನದಾಟಿಯಲ್ಲಿ ಹೇಳುತ್ತಾರೆ ಎಂಬಿತ್ಯಾದಿಯನ್ನು ನೀಡಲಾಗಿದೆ. ಕೊರವರ ಸ್ತ್ರೀಯು ಕೋರವಂಜಿಯಾಗಿ ಅಲೆದಾಡುವಳು. ಭೀಕ್ಷೆಯೊಂದಿಗೆ ಕಣಿ, ಶಕುನ ಕತೆಯನ್ನು ಕರಗತ ಮಾಡಿಕೊಂಡಿರುತ್ತಾಳೆ. ಇವಳು ಭೀಕ್ಷೆ ಬೇಡುವುದನ್ನು ಹಾಡಿನಂತಹ ಸ್ವರ ವಿನ್ಯಾಸದಲ್ಲಿ ಕೂಗಿ ಹೇಳುತ್ತಾಳೆ. ಅದೆ ದಾರಿಯಲ್ಲಿ ಕಣಿ ಹೇಳುವರು ಸಾಮನ್ಯವಾಗಿ ಹಳ್ಳಿಯ ಹೆಣ್ಣು ಮಕ್ಕಳು ಅದರ ಮನೋಗತವನ್ನು ಚಿಂತೆ ಆತಂಕಗಳನ್ನು ಅರ್ಥಮಾಡಿಕೊಂಡು



ಅವರವರಿಗೆ ತೃಪ್ತಿಯಾಗುವಂತೆ ಕಣಿ ಹೇಳಿ ಸೈ ಎನಿಸಿಕೊಳ್ಳುವ ಕೊರವಂಜಿಯ ಜಾಣ್ಮೆ ಅಗಾದವಾದುದು. ಇವಳು ಜನಪದ ಪ್ರಪಂಚದ ಮನೋವಿಜ್ಞಾನಿಯೇ ಸರಿ ಎಂದು ಹೇಳುತ್ತಾರೆ.[೧೨]

ಕೊರವಂಜಿಯಂತಹ ಪ್ರಾದೇಶಿಕ ಅಥವಾ ಸಾಮಾಜಿಕ ಸಂಬಂಧಗಳ ಅಧ್ಯಯನವು ಆ ಸಮುದಾಯದ ವೈವಿದ್ಯಮಯವಾದ ಉತ್ಕೃಷ್ಟ ಮತ್ತು ವ್ಯಕ್ತಿ ನಿಷ್ಠೆಯು ವಿಶಿಷ್ಟ ಅರಿವನ್ನು ಒದಗಿಸುತ್ತವೆ. ವೈವಿಧ್ಯಮಯವಾದ ಪ್ರಾದೇಶಿಕ ಬದುಕಿನ ಸ್ಥಿತಿಗಳನ್ನು, ಪ್ರವೃತ್ತಿಗಳನ್ನು, ಸಾಂದರ್ಭಿಕತೆಗಳನ್ನು, ಧ್ವನಿಗಳನ್ನು, ಅನುಭವಗಳನ್ನು ಮತ್ತು ವ್ಯಕ್ತಿ ವಿಶಿಷ್ಟತೆಗಳನ್ನು ಪ್ರತಿನಿಧಿಸುವ ಕೊರವಂಜಿ, ಭಾರತದ ಬಹುರೂಪಿ ಪ್ರಾದೇಶಿಕತೆಗಳನ್ನು ಅರ್ಥಮಾಡಿಕೊಳ್ಳುವಲ್ಲಿ ಉಂಟಾಗಿರುವ ಅಸಮತೋಲನವನ್ನು ಪರಿಹರಿಸಿಕೊಳ್ಳಲು ನೆರವಾಗಬಹುದು.

**ಬುಡು ಬುಡಿಕೆಯವರು:**

ಗ್ರಾಮ ಜೀವನದ ಜನಪ್ರಿಯ ಭವಿಷ್ಯಕಾರರಾಗಿದ್ದಾರೆ. ಇವರು ಮರಾಠಿ ಮೂಲದವರು. ಶ್ರೀಕೃಷ್ಣ ನುಡಿಸಿದಂತೆ ನುಡಿಯುತ್ತೇವೆ ಎಂದು ಹೇಳುವ ಬುಡುಬುಡಿಕೆಯವರ ಭವಿಷ್ಯದ ಬಗ್ಗೆ ಜನಪದರಿಗೆ ಅಪಾರ ನಂಬಿಕೆ. ಬುಡುಬುಡಿಕೆಯವರ ಹೇಳಿಕೆಗಳನ್ನು ಹಾಲಕ್ಕಿ ಶಕುನ ಎಂದು ಕರೆಯಲಾಗುತ್ತದೆ. ರಾತ್ರಿ ಅಥವಾ ಅಮವಾಸ್ಯೆ ರಾತ್ರಿ ಸ್ಮಶಾನದಲ್ಲಿ ಪಣ ಕಟ್ಟುತ್ತಾರೆ. ಅಲ್ಲಿ ಸಿಗುವ ಸೂಚನೆಯನ್ನು ಅನುಸರಿಸಿ, ಮೂರು ದಿನ ಮಧ್ಯ ರಾತ್ರಿಯಲ್ಲಿ "ಹಾಲಕ್ಕಿ ಶಕುನ ನುಡಿದೈತೆ ಜಯವಾಗುತೈತೆ ಶುಭವಾಗುತೈತೆ ಶುಭವಾಗುತೈತೆ ಜಯವಾಗುತೈತೆ" ಊರು ತುಂಬ ಹಾಲಕ್ಕಿ ಶಕುನ ಹಾಡುತ್ತ ಬುಡುಬುಡಿಕೆ ನುಡಿಸುತ್ತ ತಿರುಗುತ್ತಾರೆ. ಈ ಹೊತ್ತಿನಲ್ಲಿ ಊರಿಗೆ ಬರುವ ವಿಪತ್ತುಗಳು ಅದರ ಪರಿಹಾರದ ಕುರಿತು ನುಡಿಯುತ್ತಾರೆ.

ಈ ಮೇಲೆ ಚರ್ಚಿಸಿದ ಒಟ್ಟು ಪರಿಕಲ್ಪನೆಗಳು ಸ್ವರೂಪದಲ್ಲಿ ಭಿನ್ನವಾಗಿ ಕಂಡರೂ ಅವುಗಳ ತುಡಿತ ಇರುವುದು ಮನುಷ್ಯನ ಫಲ ಪ್ರಣಿತ ಗುಣಗಳನ್ನು ಪೋಷಿಸುವುದು ಹಾಗೂ ನಿರೀಕ್ಷೆಗಳನ್ನು ಪೂರೈಸುವದಷ್ಟೆ. ಈ ಕಾರಣದಿಂದಾಗಿಯೇ ಇವುಗಳಿಗೆ ಅಸ್ತಿತ್ವವಿದೆಯೇ ಹೊರತು, ಅವುಗಳಷ್ಟಕ್ಕೆ ಅವೇ ಸ್ವತಂತ್ರವೂ ಅಲ್ಲ. ಮಾನವಾತೀತ ಸಂಗತಿಗಳೂ ಅಲ್ಲ. ಸೃಜನಶೀಲ ಧನಾತ್ಮಕ ಚಿಂತನೆಯುಳ್ಳ ಮನುಷ್ಯನು ತನ್ನ ಭವಿಷ್ಯವನ್ನು ತನ್ನ ಸ್ವಯಂ ಆಂತರೀಕ ಅರಿವಿನಲ್ಲಿ ಕಂಡರೆ, ದುರ್ಬಲನು ಇಂಥ ಶಕುನದಂತಹ ಪರಾವಲಂಬಿ ನೆಲೆಗಳಲ್ಲಿ ಕಾಣಬಯಸುತ್ತಾನೆ. ಶಕುನಗಳು ದುರ್ಬಲಗೊಂಡ ಮನುಷ್ಯ ಅಥವಾ ಮನಸುಗಳಿಗೆ ವಿವಿಧ ಮಾಧ್ಯಮದ ಮೂಲಕ ಸಾಂತ್ವನ ಹೇಳುತ್ತ, ಅವರಲ್ಲಿ ಬದುಕಿನ ಬಗ್ಗೆ ಆಶೆ ಆಕಾಂಕ್ಷೆಗಳನ್ನು ಹುಟ್ಟಿಸುತ್ತವೆ. ಸಮುದಾಯ ಶಕುನಗಳ ಪ್ರಜ್ಞೆ ಇಂದಿನ ಆಧುನಿಕ ಜೋತಿಷ್ಯಗಳಂತೆ ಲಾಭದಾಸೆಯಿಂದ ಮನುಷ್ಯನನ್ನು ಹೆದರಿಸಿ, ಅವನ ಆತ್ಮಸ್ಥೈರ್ಯವನ್ನು ಕುಗ್ಗಿಸಿ, ಹಣ ಮಾಡುವ ಸ್ವರೂಪದಲ್ಲಿರಲಿಲ್ಲ ಎಂಬುದು ಮಹತ್ವದ ಸಂಗತಿಯಾಗಿದೆ.[೧೩]

**ಅಡಿಟಿಪ್ಪಣಿ**

೧. ವೀರೇಶ ಬಡಿಗೇರ, ೨೦೧೮, ತತ್ವಕೊರವಂಜಿ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ ಪುಟ-೮-೯

೨. ಅದೇ,ಪುಟ ೧೧–೧೩.

೩. ಅದೇ, ಪುಟ –೧೨

೪. ಮುರಿಗೆಪ್ಪ ಎ. (ಸಂ), ೨೦೧೧, ದಕ್ಷಿಣ ಭಾರತೀಯ ಜನಪದ ಕೋಶ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ ಪುಟ – ೯೪

೫. ಅದೇ, ಪುಟ–೧೭೫

೬. ವೀರೇಶ ಬಡಿಗೇರ, ಅದೇ,ಹಂಪಿ ಪುಟ–೧೨

೭. ಮುರಿಗೆಪ್ಪ, ಅದೇ,ಪುಟ ೯೪–೯೫

೮. ವೀರೇಶ ಬಡಿಗೇರ, ಅದೇ, ಪುಟ–೧೨

೯.ಅದೇ,ಪುಟ – ೧೪

೧೦. ಅದೇ, ಪುಟ – ೫,೬

೧೧.ಅದೇ, ಪುಟ – ೬

೧೨. ಅದೇ, ಪುಟ [illegible]೭

೧೩. ಅದೇ, ಪುಟ. ೧೫



# ಕರ್ನಾಟಕದ ಹರಿದಾಸ ಸಾಹಿತ್ಯ

**ಡಾ. ವಿದ್ಯಾ ರಾವ್**

ರಸಾನುಭವದ ಸುಂದರವಾದ ಭಾವನೆಗಳ ಅಭಿವ್ಯಕ್ತಿಯೇ ಸಾಹಿತ್ಯ. ಮಾನವನ ಸೌಂದರ್ಯಪ್ರಜ್ಞೆಯು ಭಾಷೆಯ ಮೂಲಕ ಸಾಹಿತ್ಯದಲ್ಲಿ ಅಭಿವ್ಯಕ್ತಗೊಂಡಿರುವುದನ್ನು ಕಾಲದಿಂದ ಕಾಲಕ್ಕೆ ರಚಿಸಲ್ಪಟ್ಟ ಸಾಹಿತ್ಯ ಕೃತಿಗಳ ಮೂಲಕ ತಿಳಿಯುತ್ತೇವೆ. ಇಂದು ನಾವು ಕಾಣುವ, ಆಡುವ ಭಾಷೆಗಿಂತ ವಿಭಿನ್ನವಾಗಿ, ಹಿಂದಿನ ಕಾಲದಲ್ಲಿ ಬಳಸುತ್ತಿದ್ದ ಭಾಷೆಯು ಗಂಭೀರವಾಗಿಯೂ, ಕಾವ್ಯಮಯವಾಗಿಯೂ ಇದ್ದಿತೆಂದು ಸ್ಪಷ್ಟವಾಗುತ್ತದೆ. ಜನ ಬೆಳೆದಂತೆ ಸಾಹಿತ್ಯವೂ ಬೆಳೆದು ಜನಪದ ಸಾಹಿತ್ಯ, ಕಾವ್ಯಮಯ ಸಾಹಿತ್ಯ, ಭಕ್ತಿ ಸಾಹಿತ್ಯ, ಬಂಡಾಯ ಸಾಹಿತ್ಯ ಎಂದೆಲ್ಲಾ ವಿಭಾಗಗಳಿಂದ ಅಂದಂದಿನ ಸಮಾಜವನ್ನು ಚಿತ್ರಿಸಲಾಗಿದೆ. ಹೀಗಾಗಿ ಯಾವುದೇ ಸಾಹಿತ್ಯವು, ಅಂದಿನ ಸಮಾಜವನ್ನು ಹಿಡಿದ ಕನ್ನಡಿಯಂತೆ ಪ್ರತಿಬಿಂಬಿಸುತ್ತದೆ. ಹೊಸ ತತ್ವ, ಹೊಸ ಧರ್ಮ ಇವುಗಳ ಪ್ರಸಾರಕ್ಕೆ ಹೊಸವಾಹಕವಾಗಿ ಜನಭಾಷೆ ತಲೆಯೆತ್ತುವುದು. ಹೀಗೆ ಜನಜೀವನದ ತಿದ್ದುಪಡಿಗೆ ಮತ್ತು ಮತಪ್ರಚಾರಕ್ಕೆ ಒಂದು ಸಾಧನವಾಗಿ, ಜನಭಾಷೆಯಲ್ಲಿ ಸಾಹಿತ್ಯವು ಕಣ್ದೆರೆಯುತ್ತದೆ. ಒಟ್ಟಿನಲ್ಲಿ ಬಾಹ್ಯ ಜೀವನದ ವ್ಯವಸ್ಥೆಯ ಗುರುತಾದ ನಾಗರೀಕತೆ, ಆಂತರಿಕ ಜೀವನದ ಗುರುತಾದ ಸಂಸ್ಕೃತಿ, ರಸಿಕತೆಗಳು, ಒಂದು ಮಟ್ಟಕ್ಕೆ ಬಂದಾಗ ಮಾತ್ರ ಸಾಹಿತ್ಯವು ಉದಯವಾಗುತ್ತದೆ ಮತ್ತು ಒಂದು ವಿಶಿಷ್ಟ ಪರಂಪರೆಯಾಗಿ ಮುನ್ನಡೆಯುತ್ತದೆ.

ಸಂಸ್ಕೃತ ಭಾಷೆಯ ನಂತರ ಕನ್ನಡವು ಪ್ರಾದೇಶಿಕ ಭಾಷೆಯಾಗಿ ಅನೇಕ ಶತಮಾನಗಳ ಹಿಂದೆಯೇ ತನ್ನ ಅಸ್ತಿತ್ವವನ್ನು ಹಲ್ಮಿಡಿ ಶಾಸನದ ಮೂಲಕ ಪ್ರಸ್ತುತ ಪಡಿಸಿದೆ. ಕ್ರಿ. ಶ. ೬ ಮತ್ತು ೭ನೆಯ ಶತಮಾನದಲ್ಲಿ ದೊರೆತ ಶಾಸನಗಳು ಅದರ ಕೊಂಡಿಯನ್ನು ಮುಂದುವರೆಸಿದ್ದು ಕಂಡುಬರುತ್ತದೆ. ಕ್ರಿ. ಶ. ೯ನೇ ಶತಮಾನದಲ್ಲಿ ರಚಿಸಲ್ಪಟ್ಟ ಆದಿಕವಿ ಪಂಪನ 'ಕವಿರಾಜಮಾರ್ಗ'ವು ಮೊತ್ತಮೊದಲ ಕಾವ್ಯಗ್ರಂಥವೆಂದು ಪರಿಗಣಿಸಲಾಗಿದೆ. ಸಂಸ್ಕೃತ ಕಾವ್ಯಗಳಿಂದ ಪ್ರಭಾವಗೊಂಡು, ಪ್ರೇರಣೆಗೊಂಡು, ಕನ್ನಡ ಕಾವ್ಯಗಳು ರಚಿಸಲ್ಪಟ್ಟವು. ಶಾಸ್ತ್ರೀಯ ಭಾಷೆಯೆಂದು ಕರೆಯಲ್ಪಡುವ ಸಂಸ್ಕೃತದ ಕಾವ್ಯಗಳು ಹೆಚ್ಚಾಗಿ ಧಾರ್ಮಿಕ ಹಿನ್ನೆಲೆಯನ್ನು ಹೊಂದಿದ್ದು, ಅವುಗಳನ್ನು ಅನುಸರಿಸಿ ರಚಿಸಲ್ಪಟ್ಟ ಗ್ರಂಥಗಳೂ ಕೂಡ ವೇದ, ಶಾಸ್ತ್ರ, ಪುರಾಣ, ಧರ್ಮ, ಮತಗಳನ್ನು ಆಧರಿಸಿ ರಚಿಸಲ್ಪಟ್ಟಿದ್ದು, ಇಂತಹ ಸಾಹಿತ್ಯವನ್ನು ಭಕ್ತಿ ಸಾಹಿತ್ಯವೆಂದು ಪರಿಗಣಿಸಲಾಗಿದೆ. ಕ್ರಿ.ಶ. ೧೨ನೆಯ ಶತಮಾನದವರೆಗಿನ ಕಾಲವನ್ನು ಜೈನ ಸಾಹಿತ್ಯವೆಂದೂ, ಕ್ರಿ.ಶ. ೧೨ ರಿಂದ ೧೫ನೆ ಶತಮಾನದವರೆಗಿನ ಕಾಲವನ್ನು ವೀರಶೈವ ಸಾಹಿತ್ಯವೆಂದೂ, ಕ್ರಿ.ಶ.೧೫ ರಿಂದ ೧೮ರವರೆಗಿನ ಕಾಲವನ್ನು ವೈಷ್ಣವ ಸಾಹಿತ್ಯದ ಕಾಲವೆಂದೂ ಪರಿಗಣಿಸಲಾಗಿದೆ. ಧರ್ಮ ಮತ್ತು ಮತಗಳು ಆ ಕಾಲದಲ್ಲಿ ರಚಿಸಲ್ಪಟ್ಟ ಸಾಹಿತ್ಯದ ಮೇಲೆ ಬೀರಿದ್ದು, ಸಮಾಜಕ್ಕೆ ಮತಪ್ರಚಾರವನ್ನು ಪ್ರಚುರಪಡಿಸಲು ಭಾಷೆಯನ್ನು ಬಳಸಿಕೊಳ್ಳಲಾಗಿದೆ. ಹೀಗೆ ಭಕ್ತಿಸಾಹಿತ್ಯವು ತನ್ನ ಪರಿಧಿಯನ್ನು ಹಿಗ್ಗಿಸುತ್ತಾ ಮುಂದುವರೆದಿರುವುದನ್ನು ಸಾಹಿತ್ಯದ ಇತಿಹಾಸದಲ್ಲಿ ಕಾಣುತ್ತೇವೆ.

ಆದಿಕವಿ ಪಂಪನಿಂದ, ರನ್ನ, ಪೊನ್ನ, ಜನ್ನ, ನಾಗಚಂದ್ರ, ಕರ್ಣಪಾರ್ಯ, ನೇಮಿಚಂದ್ರ, ಬಂಧುವರ್ಮ, ಅಗ್ಗಳದೇವ, ಮಹಾಬಲ, ದೇವರಸ ಮುಂತಾದ ಜೈನಕವಿಗಳೂ, ಕೊಂಡಗುಳಿ ಕೇಶಿರಾಜ, ಬಸವಣ್ಣ, ಹರಿಹರ, ರಾಘವಾಂಕ, ಭೀಮಕವಿ, ಪದ್ಮಣಾಂಕ, ಲಕ್ಕಣ ದಂಡೇಶ, ಚಾಮರಸ, ಚಂದ್ರಶೇಖರ ಕವಿ, ವಿರೂಪಾಕ್ಷ ಪಂಡಿತರಂತಹ ಸುಪ್ರಸಿದ್ಧ ವೀರಶೈವ ಕವಿಗಳೂ, ರುದ್ರಭಟ್ಟ, ನರಹರಿ, ಕನಕದಾಸರು, ಕುಮಾರವ್ಯಾಸ, ಗೋವಿಂದ ವೈದ್ಯ, ಹರಿದಾಸರುಗಳಂತಹ ವೈದಿಕ ಕವಿಗಳೂ ಕನ್ನಡ ಸಾಹಿತ್ಯಕ್ಕೆ ವಿವಿಧ ರೀತಿಯಲ್ಲಿ, ಶೈಲಿಯಲ್ಲಿ ಹೊಸ ಹೊಸಪ್ರಯೋಗಗಳಿಂದ ಕೃತಿಗಳನ್ನು ರಚಿಸಿದ್ದಾರೆ. ಇವರೆಲ್ಲರೂ ಸಾಹಿತ್ಯದ ವಿವಿಧ ಗುಣ, ಸ್ವರೂಪಗಳಲ್ಲಿ ಸಾಹಿತ್ಯ ಕೃಷಿಯನ್ನು ಮಾಡಿದ್ದಾರೆ. ಇವರ ಕೃತಿಗಳು, ಕಾವ್ಯಗಳಾಗಿ, ಗ್ರಂಥಗಳಾಗಿ, ಚಂಪೂಕಾವ್ಯಗಳಾಗಿ, ಗದ್ಯ, ಪದ್ಯ, ಷಟ್ಪದಿಗಳು, ರಗಳೆಗಳು, ಕೀರ್ತನೆಗಳು, ಮಂಡಿಗೆಗಳೆಂದು ಹೆಸರು ಪಡೆದುಕೊಂಡಿವೆ.

ನಮ್ಮ ಹಿಂದೂ ಧರ್ಮದ ಮೂಲತತ್ವಗಳನ್ನು ಭಕ್ತಿಸಾಹಿತ್ಯದ ಮೂಲಕ ಸಂಗೀತಮಯವಾಗಿ ಮನೆ-ಮನೆಯ ಜನಸಾಮಾನ್ಯರಿಗೆ ಉಣಿಸಿದ ಕೀರ್ತಿಯು, ಶಿವಶರಣರಿಗೂ ಮತ್ತು ಹರಿದಾಸರಿಗೂ ಸಲ್ಲುತ್ತದೆ. ಇಂತಹ ರಸದೌತಣವನ್ನು ಉಂಡವರಲ್ಲಿ ಭಾರತೀಯರಷ್ಟೇ ಅಲ್ಲದೆ ಅನೇಕ ವಿದೇಶೀಯರೂ ಕೂಡ ಈ ಭಕ್ತಿಸಾಹಿತ್ಯದ ರುಚಿಯನ್ನು ಸವಿದು ಪ್ರಶಂಸೆಗೈದಿದ್ದಾರೆ. ಹರಿದಾಸ ಸಾಹಿತ್ಯವು ವೇದ, ಉಪನಿಷತ್, ಪುರಾಣಗಳ ಸಾರ - ತತ್ವ, ಮೌಲ್ಯಗಳ ಪ್ರತಿಬಿಂಬ, ಮಾನಸಿಕ ಸ್ಥೈರ್ಯವನ್ನು ಕೊಡುವ ಗುಪ್ತಗಾಮಿನಿ, ರಸವನ್ನುಣಬಡಿಸುವ ಚೇತೋಹಾರಿ ರಸಗಂಗೆ. ಹೀಗೆಲ್ಲಾ ಏನೇ ಹೇಳಿದರೂ ಬರೀ ಉತ್ಪ್ರೇಕ್ಷೆಯ ಒಣಮಾತುಗಳೆನಿಸುತ್ತದೆ. ಆದರೆ ಒಂದೇ ಒಂದು ದಾಸರ ಪದವನ್ನು ಕೇಳಿದಾಗ ಆಗುವ ಆಹ್ಲಾದ, ರಸಾಸ್ವಾದನೆಯು ಅದಮ್ಯವಾದ ಅನುಭವವನ್ನು ಕೊಡುತ್ತದೆ.

ಹರಿದಾಸರು ಭಾಗವತ ಧರ್ಮದ ಅನುಯಾಯಿಗಳು. ತಮ್ಮ ಜೀವನದ ಅನುಭವಗಳನ್ನು ಲೋಕದೊಡನೆ ಹಂಚಿಕೊಳ್ಳುತ್ತಾ, ಸಮಾಜೋದ್ಧಾರದ ಜೊತೆಗೆ ಆತ್ಮೋದ್ಧಾರವನ್ನು ಮಾಡಿಕೊಂಡ ಲೋಕಸಂಚಾರಿಗಳು. ಸಮಾಜದೊಳಗೇ ಇದ್ದು, ಸಮಾಜದ ಓರೆ-ಕೋರೆ, ಅಂಕು-ಡೊಂಕುಗಳನ್ನು ಸರಳವಾದ ಭಾಷೆಯಲ್ಲಿ ಸುಲಭವಾಗಿ ಅರ್ಥೈಸುತ್ತಾ ಸಂಗೀತದ ಮೂಲಕ ತಿಳಿಹೇಳುತ್ತಾ, ಜೀವನದ ಮೌಲ್ಯಗಳನ್ನು, ನೀತಿಯನ್ನೂ, ಬೋಧಿಸಿದ ಸಮಾಜ ಸುಧಾರಕರು. ಮಧ್ವಮತವನ್ನು ಅನುಸರಿಸಿದ ಇವರು ಹರಿಸರ್ವೋತ್ತಮ-ವಾಯುಜೀವೋತ್ತಮ ತತ್ತ್ವವನ್ನು ಅಳವಡಿಸಿಕೊಂಡವರು. ಸಾಮಾನ್ಯ ನಾಗರೀಕರಿಗೆ ಧರ್ಮ, ಶಾಸ್ತ್ರಗಳು ಕೈಗೆಟುಕದ ಸಂದರ್ಭದಲ್ಲಿ, ಸಂಸ್ಕೃತ ಭೂಯಿಷ್ಠವಾದ ಸಾಹಿತ್ಯವನ್ನು ಕನ್ನಡಕ್ಕೆ ಅನುವಾದಿಸಿ, ಮನೆ-ಮನೆಗೂ ಮುಟ್ಟಿಸಿದ ಸಂವಾಹಕರು, ಹರಿದಾಸರು. ತಮ್ಮ ಸಮಸ್ತ ಸೊತ್ತನ್ನೂ ತೊರೆದು, ತಂಬೂರಿ-ಚಿಟಿರೆ, ಗೆಜ್ಜೆ-ಗೋಪಾಳ ಬುಟ್ಟಿ ಹಿಡಿದು, ಮಧುಕರ ವೃತ್ತಿಯನ್ನು ಅನುಸರಿಸಿ, ಜೀವನವನ್ನು ಧೈರ್ಯದಿಂದ ನಡೆಸಿದ ತ್ಯಾಗಮಯಿಗಳು ಇವರು. ಜೀವನದಲ್ಲಿ ಎದುರಾಗುವ ಕಷ್ಟನೋವುಗಳಿಗೆ ಪರಿಹಾರವೆಂಬಂತೆ, ಕೃತಿಗಳ ಮೂಲಕ ಸಾಂತ್ವನ ನೀಡುವ ಜಾಣ್ಮೆ ಹರಿದಾಸರದು. ತತ್ವ, ಧಾರ್ಮಿಕ ಮೌಲ್ಯ, ಮಾನವೀಯತೆಯ ಕಳಕಳಿಯನ್ನು ಹಿಡಿದೆತ್ತಿ ಮೆರೆಯುವ ದಾಸ ಸಾಹಿತ್ಯವು, ಸಾಹಿತ್ಯದ ಹಿನ್ನೆಲೆಯಲ್ಲಿ ನೋಡಿದಾಗ, ಅತ್ಯುತ್ತಮ ಮೌಲ್ಯಭರಿತ ಸಾಹಿತ್ಯವೆಂದೂ, ಸಂಗೀತದ ದೃಷ್ಟಿಯಲ್ಲಿ ನೋಡಿದಾಗ ರಾಗ-ತಾಳಗಳ



ಸಂಗಮವೆಂದೂ, ತತ್ತ್ವ-ಆಧ್ಯಾತ್ಮಗಳ ಹಿನ್ನೆಲೆಯಲ್ಲಿ ನೋಡಿದಾಗ ಜ್ಞಾನಭಂಡಾರವೆಂದೂ, ನೃತ್ಯದ ಹಿನ್ನೆಲೆಯಿಂದ ನೋಡಿದಾಗ ರಸಪೂರ್ಣವಾದ ಹೂರಣವೆಂದು ಅನ್ನಿಸದೆ ಇರಲಾರದು.

ಹರಿದಾಸ ಸಾಹಿತ್ಯ'ವೆಂದಾಗ ಹರಿಯಪಾರಮ್ಯತೆ. ಅವತಾರಗಳು, ಲೀಲೆಗಳು, ಮಹಿಮೆಗಳು, ಧರ್ಮ, ತತ್ವಗಳೆಂಬ ಎಲ್ಲಾ ಅಂಶಗಳಿಂದ ಕೂಡಿರುತ್ತದೆ. ಇವುಗಳಿಗೆ ಆಧಾರ ಗ್ರಂಥಗಳಾಗಿ ರಾಮಾಯಣ, ಮಹಾಭಾರತ, ಭಾಗವತ, ಹರಿವಂಶ ಮುಂತಾದ ಪುರಾಣಗ್ರಂಥಗಳೂ, ವೇದ-ಉಪನಿಷತ್ತುಗಳಂತಹ ಮೂಲ ಗ್ರಂಥಗಳ ಸಾರವನ್ನು ಸಂಸ್ಕೃತದಿಂದ, ಕನ್ನಡೀಕರಿಸಿದ ಪ್ರಯತ್ನವಾಗಿದೆ. ಸಾಹಿತ್ಯ ಮತ್ತು ಸಂಗೀತಕ್ಕೆ ಮಹತ್ತರವಾದ ಕೊಡುಗೆಗಳನ್ನು ಕೊಟ್ಟಿರುವ ಹರಿದಾಸರು, ತ್ರಿಪದಿ, ಚತುಷ್ಪದಿ, ಷಟ್ಪದಿ, ಸಾಂಗತ್ಯ, ದಂಡಕ, ಮುಂಡಿಗೆಗಳಂತಹ ಛಂದೋಬದ್ಧ ಸಾಹಿತ್ಯವನ್ನು ಒಂದೆಡೆ ರಚಿಸಿದ್ದರೆ, ಇನ್ನೊಂದೆಡೆ ಉಗಾಭೋಗ, ಸುಳಾದಿ, ವೃತ್ತನಾಮ, ಕೀರ್ತನೆಗಳಂತಹ ಸಂಗೀತಬದ್ಧವಾದ ರಚನೆಗಳನ್ನು ಸಮರ್ಥವಾಗಿ ಕೊಟ್ಟ ನಿಷ್ಣಾತರು.

ಕ್ರಿ.ಶ. ೧೪ನೇ ಶತಮಾನದಲ್ಲಿದ್ದ ಶ್ರೀ ಶ್ರೀಪಾದರಾಜರು ತಮ್ಮ ಎಳವೆಯಲ್ಲಿಯೇ ಸಂನ್ಯಾಸ ದೀಕ್ಷೆಯನ್ನು ಪಡೆದು, ಶ್ರೀರಂಗದಲ್ಲಿ ಉನ್ನತ ವ್ಯಾಸಂಗವನ್ನು ಮಾಡುತ್ತಿದ್ದಾಗ, ಅಲ್ಲಿನ ದೇವಾಲಯಗಳಲ್ಲಿ ಹೇಳುತ್ತಿದ್ದ, ತಮಿಳಿನ ಆಳ್ವಾರರ ತೇವಾರಂ ಪದಗಳನ್ನು ಕೇಳಿದ್ದರು. ಕರ್ನಾಟಕದಲ್ಲಿ ಆ ಕಾಲಕ್ಕಾಗಲೇ ತನ್ನ ಸ್ಥಾನವನ್ನು ಸುಸ್ಥಿರವಾಗಿಸಿಕೊಂಡಿದ್ದ ವಚನಸಾಹಿತ್ಯದ ಪ್ರಭಾವವನ್ನೂ ಮನಗಂಡಿದ್ದರು. ಅವರ ಈ ಯೋಚನೆಗಳಿಗೆ ಉತ್ತರವಾಗಿ, ಪೂಜಾಕಾಲದಲ್ಲಿ ತಾವೇ ಕನ್ನಡ ಪದ್ಯಗಳನ್ನು ರಚಿಸಿ ಪ್ರಯೋಗಿಸಿದರು. ಇದಕ್ಕಾಗಿ ಅವರು ಅನೇಕ ಲಕ್ಷಣ ಗ್ರಂಥಗಳನ್ನು ಅಧ್ಯಯನ ಮಾಡಿ, ಉಗಾಭೋಗ, ಸುಳಾದಿ, ವೃತ್ತನಾಮ, ದಂಡಕಗಳಂತಹ ಅನೇಕ ಸಂಗೀತದ ಪ್ರಾಕಾರಗಳಿಗೆ ಕಾರಣಕರ್ತರಾಗಿ, ಹರಿದಾಸ ಸಾಹಿತ್ಯದ ಹರಿಕಾರರಾದರು. ಅವರ ಶಿಷ್ಯರಾದ ಶ್ರೀ ವ್ಯಾಸತೀರ್ಥರಿಂದ 'ದಾಸಕೂಟ'ವೆಂಬ ಪಂಥವು ಪ್ರಾರಂಭವಾಯಿತು.

ಶ್ರೀ ವ್ಯಾಸರಾಜರು, ವಿಜಯನಗರದ ಮೂರು ತಲೆಮಾರಿನ ರಾಜರಿಗೆ ಧರ್ಮಗುರುಗಳಾಗಿ ಸೇವೆ ಸಲ್ಲಿಸಿದ್ದಲ್ಲದೆ, ಶ್ರೀ ಪುರಂದರದಾಸರಿಗೂ ಮತ್ತು ಶ್ರೀ ಕನಕದಾಸರಿಗೂ ದಾಸಕೂಟದ ದೀಕ್ಷೆಯನ್ನು ಕೊಟ್ಟರು. ಶ್ರೀ ಪುರಂದರದಾಸರ ಹೆಸರನ್ನು ಕೇಳದವರೇ ಇಲ್ಲವೆನ್ನಬಹುದು. 'ಕರ್ನಾಟಕ ಸಂಗೀತ ಪಿತಾಮಹ' ಎಂದು ಕರೆಯಲ್ಪಡುವ ಇವರು, ಕರ್ನಾಟಕ ಶಾಸ್ತ್ರೀಯ ಸಂಗೀತಕ್ಕೆ ಶಿಕ್ಷಣಪದ್ಧತಿಯನ್ನು ಅಳವಡಿಸಿಕೊಟ್ಟರು. ಹರಿದಾಸಪಂಥದ ಮುಂದಿನ ಪೀಳಿಗೆಯಲ್ಲಿ ಶ್ರೀ ಮಹಿಪತಿದಾಸರು, ಶ್ರೀ ಪ್ರಸನ್ನವೆಂಕಟದಾಸರು, ಶ್ರೀ ವಿಜಯದಾಸರು, ಶ್ರೀ ಜಗನ್ನಾಥದಾಸರು, ಶ್ರೀ ಮೊಹನದಾಸರೇ ಮೊದಲಾದ ದಾಸರುಗಳು ತಮ್ಮ ಕೀರ್ತನೆಗಳ ಮೂಲಕ ಮಹತ್ತರವಾದ ಕೊಡುಗೆಗಳನ್ನು ನೀಡಿದ್ದಾರೆ.

ವಾಸ್ತವದಲ್ಲಿ ದಾಸ ಸಾಹಿತ್ಯವು, ಜನರ ಮಧ್ಯ, ಜನರಿಂದ, ಜನರ ಮುಂದೆಯೇ ಹುಟ್ಟಿ ಬೆಳೆದ ಸಾಹಿತ್ಯ. ಯಾವುದೇ ಒಂದು ಕೇಂದ್ರೀಕೃತ ವ್ಯವಸ್ಥೆಯಲ್ಲಿ ಹುಟ್ಟಿದ್ದಲ್ಲ. ಮನೆ ಮನೆ, ಓಣಿ ಓಣಿಗಳಲ್ಲಿ ತಿರುಗಾಡುತ್ತಾ, ಹಾಡುತ್ತಾ, ಕುಣಿಯುತ್ತಾ ಸಾಗುವಾಗ ಕಂಡ ಲೋಕಾನುಭವಗಳು. ಭಾವ ತನ್ಮಯತೆಯಲ್ಲಿ ಮೂಡಿಬಂದ ಈ ಕೃತಿಗಳು

ಕವಿತೆಯ ಎಲ್ಲಾ ಕಾವ್ಯಾಂಶಗಳಿಂದ ತುಂಬಿ ನಿಂತವು. ಸಾಹಿತ್ಯ ಮತ್ತು ಸಂಗೀತದ ಸಾಮರಸ್ಯ ಪ್ರತೀಕವಾದ ಈ ರಚನೆಗಳು ಶುದ್ಧ ಭಾವಗೀತೆಗಳಾಗಿವೆ ಎಂಬುದನ್ನು ನಂತರದ ದಿನಗಳಲ್ಲಿ ವಿದ್ವಾಂಸರು ಗುರುತಿಸಿದ್ದಾರೆ. ದಾಸ ಸಾಹಿತ್ಯದ ಮುಖ್ಯ ತತ್ವ ಭಕ್ತಿ, ಮೂಲ ಸತ್ಯ ಭಗವಂತ. ದಾಸ ಶಬ್ದ ಹೇಳುವುದೇ, ಒಡೆಯ ಮತ್ತು ದಾಸನ ಸಂಬಂಧವನ್ನು. ಒಡೆಯನಿರದಿದ್ದರೆ ದಾಸ ಎಂಬ ಶಬ್ದಕ್ಕೆ ಅರ್ಥವೇ ಇಲ್ಲ. ಹಾಗೆ ಅವರು ಹೊರಟಾಗ ತಮ್ಮನ್ನಷ್ಟೇ ತೆರೆದುಕೊಳ್ಳಲಿಲ್ಲ, ಅದನ್ನು ಇಡೀ ಸಮುದಾಯಕ್ಕೇ ತೆರೆದಿಟ್ಟರು. ಅದುವೇ ಇಲ್ಲಿಯ ವಿಶೇಷ. ಹಾಗೆ ತೆರೆದಿಡುವಾಗ ಬದುಕೆಂದರೇನು? ಹೇಗೆ ಬದುಕಬೇಕು? ಎಂಬುದನ್ನು ತಿಳಿಸುತ್ತ ಹೋದರು.

ಸಾವಿರಕ್ಕೂ ಅಧಿಕವರ್ಷದ ಇತಿಹಾಸವಿರುವ ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ, ಜೈನಯುಗ, ವೀರಶೈವಯುಗ, ಬ್ರಾಹ್ಮಣಯುಗ ಎಂದು ಮೂರುಭಾಗಗಳನ್ನು ಮಾಡಿ, ಈ ಶೀರ್ಷಿಕಗಳು ಆಯಾ ವರ್ಗದ ಸಾಹಿತ್ಯವನ್ನು ಪ್ರತಿನಿಧಿಸುತ್ತವೆ ಎಂದು ಕನ್ನಡ ಸಾಹಿತ್ಯ ಚರಿತ್ರಕಾರರು ಹೇಳಿದರು. ಸಾಹಿತ್ಯದ ಅಭ್ಯಾಸಿಗಳನ್ನು ಹೊರತುಪಡಿಸಿ, ಈ ಸಾಹಿತ್ಯ ಆಯಾವರ್ಗದ ಗುರುಮನೆ, ಅರಮನೆಗಳಿಗೆ ಮಾತ್ರ ಸೀಮಿತವಾದವು. ಆದರೆ ದಾಸ ಸಾಹಿತ್ಯ ಒಂದು ವರ್ಗಕ್ಕೆ ಸೀಮಿತವಾಗದೆ, ಅದು ಎಲ್ಲ ವರ್ಗಗಳ ಅರಮನೆ, ಗುರುಮನೆ ಮತ್ತು ಜನಸಾಮಾನ್ಯರನ್ನು ಮುಟ್ಟಿ, ಎಲ್ಲ ಕಾಲದಲ್ಲಿಯೂ ಸ್ವೀಕೃತವಾಗಿರುವುದು ಅದರ ವಿಶೇಷವಾಗಿದೆ. ಹಿಂದುಳಿದವರು, ದಲಿತರಿಂದ ಹಿಡಿದು ಸಮಾಜದ ಅತ್ಯಂತ ಮುಂದುವರಿದ ಜನರ ಸಮುದಾಯಗಳಲ್ಲಿ, ಮಠ ಮಾನ್ಯಗಳಲ್ಲಿ, ಗುಡಿ ಗುಂಡಾರಗಳಲ್ಲಿ ದಾಸ ಸಾಹಿತ್ಯ ಸ್ವೀಕಾರವಾಗಿದೆ.

ಸಾಹಿತ್ಯದ ಬಹುಮುಖ್ಯ ಉದ್ದೇಶ, ಅದು ಜನಸಾಮಾನ್ಯರ ಮನಸ್ಸನ್ನು ಮುಟ್ಟಬೇಕು, ತಟ್ಟಬೇಕು. ದಾಸ ಸಾಹಿತ್ಯ ಜನರ ಮನಮುಟ್ಟುವಲ್ಲಿ ಯಶಸ್ವಿಯಾಗಿದೆ. ಅವರವರ ಅಸ್ಥಿತ್ವವನ್ನು, ಅವರವರ ನಂಬುಗೆಗಳನ್ನು, ಶ್ರದ್ಧೆಯನ್ನು ಉಳಿಸಿ, ಜನರ ಮನಸ್ಸನ್ನು ಧರ್ಮದಲ್ಲಿ ನಡೆಯುವಂತೆ ಮಾಡಿದ ಬಹುಪಾಲು ಶ್ರೇಯಸ್ಸು ದಾಸ ಸಾಹಿತ್ಯಕ್ಕೆ ಸಲ್ಲುತ್ತದೆ. ವಿಶೇಷವಾಗಿ ಅರ್ಥವಿಲ್ಲದ ಆಚಾರ ವಿಚಾರಗಳನ್ನು, ಅಂಧಾನುಕರಣೆಯನ್ನು ಖಂಡಿಸುತ್ತ, ಮುಕ್ತಿಗೆ ಸಾಧನೆಯಾಗಿ, ವಿಶೇಷವಾಗಿ ಸ್ತ್ರೀಯರಿಗೂ, ಹಿಂದುಳಿದ ಸಮುದಾಯಕ್ಕೂ, ಆಧ್ಯಾತ್ಮದ ದಾರಿಯನ್ನು ಒದಗಿಸಿ ಕೊಡುವಲ್ಲಿ ಮುಂದಾದದ್ದು, ದಾಸ ಸಾಹಿತ್ಯದ ಅದ್ಭುತ ಸಾಧನೆಯಾಗಿದೆ.

**ಗ್ರಂಥಋಣ;**

- ಹೆಜ್ಜೆ–ಗೆಜ್ಜೆ, ಸ್ವತಂತ್ರ ಲೇಖನ– ಡಾ. ವಿದ್ಯಾ ರಾವ್.
- ದಾಸ ಸಾಹಿತ್ಯ, ಸ್ವತಂತ್ರ ಲೇಖನ : ಧನಂಜಯ. ಪಿ. ಎಸ್. ಪುರವರ.



# ಸಮಾಜವಾದಿ ನೆಲೆಯ 'ಜಲ' ನಾಟಕ

ಮಂಜುನಾಥ ಬಿ. ಟಿ.

ಇಪ್ಪತ್ತನೆಯ ಶತಮಾನದ ಎಪ್ಪತ್ತು–ಎಂಭತ್ತರ ದಶಕದಿಂದೀಚೆಗೆ ಆಧುನಿಕ ಕನ್ನಡ ಸಾಹಿತ್ಯದಲ್ಲಿ ಐತಿಹಾಸಿಕ ಮಹತ್ವದ ದಲಿತ–ಬಂಡಾಯ ಸಾಹಿತ್ಯ ಚಳುವಳಿಯು ಕಾಣಿಸಿಕೊಂಡಿತು. ಮೂಲತ: ಬಂಡಾಯ ಎಂಬುದೊಂದು ಮನೋಧರ್ಮವಾಗಿದ್ದು ಸಾಮಾಜಿಕ ಪರಿಸರದಲ್ಲಿರುವ ವೈಷಮ್ಯ, ವೈರುಧ್ಯ ಮತ್ತು ಸಮಾನತೆಯ ಬಗೆಗಳನ್ನು ತಮ್ಮ ಗ್ರಹಿಕೆಯ ಒಳನೋಟಗಳಿಂದ ಅರ್ಥೈಸಿಕೊಂಡು ಪ್ರಶ್ನಿಸುವ ಆ ಮೂಲಕ ಆರೋಗ್ಯಕರವಾದ ಹೊಸ ಸಾಂಸ್ಕೃತಿಕ ಬದುಕನ್ನು ಕುರಿತು ಹಾರೈಸುವ ಧೃಡಚಿತ್ತದ ಕಾರ್ಯ ಚಟುವಟಿಕೆಗಳ ಹೆಮ್ಮೆಯ ಕ್ರಮವಾಗಿದೆ.  ಮುಖ್ಯವಾದ ಈ ಚಳುವಳಿಯ ಲೇಖಕರಲ್ಲಿ ಮ.ನ. ಜವರಯ್ಯನವರು ಒಬ್ಬರಾಗಿದ್ದು, ಅಂಬೇಡ್ಕರ್ ಜೀವನ ದೃಷ್ಟಿ ಹಾಗೂ ಸಮಗ್ರ ಚಿಂತನೆಗಳನ್ನು ತಮ್ಮ ಆಳವಾದ ಅಧ್ಯಯನದ ಮೂಲಕ ಕನ್ನಡದ ಓದುಗರಿಗೆ ಒದಗಿಸಿಕೊಟ್ಟಿರುವ ಮತ್ತು ದಲಿತ ವರ್ಗದ ಶರಣ–ಶರಣೆಯರನ್ನು ಒಳಗೊಂಡ ಸಮಗ್ರ ವಚನ ಸಾಹಿತ್ಯದ ಸಾರ ಸರ್ವಸ್ವವನ್ನು ಅತ್ಯಂತ ಸರಳವಾಗಿ ಕನ್ನಡ ಓದುಗರಿಗೆ ಒದಗಿಸಿದ ಅಪರೂಪದ ಲೇಖಕರಾಗಿದ್ದಾರೆ. ಇವರು ತಮ್ಮ ಮಾಗಿ, ಜಲ, ಯುಗಾಂತರ, ಕೇಳು ಜಗಮಾದಿಗ ಹೊಲೆಯ ಹಾಗೂ ತನ್ನ ಇನ್ನಿತರ ಸಾಹಿತ್ಯಕ ಕೊಡುಗೆಗಳ ಮೂಲಕ ಸಮಾಜಮುಖಿ ವಿಷಯಗಳನ್ನೊಳಗೊಂಡಂತಹ ಸಮಾಜೋದ್ಧಾರದ ನೆಲೆಯಲ್ಲಯೆ ಕೃತಿಗಳನ್ನು ರಚಿಸುರುತ್ತಾರೆ.

ಗೌತಮ ಬುದ್ಧನನ್ನು ಕುರಿತಂತೆ ಕನ್ನಡ ಸಾಹಿತ್ಯದಲ್ಲಿ ಸಾಕಷ್ಟು ಕೃತಿಗಳು ರಚಿತವಾಗಿದ್ದು ಗೌತಮನ ಬಾಲ್ಯ ಜೀವನ ಸಂಸಾರ ಸಂಸ್ಕಾರ ಸನ್ಯಾಸ ಸಂದೇಶ ಹೀಗೆ ಹಲವಾರು ವಿಷಯಗಳನ್ನು ಜೊತೆಗೆ ಆತನ ಸಮೀಪದ ಪಾತ್ರಗಳಾದ ಶುದ್ಧೋದನ ಯಶೋದರೆ, ರಾಹುಲ ಅಂಗುಲಿಮಾಲ, ಚನ್ನ ಮುಂತಾದವುಗಳೊಂದಿಗೆ ಬುದ್ಧನ ಚಿತ್ರಣ ಕುರಿತಂತೆ ಹಲವು ಮಹತ್ವದ ಕೃತಿಗಳು ಇತ್ತೀಚಿಗೆ ಬರೆಯಲ್ಪಟ್ಟಿವೆ. ಬಹುಮುಖ್ಯವಾಗಿ ಕುವೆಂಪುರವರ ಮಹಾರಾತ್ರಿ, ಬಿ. ಪುಟ್ಟಸ್ವಾಮಯ್ಯನವರ ಗೌತಮ ಬುದ್ಧ, ಶಿವರಾಮ ಕಾರಂತರ ಕಿಸಗೋತಮಿ, ಮ.ನ.ಜ. ರವರ  ಜಲ, ಜೆ.ಪಿ. ರಾಜರತ್ನಂರ ಬುದ್ಧನ ಕುರಿತ ಕೃತಿಗಳು ಪ್ರಮುಖವೆನಿಸುತ್ತವೆ. ಮ.ನ.ಜ. ರವರ ಜಲ ನಾಟಕ ಕೃತಿಯು ಹಳೆಯ ವಸ್ತುವನ್ನೆ ಆಧರಿಸಿದ್ದರೂ ನೂತನವೆಂಬಂತೆ ರಚನೆಗೊಂಡು ಅದ್ಭುತ ನಾಟಕವಾಗಿ ಪ್ರಯೋಗಗೊಂಡಿದೆ.  ಇಲ್ಲಿನ ಪ್ರಧಾನ ಪಾತ್ರ ಮತ್ತು ವಸ್ತುವಾಗಿ ಬುದ್ಧ ನಿರೂಪಿತಗೊಂಡಿದ್ದಾನೆ.  ಕುವೆಂಪು ಅವರ 'ಮಾಹಾರಾತ್ರಿ' ಸಿದ್ಧಾರ್ಥ ಬುದ್ಧನಾದ ಬಗೆಯನ್ನು ಅನನ್ಯವಾಗಿ ಚಿತ್ರಿಸುವ ಒಂದು ಸರಳ ಸುಂದರ ಸಣ್ಣನಾಟಕವಾಗಿದ್ದು ಸಿದ್ಧಾರ್ಥ ಅನಿಕೇತನವಾಗಿ ಬುದ್ಧನಾಗಿ ನಮಗೆ ನಿಲುಕದಷ್ಟು ಎತ್ತರಕ್ಕೆ ಬೆಳೆದು ಬಿಡುತ್ತಾನೆ. ಹಾಗೆಯೆ ಬಿ. ಪುಟ್ಟಸ್ವಾಮಯ್ಯರ 'ಗೌತಮಬುದ್ಧ' ಎಂಬ ಮಹತ್ವದ ಕೃತಿಯ ಐತಿಹಾಸಿಕ ದೃಷ್ಟಿಯಿಂದ ಮಹತ್ವದೆನಿಸುತ್ತದೆ. ಕಾರಂತರ ಜೆ.ಪಿ.ರಾಜರತ್ನಂರ ಕೃತಿಗಳಲ್ಲಿಯೂ ಬುದ್ಧ ಭಿನ್ನ ಭಿನ್ನ ನೆಲೆಗಳಲ್ಲಿ ಗುರುತಿಸಲ್ಪಡುತ್ತಾನೆ ಆದರೆ ಅವುಗಳಾಚೆಗಿನ ಸತ್ಯವನ್ನು ತೆರೆದು

ತೋರುವ ಧೈರ್ಯವನ್ನು ಮ.ನ. ಜ 'ಜಲ ನಾಟಕದಲ್ಲಿ ಮಾಡಿದ್ದಾರೆ. ಹಲವು ಶ್ರೇಷ್ಠಚಿಂತಕರು ಸೃಜನಶೀಲರು ಒಪ್ಪಿಕೊಂಡಿರುವುದನ್ನು ವಿರೋಧಿಸುವ ಧೈರ್ಯವಂತಿಕೆ ಬುದ್ಧನನ್ನು ಪರಿಪೂರ್ಣನ್ನಾಗಿಸುವ ನಡೆಯಲ್ಲಿನ ಒಂದು ಮಹತ್ವದ ಹೆಜ್ಜೆಯಾಗಿದೆ. ಬಹುಶ: ವಿಶ್ವಸಾಹಿತ್ಯದ ಸಂದರ್ಭದಲ್ಲಿ ಈ ಧೈರ್ಯವಂತಿಕೆ ಸೃಜನಸ್ಪರ್ಷದೊಂದಿಗೆ ಕನ್ನಡದಲ್ಲಿಯೇ ಮೊದಲ ಬಾರಿಗೆ ಈ ನಾಟಕದಲ್ಲಿ ಕಾಣಿಸಿಕೊಂಡಿದೆ.

ಅಂಬೇಡ್ಕರರು ಬುದ್ಧನನ್ನು ನೋಡಿದ ಬಗೆ ವಿಬಿನ್ನವಾದುದು. ಅಂಬೇಡ್ಕರ್ ಮತ್ತು ಬುದ್ಧರಿರ್ವರನ್ನು ಆಳವಾಗಿ ತಿಳಿದಿರುವ ಮ.ನ.ಜ.ರು ಅಂಬೇಡ್ಕರ್ ಮತ್ತು ಬುದ್ಧನ ಸಾಮಿಪ್ಯತೆಯನ್ನು ಹಾಗೂ ಬುದ್ಧನ ತತ್ವಗಳಿಗೆ ಅಂಬೇಡ್ಕರರು ಮಾರು ಹೋಗಿ ಬುದ್ಧತ್ವವನ್ನು ಕಂಡುಕೊಂಡ ಬಗೆಯನ್ನು ಸೂಕ್ಷ್ಮವಾಗಿ ಅರಿತು ಅಂಬೇಡ್ಕರ್ ಮತ್ತು ಬುದ್ಧನನ್ನು ಜಲ ನಾಟಕದಲ್ಲಿ ವಿಭಿನ್ನ ರೀತಿಯಲ್ಲಿ ತೋರಿಸಿದ್ದಾರೆ. ಇಲ್ಲಿನ ಬುದ್ಧನಲ್ಲಿ ಅಂಬೇಡ್ಕರರನ್ನು ಮನಗಾಣಬಹುದಾಗಿದೆ. ಬುದ್ಧನ ಕುರಿತು ಅಂಬೇಡ್ಕರರು ಅಶ್ವಘೋಷನ 'ಬುದ್ಧಚರಿತ'ವನ್ನು ಅಧಾರವಾಗಿಟ್ಟುಕೊಂಡು ರಚಿಸಿರುವ 'ಬುದ್ಧ ಮತ್ತು ಆತನ ದಮ್ಮ' ಕೃತಿ ಬುದ್ಧನ ಕುರಿತು ಭಾರತದಲ್ಲೇ ಮೊದಲ ಬಾರಿಗೆ ವೈಚಾರಿಕ ನೆಲೆಗಟ್ಟಿನಲ್ಲಿ ಹಾಗೂ ಸ್ಪಷ್ಟವಾಗಿ ತಿಳಿಸುವ ಮೊದಲ ಕೃತಿಯಂತಿದೆ. ಅಂಬೇಡ್ಕರ್‌ರವರ ದೃಷ್ಠಿಯಲ್ಲಿ ಭಾರತದ ಚರಿತ್ರೆ ಎಂದರೆ ಬೌದ್ಧ ಧರ್ಮ ಮತ್ತು ಬ್ರಾಹ್ಮಣ ಧರ್ಮಗಳ ನಡುವೆ ನಡೆದ ಸಂಘರ್ಷ. ಗೌತಮ ಬುದ್ಧ ಸನ್ಯಾಸಿಯಾಗಲು ಪ್ರಮುಖ ಕಾರಣವೆಂದರೆ – ಶಾಕ್ಯರಲ್ಲಿ ಸಂಘವೊಂದಿತ್ತು. ಇಪ್ಪತ್ತು ವರ್ಷ ತುಂಬಿದ ಶಾಕ್ಯ ಯುವಕರೆಲ್ಲ ಆ ಸಂಘಕ್ಕೆ ಕಡ್ಡಾಯವಾಗಿ ಸದಸ್ಯರಾಗಬೇಕಿತ್ತು. ಅದರಂತೆ ಸಿದ್ದಾರ್ಥನು ಆ ಸಂಘದ ಸದಸ್ಯನಾದನು. ತುಸು ಕಾಲಾನಂತರ ಶಾಕ್ಯರಾಜ್ಯದ ನೆರೆ ರಾಜ್ಯ ಕೊಲೀಯಾದ ನಡುವೆ ಹರಿಯುತ್ತಿದ್ದ ರೋಹಿಣಿ ನದಿ ನೀರಿನ ಹಂಚಿಕೆ ವಿಷಯದಲ್ಲಿ ಎರಡು ರಾಜ್ಯಗಳ ನಡುವೆ ಘರ್ಷಣೆಯಾಗುತ್ತದೆ. ಎರಡು ರಾಜ್ಯಗಳ ಜನರು ರೋಹಿಣಿ ನದಿ ನೀರನ್ನು ತಮ್ಮ ತಮ್ಮಲ್ಲೇ ಉಳಿಸಿಕೊಳ್ಳಲು ಯುದ್ದ ಮಾಡಲು ಮುಂದಾಗುತ್ತಾರೆ. ಈ ವಿಷಯ ಶಾಕ್ಯ ಸಂಘದ ಮುಂದೆ ಬರುತ್ತದೆ. ಶಾಕ್ಯ ಸಂಘದ ಸದಸ್ಯರು ಕೊಲೀಯಾದ ವಿರುದ್ದ ಯುದ್ಧ ಸಾರಲು ಮುಂದಾಗುತ್ತಾರೆ. ಸಿದ್ದಾರ್ಥ ಆ ಯುದ್ದವನ್ನು ವಿರೋದಿಸುತ್ತಾನೆ. ಸಂಘದ ತೀರ್ಪಿಗೆ ವಿರುದ್ದವಾಗಿ ನಿಂತ ಸಿದ್ದಾರ್ಥನಿಗೆ ಶಾಕ್ಯ ಸಂಘವು ಶಿಕ್ಷೆ ವಿಧಿಸಲು ಮುಂದಾಗಿ ಮೂರು ವಿವಿಧ ಶಿಕ್ಷೆಗಳನ್ನು ವಿಧಿಸುತ್ತದೆ. ಸೈನ್ಯ ಸೇರಿ ಎಲ್ಲರಂತೆ ಯುದ್ಧ ಮಾಡುವುದು. ಗಡಿಪಾರು ಇಲ್ಲವೆ ಬಹಿಷ್ಕಾರ ಹಾಗೂ ಜೀವಾವದಿ ಶಿಕ್ಷೆ ಅಥವಾ ಮರಣದಂಡನೆ ಇವುಗಳಲ್ಲಿ ಒಂದು ಶಿಕ್ಷೆಯನ್ನು ಆಯ್ದುಕೊಳ್ಳುವಂತೆ ಸೂಚಿಸುತ್ತದೆ. ಸಿದ್ದಾರ್ಥ ಈ ಮೂರು ಶಿಕ್ಷೆಗಳಲ್ಲಿ ಗಡಿಪಾರು ಶಿಕ್ಷೆಯನ್ನು ಒಪ್ಪಿಕೊಳ್ಳುತ್ತಾನೆ. ಆ ನಂತರ ಸಿದ್ದಾರ್ಥ ಸನ್ಯಾಸಿಯಾದನು ಎಂದು ಹೇಳುತ್ತಾ ಇತಿಹಾಸಕಾರರು ಮೂಲ ಕಥೆಯನ್ನು ಬಿಟ್ಟು ಕಟ್ಟುಕಥೆಯನ್ನು ಹೆಣೆದು ಇಡೀ ಚರಿತ್ರೆಯನ್ನೇ ತಿರುಚುವ ಪ್ರಯತ್ನ ಮಾಡಿದ್ದಾರೆ. ನಾನೊಬ್ಬ ಚರಿತ್ರಕಾರನಾಗಿ ಆಳವಾದ ಅಧ್ಯಯನ ಸಂಶೋಧನೆಯಿಂದ ಈ ವಿಷಯವನ್ನು ಶೃತಪಡಿಸಿದ್ದೇನೆ ಎಂದಿದ್ದಾರೆ. ಸಿದ್ದಾರ್ಥ ಗೌತಮನು ಒಬ್ಬ ರೋಗಿಯನ್ನು, ಒಬ್ಬ ಮುದುಕನನ್ನು, ಹಾಗೂ ಒಂದು ಹೆಣವನ್ನು ನೋಡಿ ಮಾನವ ಜನ್ಮದ ನಶ್ವರತೆಗೆ ಮರುಗಿ ತನ್ನ ಇಪ್ಪತೊಂದನೇ ವಯಸ್ಸಿಗೆ ಸನ್ಯಾಸಿಯಾದನೆಂದು ಜಗತ್ತಿನಾದ್ಯಾಂತ



ಪ್ರಚಾರ ಮಾಡಲಾಗಿದೆ ಹಾಗೂ ಎಲ್ಲರನ್ನೂ ನಂಬಿಸಲಾಗಿದೆ. ಆದರೆ ಇದನ್ನು ಒಪ್ಪದ ಡಾ. ಬಿ. ಆರ್. ಅಂಬೇಡ್ಕರರು "ಬುದ್ದನು ಒಬ್ಬ ಮೃತವ್ಯಕ್ತಿಯನ್ನು, ಒಬ್ಬ ರೋಗಿಯನ್ನು, ಮತ್ತೊಬ್ಬ ಮುದುಕನನ್ನು ನೋಡಿದ್ದರಿಂದಲೇ ಅವನಲ್ಲಿ ವೈರಾಗ್ಯ ಉಂಟಾಯಿತೆಂದು ಸಾಂಪ್ರದಾಯಿ ಚರಿತ್ರೆಯುದ್ದಕ್ಕೂ ಹೇಳಿಕೊಂಡು ಬರಲಾಗಿದೆ. ಆದರೆ ಅವನು ಸನ್ಯಾಸದೀಕ್ಷೆ ತೆಗೆದುಕೊಂಡು ಇಪ್ಪತೊಂದನೇ ವಯಸ್ಸಿನವರೆಗೂ ಸತ್ತವರನ್ನು ರೋಗಿಗಳನ್ನು ಮುದುಕರನ್ನು ನೋಡಿಯೇ ಇರಲಿಲ್ಲವೆನ್ನುವ ಈ ಚರಿತ್ರೆಯನ್ನು ನಂಬುವುದಾದರೂ ಹೇಗೆ ಎಂಬ ಮೂಲಭೂತ ಪ್ರಶ್ನೆಯಿತ್ತಿದ್ದಾರೆ. ಅಷ್ಟಲ್ಲದೆ ತಮ್ಮ "ಬುದ್ಧ ಮತ್ತು ಆತನ ಧಮ್ಮ " ಎಂಬ ಮಹಾಕೃತಿಯಲ್ಲಿ ಬಾಬಾ ಸಾಹೇಬರು ಸಿದ್ದಾರ್ಥ ಗೌತಮನ ವೈರಾಗ್ಯಕ್ಕೆ ಶಾಕ್ಯ ಮತ್ತು ಕೂಲಿಯಾ ರಾಜ್ಯಗಳ ನಡುವಿನ ರೋಹಿಣಿ ನದಿ ನೀರಿನ ವಿವಾದದ ಹಿಂದಿದ್ದ ಅಂದಿನ ಬ್ರಾಹ್ಮಣ ಮತೀಯ ಶಕ್ತಿಗಳ ಪಿತೂರಿಯ ಒಳಸುಳಿಗಳನ್ನು ಸಹ ಅವರು ನೀಡಿದ್ದಾರೆ. ಇದನ್ನು ಆಧಾರವಾಗಿಟ್ಟುಕೊಂಡು ಮ.ನ.ಜ. ರವರು 'ಜಲ' ಎಂಬ ಮಹತ್ವದ ನಾಟಕವನ್ನು ರಚಿಸಿದ್ದಾರೆ.

ಮೇಳಗೀತೆಯಿಂದ ಪ್ರಾರಂಭವಾಗುವ ನಾಟಕವು ಆ ಗೀತೆಯಲ್ಲಿಯೇ ಸಮಾಜದ ಕೊಳೆತೊಳೆಯುವ, ಸಿದ್ದಾರ್ಥ-ಬುದ್ದನಾಗುವ, ಪರಿಪೂರ್ಣ ವ್ಯಕ್ತಿತ್ವದ ನಿರೂಪಣೆಯನ್ನು ಮಾಡಲಾಗಿದೆ. ನಾಟಕವು ನಾಲ್ಕು ಅಂಕಗಳನ್ನು ಹೊಂದಿದ್ದು ಒಟ್ಟು ಇಪ್ಪತ್ತು ದೃಶ್ಯಗಳಿಂದ ಕೊಡಿದ್ದು ಹೊಸತನದೊಂದಿಗೆ ರೂಪಗೊಂಡಿದೆ. ಸಮಾಜದಲ್ಲಿನ ಜಾತಿ, ಮೇಲು-ಕೀಳು ಕೂಲಿಕಾರ್ಮಿಕ-ಆಳುವ ವರ್ಗ, ಶೋಷಣೆ, ಪ್ರಾಣಿ-ಪಕ್ಷಿ ಮಾನುಷವಾದ ಹಿಂಸೆ, ಲಾಲಾಸೆ, ಲಂಪಟತನ, ನದಿನೀರಿನ ಕುರಿತ ಜಲವಿವಾದ ಅತಿಮಾನುಷವಾದ ನಡವಳಿಕೆ ಇತ್ಯಾದಿ ಸ್ವೀಕಾರಾರ್ಹವಲ್ಲದ ತಮೋಗುಣಗಳನ್ನು ಪ್ರತಿಭಟಿಸುವ ಚಿತ್ರಣಗಳನ್ನು ನಾಟಕಕಾರ ಅತ್ಯಂತ ಸೊಗಸಾಗಿ ಕಟ್ಟಿಕೊಟ್ಟಿದ್ದಾರೆ. ಸಮಾಜದಲ್ಲಿ ಜಾತಿ ವ್ಯವಸ್ಥೆ ಸಲ್ಲದು, ಸಮಾಜದಲ್ಲಿ ಬದುಕುವ ಹಕ್ಕೂ ಎಲ್ಲರಿಗೂ ಇದೆ. ಮನುಷ್ಯ ಪ್ರಕೃತಿಯ ಮೇಲೆ ಹಿಡಿತ ಸಾಧಿಸಲು ಸಾಧ್ಯವಿಲ್ಲ, ಎಲ್ಲವನ್ನು ಎಲ್ಲರೂ ಹೊಂದುವ, ಪಡೆಯುವ ಮೂಲಕ ಸರ್ವಸಮಾನ ಬದುಕನ್ನು ಅನುಭವಿಸಬಹುದು ಎಂಬ ಸಂದೇಶವನ್ನು 'ಜಲ' ನಾಟಕದಲ್ಲಿ ಗೌತಮ ಬುದ್ದನ ಪಾತ್ರದ ಮುಖೇನ ನೀಡುವ ಕೆಲಸವನ್ನು ಮಾಡಿದ್ದಾರೆ.

ದೊರೆ ಶುದ್ಧೋದನನ ಪ್ರಜಾಪ್ರಭುತ್ವ ಮಾದರಿಯ ಆಳ್ವಿಕೆ ಶಾಕ್ಯ ಸಾಮ್ರಾಜ್ಯದ ಬ್ರಾಹ್ಮಣ ಮಹಾಮಂತ್ರಿ ಉದಯಿನ್, ಬ್ರಾಹ್ಮಣ ಆಡಳಿತಾಧಿಕಾರಿ ನೀತಿಚಂದ್ರ ಮತ್ತು ಕ್ಷತ್ರಿಯನಾದ ಹಾಗೂ ಸೇನಾಪತಿಯಾದ ಯೋಧನೇತ – ಇವರುಗಳಿಗೆ ಸ್ವಲ್ಪವೂ ಹಿಡಿಸುವುದಿಲ್ಲ, ಅಷ್ಟೆ ಅಲ್ಲ ಸರ್ವಜಾತಿಗಳನ್ನು ಸಮಾನವಾಗಿ ಕಾಣುವ, ವೇದ-ಶಾಸ್ತ್ರಪುರಾಣಗಳ ಪೊಳ್ಳುತನವನ್ನು ಬಯಲು ಮಾಡುವ ಸಿದ್ದಾರ್ಥ ಗೌತಮನ ಪ್ರಜಾಪ್ರಭುತ್ವ ಮಾದರಿ ಸರ್ವರು ಸಮಾನರು ಎನ್ನುವ ದೃಷ್ಟಿಕೋನ ಎಲ್ಲರ ಮೆಚ್ಚುಗೆಗೆ ಪಾತ್ರವಾಗುತ್ತದೆ. ನಾಟಕದುದ್ದಕ್ಕೂ ಕಂಡು ಬರುವ ಈ ಅಂಶವು ಸಾಮಾಜಿಕ ನೆಲೆಯಲ್ಲಿ ಅತ್ಯಂತ ಮುಖ್ಯವಾದುದು ಎನಿಸುತ್ತದೆ.

ಭೂಮಿ, ಜಲ, ಕೃಷಿ ಸಂಬಂಧಿತ ವಿಷಯಗಳನ್ನು ಸಾಮಾಜಿಕವಾದ ನೆಲೆಯಲ್ಲಿ ನೋಡುವ ನಾಟಕಕಾರ ನಾಯಕನಿಗೆ ಸಂವಾದಿಯಾಗಿ ರೈತರು ಕಾರ್ಮಿಕರು ಹಾಗೂ ಅವರು ಹಾಡುವ ಹಾಡುಗಳನ್ನು ನಾಟಕದಲ್ಲಿ ಬಳಸಿಕೊಂಡು ಸಾಮಾಜಿಕ ನ್ಯಾಯದ

ಪರಿಕಲ್ಪನೆಗಳನ್ನು ಮನಮುಟ್ಟುವಂತೆ ಚಿತ್ರಿಸಿದ್ದಾರೆ, "ಮಾನವನು ಮರೆತ ಮಾನವಗೆ, ಮಾನವತೆಯ ಮಾರ್ಗ ತೋರಿದ, ಮಾನವೋತ್ತಮನ ಕಥೆಯಿದೆ" ಎನ್ನುವ ಮೇಳದವರು ಹಾಡಿಕೊಳ್ಳುವ ಸಾಲುಗಳು ಸಾಮಾಜಿಕ ಸಮಾನತೆಯ, ಬುದ್ಧನ ವ್ಯಕ್ತಿತ್ವದ ಬಿಂಬದಂತೆ ಕಾಣುತ್ತವೆ.

ಶಾಕ್ಯ ಸಾಮ್ರಾಜ್ಯದಲ್ಲುಂಟಾದ ಕಳವಳಕಾರಿ ಅಘಾತಕಾರಿ ಅಂಶಗಳಿಗೆ ಪ್ರತಿಭಟನೆಯಾಗಿ ಮೇಳದವರು ಹಾಡಿಕೊಳ್ಳುವ. "ಕಾಲಕಾಲಕೂ ನಡೆಯದೆಂದು, ಅರಿವು ಕೊಲುವುದು ಆಗದೆಂದು, ಯಾರಿಗೂ ಕಾಯದೆ ಬಂದೇ ಬರಲಿದೆ. ಕುಟಿಲಕೋಟಿಯ ತುಳಿದು ಹಿಂದೆ" ಎನ್ನುವ ಸಾಲುಗಳು ಹೊಸ ಸಮಾಜವನ್ನು ಕಟ್ಟುವ, ಶೋಷಣೆಯನ್ನು ಮೆಟ್ಟುವ ಪ್ರತಿರೋಧದ ಮಾತುಗಳಂತೆ ಕಂಡು ಬರುತ್ತದೆ, ಸಿದ್ದಾರ್ಥ ಗೌತಮನನ್ನು ಹೆಚ್ಚಾಗಿ ಆರಾಧಿಸುವ ಕೊಂಡಾಡುವ, ನಾಯಕನನ್ನಾಗಿ ಒಪ್ಪಿಕೊಳ್ಳುವ, ರೈತ, ಕಾರ್ಮಿಕ, ಚಂಡಾಲ ಕೆಳದರ್ಜೆಯ ಕೆಲಸಮಾಡುವ ಇನ್ನಿತರರು ಆತನ ಮುಖೇನವೇ ಸಮಾನತೆಯ ಬೆಳಕಿನತ್ತ ಸಾಗುವ ಹಂಬಲವನ್ನು ವ್ಯಕ್ತಪಡಿಸಿ ಹೊರಜಗತ್ತಿನ ಆಶಾಕಿರಣವೆನ್ನುವಂತೆ ಕಾಣುತ್ತಾರೆ. ಸಮಾಜದ ಉದ್ಧಾರಕ್ಕಾಗಿಯೆ ಶಾಕ್ಯಸಂಘದ ಪ್ರಮಾಣವನ್ನು ಸ್ವೀಕರಿಸುವ ಸಿದ್ದಾರ್ಥ ಗೌತಮನು ಎಲ್ಲ ವರ್ಗಗಳ ಜನರಿಗೂ ತಲುಪಬೇಕು ಎಂಬ ಇಂಗಿತವನ್ನು ವ್ಯಕ್ತಪಡಿಸುತ್ತಾನೆ. ನೆಲ, ಜಲ, ಜೀವ ರಕ್ಷಣೆಗೆ ತಾನು ಸದಾಸಿದ್ದ ಎಂಬುದನ್ನು ವಿರೋಧಿಗಳಿಗೆ ಮನವರಿಕೆಯಾಗುವಂತೆ ತಿಳಿಸುತ್ತಾನೆ.

ನಾಟಕದಲ್ಲಿ ಕಂಡುಬರುವ ಮತ್ತೊಂದು ಸಮಾಜಮುಖಿಯಾದ ಪ್ರಮುಖ ಅಂಶವೆಂದರೆ ಊಳಿಗಮಾನ್ಯದ ವಿರುದ್ಧದ ಪ್ರತಿಭಟನೆ, ಶೋಷಣೆಯ ವಿರೋಧ, ಗೌತಮನ ಪಾತ್ರ ಈ ಊಳಿಗದವರ, ಕಾರ್ಮಿಕರ, ಶೋಷಿತರ ಪರವಾಗಿ ಸದಾ ತುಡಿಯುತ್ತಲೇ ಇರುತ್ತದೆ. ನಾಟಕದ ಕೆಲಭಾಗಗಳಲ್ಲಿ ಸಿದ್ದಾರ್ಥ ಗೌತಮನ ಪಾತ್ರವು ಸೇವಕರನ್ನು ಸೇವಕರ ಕುಟುಂಬದ ಯೋಗಕ್ಷೇಮವನ್ನು ವಿಚಾರಿಸುತ್ತಲೇ ಇರುತ್ತದೆ. ಇದು ಸಾಮಾಜಿಕವಾದ ಹಾಗೂ ಆದರ್ಶಮಯವಾದ ಗುಣವು ಆಗಿದೆ. "ದುರ್ಬಲರು ಮತ್ತು ದು:ಖಿಗಳ ಬಗ್ಗೆ ಅನುಕಂಪ ನನ್ನಲ್ಲಿ ಪ್ರಥಮ ಗುಣ ಆಗೋದಕ್ಕೆ ಬಿಡಬಾರ್ದಂತೆ – ಎಂಥ ಕೆಟ್ಟ ತರ್ಕ ಎಂದೆನ್ನಬಹುದು ಎಂಬ ಮಾತು ಸಮಾಜದಲ್ಲಿನ ಕೆಳವರ್ಗಗಳ ಬಗ್ಗೆ ಮೇಲ್ವರ್ಗ ತಾಳಿರುವ ಭಾವನೆ ಮತ್ತು ಅವರೊಂದಿಗಿನ ಪರಿಯನ್ನು ಸೂಚಿಸಿದರೆ, ಸಿದ್ದಾರ್ಥನ ತಿರಸ್ಕಾರವನ್ನು ಕಾಣಬಹುದು.

ಸಮಾಜದಲ್ಲಿ ಸಾಮಾಜಿಕ ಸಂಘರ್ಷಗಳು ಬರಬಹುದು ಅಂತಹ ಸಂದರ್ಭದಲ್ಲಿ ಪರಸ್ಪರ ಅರಿತು ಮುನ್ನೆಡೆಯಬೇಕು, ಕಲಹ ತೀವ್ರಗಾಮಿ ನಡವಳಿಕೆಗಳನ್ನು ದೂರವಿರಿಸಬೇಕು ಎಂಬುದು ಸಿದ್ದಾರ್ಥ ಗೌತಮನ ಅಭಿಪ್ರಾಯವಾಗಿತ್ತು. ಇದಕ್ಕೆ ಸಾಂಕೇತಿಕವಾಗಿ ನಾಟಕದಲ್ಲಿ ಬರುವ "ದ್ವೇಷಕ್ಕೆ ದ್ವೇಷದಿಂದ ಉತ್ತರ ಕೊಡೋದು ನನ್ನಿಂದಾಗೋದಿಲ್ಲ" ಎಂಬ ಮಾತುಗಳನ್ನು ಉದಾಹರಿಸಬುದು.

ಚಂಡಾಲ ಕುಲದ ಮಾರ್ಕಾಂಡೇಯ, ಚೆನ್ನ, ಅಂಕಿತಾ, ಇತ್ಯಾದಿ ಪಾತ್ರಗಳನ್ನೆ ಹೆಚ್ಚಾಗಿ ಆಶ್ರಯಿಸುವ ಸಿದ್ದಾರ್ಥ ಜಾತಿ ವ್ಯವಸ್ಥೆಯ ವಿರುದ್ಧ ನಿಂತು ಸರ್ವ ಸಮಾನತೆಯ ಸಂದೇಶ ನೀಡುತ್ತಾನೆ. ಸರ್ವರಿಗೂ, ಪ್ರಾಣಿಪಕ್ಷಿಗಳಿಗೂ ಸ್ವತಂತ್ರ ಬದುಕು ನಡೆಸುವ



ಅವಕಾಶ ಪ್ರಕೃತಿ ನೀಡಿದೆ. 'ಜೀವ ಕೊಡೋಕೆ ಸಾದ್ಯವಿಲ್ಲದವನಿಗೆ ಜೀವ ತೆಗೆಯೋ ಹಕ್ಕೆಲ್ಲಿದೆ' ಎಂಬ ಮಾತಿನ ಮೂಲಕ ದಬ್ಬಾಳಿಕೆ ಹಿಂಸೆ, ಯುದ್ಧಮಾಡಿ ಪ್ರಾಣಹಾನಿ ಮಾಡುವವರಿಗೆ ಪ್ರಶ್ನಿಸುತ್ತಾನೆ. ಯುದ್ಧ, ಕಲಹ, ಸಂಘರ್ಷಗಳು ಸಮಾಜಕ್ಕೆ ಹಾನಿಕಾರಕವಾದುವುಗಳು 'ಮಾನವ ಹತ್ಯಾಕಾಂಡ ಮಾನವ ಜನಾಂಗದ ಯಾವ ಸಮಸ್ಯೆಗೂ ಪರಿಹಾರವಾಗಲಾರದು' ಎಂಬ ಮಾತುಗಳು ಸಮಾಜವನ್ನು ಸರಿಯಾಗಿ ಕಟ್ಟುವ ಬೆಳೆಸುವ ಸಂಕೇತಗಳೆಂಬಂತೆ ಬಳಕೆಯಾಗಿವೆ.

ಸಿದ್ದಾರ್ಥ ಗೌತಮನು ಯೋಶೋಧರೆಯನ್ನು " ಪರಿಪರಿಯಾಗಿ ಪರಿಹಾಸ್ಯ ಮಾಡೋ ಜಾಣೆ ಅಂತ ಗೊತ್ತಿದ್ದರೆ ನಾನು ಖಂಡಿತಾ ಸ್ವಯಂವರಕ್ ಬರ್ತಿರಲಿಲ್ಲ" ಎಂದು ಹಾಸ್ಯಮಾಡಿದಾಗ ಯಶೋಧರೆ ಪ್ರತಿಭಟನೆಯ ಮಾತುಗಳನ್ನಾಡುತ್ತಾಳೆ. ಆಗಾ ಸಿದ್ದಾರ್ಥಗೌತಮನು 'ಈ ಪರಿಪೂರ್ಣ ವ್ಯಕ್ತಿತ್ವ ಎಲ್ಲ ಸ್ತ್ರಿಯರಿಗೂ ಬರ್ಲೀ ಅಂತ ಹಾರೈಸ್ತೇನೆ' ಎನ್ನುತ್ತಾನೆ. ಇಲ್ಲಿ ಸ್ತ್ರಿ ಸಮಾನತೆಯ ಸಾಂಕೇತಿಕಾಂಶಗಳನ್ನು ಮನಗಾಣಬಹುದಾಗಿದೆ.

ಸಿದ್ದಾರ್ಥ – ಚೆನ್ನನ ಸ್ನೇಹಿತ್ವ, ಆಡಳಿತ ನೀತಿಯ ಪ್ರಶ್ನಿಸುವಿಕೆ, ಸ್ತ್ರೀಸಮಾನತೆಯ ಕಲ್ಪನೆ, ಕೃಷಿಕಾರ್ಮಿಕರ ಕ್ಷೇಮ ವಿಚಾರಣೆ, ಯುದ್ಧ ವಿರೋಧಿಭಾವನೆ ಅಂಕಿತಾಳನ್ನು ಬದುಕಿಸಿದ್ದು ಮಾರ್ಕಾಂಡಯ್ಯನಿಗೆ ರೋಹಿಣಿ ಜಲ ಪ್ರೇಕ್ಷಣೆ, ( ನದಿ, ವಿವಾದ ಪಸ್ತುತವೆನಿಸುತ್ತದೆ ) ಅಹಿಂಸಾತ್ಮಕವಾದ ಆಡಳಿತಕ್ಕಾಗಿ ಹಂಬಲ, ಜಾತಿ ವೈಷಮ್ಯದ ಜ್ವಾಲೆ ನೆಲ ಸುಡುವುದೆಂಬ ಭಾವನೆ, ಬದುಕುವ ಹಕ್ಕು ಎಲ್ಲರಿಗೂ ಇದೆ ಎನ್ನುವ ಸಂದೇಶ ಈ ಎಲ್ಲ ಅಂಶಗಳು ಸಮಾಜವಾದಿ ನೆಲೆಯಲ್ಲಿ ಸಮಾಜಮುಖಿ ಆಶಯದಲ್ಲಿ ಕಂಡು ಬರುವ ಬಹುಮುಖ್ಯ ಅಂಶಗಳೇ ಆಗಿವೆ.

ಮ.ನ.ಜ. ರವರು 'ಜಲ' ನಾಟಕವನ್ನು ಎರಕಹೊಯ್ದ ಒಂದು ಸಂಕೀರ್ಣ ಕೃತಿರೂಪವಾಗಿರಿಸಿದ್ದಾರೆ. ಗೌತಮನನ್ನು ಅರ್ಥಮಾಡಿಕೊಳ್ಳಲು, ರಾಜಕೀಯ ಮತ್ತು ಸಾಮಾಜಿಕ ಒಳಿತಿನ ನಂಟನ್ನು ತಿಳಿದುಕೊಳ್ಳಲು ಪ್ರತಿಷ್ಠಾಪಿತ ನೆಲೆಗಳನ್ನು ಭೇದಿಸಿ ಹೊಸನೆಲೆಯನ್ನು ಕಂಡುಕೊಳ್ಳುವ ಬಗೆಯನ್ನು ಕಲಿಯಲು 'ಜಲ'ದ ಅಧ್ಯಯನ ಸಹಕಾರಿಯಾಗಿದೆ. ತ್ಯಾಗದ ಮೂಲಕ ಜನಾಭಿಮುಖಿಯಾಗಬಲ್ಲ, ಮಾನವೀಯ ಧರ್ಮದ ಜಯ ಸಮಾಜದಲ್ಲಿ ಮೌಲ್ಯಗಳ ಭಿತ್ತರ ನಾಟಕಾಧ್ಯಯನದ ಸಂದರ್ಭದಲ್ಲಿ ಕಂಡುಬರುತ್ತದೆ.

**ಪರಾಮರ್ಶನ ಗ್ರಂಥಗಳು**

೧. ಜಲ : ಮ.ನ. ಜವರಯ್ಯ

೨. ಇಂದು ನಮಗೆ ಬೇಕಿರುವುದು ; ಆನಂದಭಂತೆ ಬುದ್ಧ ಬೆಳಕು (ಲೇಖನ)
ವಿಜಯವಾಣಿ ಪತ್ರಿಕೆ

೩. ಮ.ನ.ಜ. ಸಾಹಿತ್ಯ: ವಿಚಾರ ಲೇಖನಗಳು

೪. ಡಾ. ಬಿ.ಆರ್. ಅಂಬೇಡ್ಕರ್‌ರವರ : ರಾಚಪ್ಪಾಜಿ ಚಿಂತನೆಗಳು

೫. ಬುದ್ಧ ಭಗವಾನ್ ; ದಿಲೀಪ್. ಕೆ.



# ಆರಗದ ಪ್ರಾಚ್ಯಾವಶೇಷಗಳು

**ಅನಿತಾ. ವೈ**

---

ಶಿವಮೊಗ್ಗ ಜಿಲ್ಲೆ ತೀರ್ಥಹಳ್ಳಿ ತಾಲ್ಲೂಕು ಕೇಂದ್ರದಿಂದ ಪಶ್ಚಿಮಕ್ಕೆ ೧೦ ಕಿ.ಮೀ ದೂರದಲ್ಲಿರುವ ಐತಿಹಾಸಿಕ ಗ್ರಾಮವೇ ಆರಗ. ಮಲೆನಾಡಿನ ಪ್ರಕೃತಿಯ ಸಿರಿಯ ಮದ್ಯೆ ಕಂಗೋಳಿಸಿತ್ತಿರುವ ಆರಗ ಗ್ರಾಮದಲ್ಲಿ ಕುಶಾವತಿ ಮತ್ತು ಗೋಪಿನಾಥ ಎಂಬಾ ಎರಡು ನದಿಗಳು ಹರಿಯುತ್ತಿದ್ದು, ಪ್ರಾಚೀನವಾಗಿ ಈ ಪ್ರದೇಶವು ವೈಭವಯುತವಾಗಿ ಕೂಡಿದ್ದು, ಸ್ಥಳ ಪುರಾಣದ ಪ್ರಕಾರ ಈ ಊರು ಮಹಾಭಾರತ ಕಾಲದ "ಲಾಕ್ಷಗೃಹ" (ಅರಗು) ಆಗಿದ್ದು ಮುಂದೆ ಆರಗ ಎಂಬ ಹೆಸರು ಬಂದಿರುವುದನ್ನು ಕಾಣಬಹುದಾಗಿದೆ.

೧೪ ನೇ ಶತಮಾನದಲ್ಲಿ ಆರಗ ಪ್ರದೇಶವು ಪ್ರಮುಖ ವ್ಯಾಪರಿ ಕೇಂದ್ರವಾಗಿದ್ದು, ಕಲ್ಯಾಣ ಚಾಲುಕ್ಯರ ಕಾಲದಲ್ಲಿ ಆರಗವು ಹೊಂಬುಜ ಸಾಂತರಸರ ಅಧೀನದಲ್ಲಿತ್ತು. ಹೊಯ್ಸಳರ ಕಾಲದಲ್ಲಿ ಪ್ರಸಿದ್ದ ಅಗ್ರಹಾರವಾಗಿದ್ದ ಉಲ್ಲೇಖಗಳು ಕಂಡುಬರುತ್ತವೆ. ವಿಜಯನಗರ ಅರಸರ ಕಾಲದಲ್ಲಿ ಪ್ರಮುಖ ಪ್ರದೇಶವಾಗಿ ರೂಪುಗೊಂಡಿರುವುದನ್ನು ಕಾಣಬಹುದಾಗಿದೆ. ಈ ಆರಗ ರಾಜ್ಯವು ೩ ಪ್ರಮುಖ ಪಟ್ಟಣಗಳನ್ನು, ೧೮ ಕಂಪಣಗಳನ್ನು ಒಳಗೊಂಡಿದ್ದು, ಶಿವಮೊಗ್ಗ, ಶಿಕಾರಿಪುರ, ನಗರ(ಹೊಸನಗರ), ತೀರ್ಥಹಳ್ಳಿ, ಕೊಪ್ಪ ಹಾಗೂ ಸೊರಬ ಭಾಗಗಳನ್ನು ಒಳಗೊಂಡು ಆರಗ ರಾಜ್ಯವಾಗಿ ರೂಪಗೊಂಡಿತ್ತು. ಆರಗ ರಾಜ್ಯವನ್ನು ಶಾಸನಗಳಲ್ಲಿ ಆರಗ ಮಹಾರಾಜ್ಯ, ಆರಗ ಪ್ರಾಂತ್ಯ, ಆರಗ ೧೮ ಕಂಪಣಗಳ ನಾಡು, ಆರಗವೇಂಠೆ ಹಾಗೂ ಆರಗ ಮಾಗಣಿ ಎಂಬ ಹೆಸರುಗಳಿಂದ ಉಲ್ಲೇಖಿಸಲಾಗಿದೆ.

ಚಾರಿತ್ರಿಕ ಹಿನ್ನಲೆ: ಸಂಗಮ ವಂಶದ ಹರಿಹರನು ದಕ್ಷನಾಗಿ ರಾಜ್ಯಭಾರ ಮಾಡುತಿರಲು ಈತನಿಗೆ ಬೆಂಬಲವಾಗಿ ಇವನ ನಾಲ್ಕು ಜನ ಸಹೋದರರು ಕರ್ನಾಟಕದಲ್ಲಿ ಮತ್ತು ಆಂಧ್ರದ ಬೇರೆ ಬೇರೆ ಕಡೆಯಿಂದ ಆಳ್ವಿಕೆ ನಡೆಸುತ್ತಿದ್ದರಾದರು ರಾಜ್ಯದ ಸೌರ್ವಭೌಮ ಅಧಿಕಾರವೆಲ್ಲವೂ ಹರಿಹರನ ಕೈಯಲ್ಲೇ ಕೇಂದ್ರಿಕೃತವಾಗಿತ್ತು. ಬುಕ್ಕಾರಾಯನು ಯುವರಾಜನಾಗಿದ್ದುಕೊಂಡು ದ್ವಾರಸಮುದ್ರದಿಂದ ಅಣ್ಣನಿಗೆ ಸಹಾಯಕನಾಗಿ ಆಡಳಿತ ನಡೆಸುತ್ತಿದ್ದನು. ಕಂಪಣನು ಆಂಧ್ರಪ್ರದೇಶದ ನೆಲ್ಲೂರು ಮತ್ತು ಕಡಪ ಜಿಲ್ಲೆಯನ್ನು ಒಳಗೊಂಡ ಉದಯಗಿರಿಯ ಪ್ರಾಂತ್ಯಧಿಕಾರಿಯಾಗಿದ್ದನು. ಮಾರಪ್ಪನು ಕೊಂಕಣವನ್ನೊಳಗೊಂಡ ಮಲೆಯರಾಜ್ಯವನ್ನು(ಆರಗ ೧೮ ಕಂಣ+ಚಂದ್ರಗುತ್ತಿ ೧೮ ಕಂಪಣ) ಆಳುತ್ತಿದ್ದ ಇದಕ್ಕೆ 'ಚಂದ್ರಗುತ್ತಿ' ಪ್ರಾಂತೀಯ ರಾಜಧಾನಿಯಾಗಿತ್ತು. ಕೊನೆಯ ಸಂಗಮ ಸಹೋದರನಾದ ಮುದ್ದಪ್ಪನು ಮುಳುಬಾಗಿಲು ಪ್ರಾಂತ್ಯದ ಅಧಿಕಾರಿಯಾಗಿ ಕಾರ್ಯ ನಿರ್ವಹಿಸಿದ್ದನು ಈ ಎಲ್ಲಾ ಸಹೋದರರು ವಿಜಯನಗರ ಸ್ಥಾಪನೆಯ ವಿಜಯೊತ್ಸವವನ್ನು ಕ್ರಿ.ಶ ೧೩೪೬ ರಲ್ಲಿ ಆಚರಿಸಿದರೆಂದು ಶೃಂಗೇರಿತಯ ಶಾಸನವು ದೃಢಪಡಿಸುತ್ತದೆ.

ಆರಗವು ರಾಜಕೀಯವಾಗಿ ವಿಜಯನಗರ ಅರಸರ ಮಹತ್ವದ ಆಡಳಿತ ಕೇಂದ್ರವಾಗಿತ್ತು. ವಿಜಯನಗರದ ಅರಸರ ಪ್ರತಿನಿಧಿಯಾಗಿ ಒಡೆಯರ್(ಮಾಂಡಲೀಕರಾಗಿ) ಆಡಳಿತ ನಡೆಸಿದರು.

ಹರಿಹರನ ಪ್ರತಿನಿಧಿಯಾಗಿ– ವೀರ ಹರಿಯಪ್ಪ ಒಡೆಯರ್

೧ ನೇ ಬುಕ್ಕರಾಯನ ಪ್ರತಿನಿಧಿಯಾಗಿ– ವಿರುಪಣ್ಣ ಒಡಡೆಯರ್ ಮತ್ತು ವೇದಗಿರಿ ವಿರೂಪರಾಯ

೨ ನೇ ಹರಿಹರನ ಪ್ರತಿನಿಧಿಯಾಗಿ– ಚಿಕ್ಕರಾಜ ಒಡೆಯರ್ ಮತ್ತು ಮಲ್ಲಪ್ಪ ಒಡೆಯರ್

೨ ನೇ ಬುಕ್ಕರಾಯನ ಪ್ರತಿನಿಧಿಯಾಗಿ– ಇಮ್ಮಡಿ ವೀರಣ್ಣ ಒಡೆಯರ್

೨ ನೇ ದೇವರಾಯನ ಪ್ರತಿನಿಧಿಯಾಗಿ– ಸಿರಿಯಮ್ಮ ವೆಗ್ಗಡೆ

ಶ್ರೀ ಕೃಷ್ಣದೇವರಾಯನ ಪ್ರತಿನಿಧಿಯಾಗಿ– ಸದಾಶಿವನಾಯಕ

ಆರಗದ ಅರಸರ ಶಾಸನಗಳನ್ನು ವಿಶ್ಲೇಷಿಸಿದಾಗ ಇವರನ್ನು ವಿಜಯನಗರದ ಮಾಂಡಲೀಕರು ಎನ್ನುವುದಕ್ಕಿಂತ ಅವರ ಪ್ರತಿನಿಧಿಗಳು ಅಥವಾ ಸಂಬಂಧಿಕರು ಎಂದು ಕರೆದರೆ ಸೂಕ್ತವೆನಿಸುತ್ತದೆ.

**ಆರಗದ ಪ್ರಾಚ್ಯಾವಶೇಷಗಳು:**

ಕಲಾನಾಥೇಶ್ವರ ದೇವಾಲಯ: ದೇವಾಲಯದ ಸುತ್ತಲೂ ಪ್ರಕಾರ ಗೋಡೆಯನ್ನು ಹೊಂದಿದ್ದು, ದೇವಾಲಯದ ಒಳಗೆ ಪ್ರವೇಶಿಸಲು ಪೂರ್ವ ಮತ್ತು ಉತ್ತರಕ್ಕೆ ಪ್ರವೇಶ ದ್ವಾರಗಳನ್ನು ಹೊಂದಿದ್ದು, ದೇವಾಲಯವು ಎತ್ತರವಾದ ಅಧಿಷ್ಠಾದಿಂದ ಕೂಡಿದ್ದು, ಭಿತ್ತಿಯು ಸರಳವಾಗಿರುವುದು ಕಂಡುಬರುತ್ತದೆ. ಇಳಿಜಾರಾದ ಕಪೋತವಿದ್ದು, ಶೃಂಗಾರಗೊಂಡಿರುವ ಎತ್ತರವಾದ ಗೊಪುರ, ಶಿಖರ, ಅಲಂಕೃತವಾದ ಸ್ತಂಭಬೋದಿಗೆಗಳು ಸುಂದರವಾಗಿವೆ. ದೇವಾಲಯದ ಹೊರಭಾಗದ ಎದುರಿನ ಧ್ವಜಸ್ತಂಭದ ತಳಭಾಗದ ಶಿಲ್ಪದಲ್ಲಿ ಪುರುಷನೋರ್ವನು ಒಂದು ಕಾಲು ಮಡಿಸಿ ನಿಂತಿದ್ದು, ಅವನ ತಲೆಗೂದಲು ಬಲಕ್ಕೆ ಬಾಗಿದೆ. ಹಾಗೆಯೇ ದೇವಾಲಯವು ಗರ್ಭಗೃಹ, ಅಂತರಾಳ ಹಾಗೂ ನವರಂಗವನ್ನು ಹೊಂದಿದ್ದು, ಪ್ರವೇಶದ್ವಾರದ ಮುಂಭಾಗದಲ್ಲಿ ೨ ಭಾಗದಲ್ಲಿ ಶೈವದ್ವಾರಪಾಲಕರಿದ್ದಾರೆ.

ಶಾಸನದಲ್ಲಿ ಈ ದೇವಾಲಯಕ್ಕೆ "ಕಲಿನಾಥ" ಎಂದಿದ್ದು ಹೊಯ್ಸಳರ ಕಾಲದಲ್ಲಿ ನಿರ್ಮಾಣವಾಗಿದ್ದರೂ, ವಿಜಯನಗರ ಅರಸರ ಕಾಲದಲ್ಲಿ ಸಂಪೂರ್ಣವಾಗಿ ಜೀರ್ಣೋದ್ದಾರಗೊಂಡು ಪ್ರಸ್ತುತವಾಗಿ ಸುಸ್ಥಿತಿಯಲ್ಲಿದ್ದು, ಇಂದಿಗೂ ನಿತ್ಯವೂ ಪೂಜೆ ನಡೆಯುತ್ತಿದೆ.

**ವೀರಭದ್ರ ದೇವಾಲಯ ಸಮುಚ್ಚಯ:**

ಈ ಸ್ಥಳದಲ್ಲಿ ವೀರಭದ್ರ ದೇವಾಲಯವೆಂದು ಹೇಳಲಾಗುತ್ತಿದ್ದ ಗುಡಿಯು ಪಾಳು ಬೀಳಲಾಗಿ ಪ್ರಸ್ತುತ ಜೀರ್ಣೋದ್ದಾರಗೊಂಡಿದ್ದು, ಧ್ವಜಸ್ಥಂಭವು ಹಾಗೇಯೆ ಉಳಿದಿರುವುದು ಕಂಡುಬಂದಿದ್ದು, ಈ ದೇವಾಲಯದ ಎರಡು ಶಿಲೆಯ ಮೇಲೆ ತೀರ್ಥಂಕರು ಹಾಗೂ ಯಕ್ಷ–ಯಕ್ಷಿಯರ ಉಬ್ಬು ಶಿಲ್ಪದ ಕೆತ್ತನೆ ಇದೆ. ಇವನ್ನು ದೇವಾಲಯದ ಎದುರುಗಡೆ ನಿಲ್ಲಿಸಲಾಗಿದೆ. ಇನ್ನೊಂದು ಶಿಲೆಯ ಮೇಲೆ ಆನೆಯ ಮೇಲೆ ಕುಳಿತು ಯುದ್ದ ಮಾಡುವ ವೀರರು ಹಾಗೂ ಶಿವಲಿಂಗವಿದೆ. ಈ ವೀರಭದ್ರ

ದೇವಾಲಯದ ಸಮುಚ್ಚಯದಲ್ಲಿ ವೀರಗಲ್ಲುಗಳು ಮತ್ತು ಜೈನ ತೀರ್ಥಂಕರ ಮೂರ್ತಿಗಳು ಕಂಡು ಬಂದಿವೆ.

**ಸದಾಶಿವ ದೇವಾಲಯ:**

ಆರಗದಲ್ಲಿ ಹೆಚ್ಚು ಪ್ರಸಿದ್ಧಿಯಾದ ಈ ದೇಗುಲ ಅಗ್ರಹಾರದಲ್ಲಿದೆ. ಶಿಖರಭಾಗವು ಹಾಳಾಗಿದೆ. ದೇವಾಲಯವು ಗರ್ಭಗೃಹ, ಅಂತರಾಳ ಮತ್ತು ಮಂಟಪಗಳಿಂದ ಕೂಡಿದ್ದು ಈ ದೇವಾಲಯವು ವಿಜಯನಗರ ಕಾಲದಲ್ಲಿ ನಿರ್ಮಾಣವಾಗಿದ್ದು, ಮುಂದೆ ಕೆಳದಿ ರಾಮರಾಜ ನಾಯಕನ ಕಾಲದಲ್ಲಿ ಅಭಿವೃದ್ದಿಗೊಂಡಿರುವುದನ್ನು ಕಾಣಬಹುದಾಗಿದೆ.

ಬನಶಂಕರಿ (ವನಶಂಕರಿ) ದೇವಾಲಯ:

ಈ ದೇವಾಲಯವು ಮಲೆನಾಡಿನ ವಿಶಿಷ್ಠ ದೇವತೆಯಾಗಿದ್ದು, ಸ್ಥಳೀಯರು ಈ ದೇವತೆಯನ್ನು ಚೌಡಮ್ಮ ಎಂತಲೂ ಕರೆಯುತ್ತಾರೆ. ಕ್ರಿಶ ೧೪೦೫ ರಲ್ಲಿ ರಾಜ್ಯವಾಳುತ್ತಿದ್ದ ಶ್ರೀ ವಿಠ್ಠಲ ದೊರೆ ಆರಗದ ಹಿರಿಯಂಗಡಿ ಬನದೇವಿಯ ಅಮೃತ ಪಡಿಗೆ ಭೂದಾನ ನೀಡಿದ ವಿವರಗಳಿವೆ (ಎ.ಸಂ.೧೩). ಇವುಗಳಲ್ಲದೆ ಆಂಜನೇಯ, ಕಾಳಮ್ಮನ ದೇವಾಲಯ, ಹಿರೇಕೆರೆ(ವಿರೂಪ ಸಮುದ್ರ) ಸಹ ಇದೆ. ಪ್ರಸ್ತುತ ದೇವಾಲಯವು ಸಂಪೂರ್ಣ ಶಿಥಿಲಾವಸ್ಥೆಗೊಂಡಿರುವುದನ್ನು ಕ್ಷೇತ್ರಕಾರ್ಯ ಅವಧಿಯಲ್ಲಿ ಕಂಡುಕೊಂಡಿದ್ದು, ಈ ದೇವಾಲಯದ ಪಕ್ಕದಲ್ಲಿಯೆ ಸದಾಶಿವ ಅಗ್ರಹಾರವಿದೆ.

**ಜೈನ ಬಸದಿ:**

ಅಖಂಡೇಶ್ವರ ದೇವಾಲಯದಿಂದ ದಕ್ಷಿಣಕ್ಕೆ ಸುಮಾರು ೪೫೦ ವರ್ಷಗಳ ಪ್ರಾಚೀನ ಜೈನ ಬಸದಿ ಮತ್ತು ಪ್ರಾಚೀನ ಪುಷ್ಕರಣಿ ಇದ್ದು, ಈ ಬಸದಿಯು ಶಿಥೀಲವಾಗಿದ್ದು, ಬಸದಿಯ ಒಳಭಾಗದಲ್ಲಿ ವಿಜಯನಗರ ವಾಸ್ತುಶೈಲಿಯ ಕಣಶಿಲೆಯ ಸುಂದರ ಕೆತ್ತನೆಯ ಸ್ತಂಭಗಳಿವೆ, ಇದರಿಂದಾಗಿ ಇದು ವಿಜಯನಗರ ಕಾಲದಲ್ಲಿ ಜೀರ್ಣೋದ್ಧಾರಗೊಂಡಿದೆನ್ನಬಹುದಾಗಿದೆ. ದ್ವಾರಪಟ್ಟಿಕೆಯ ಮೇಲೆ ತೀರ್ಥಂಕರ ಮೂರ್ತಿಗಳಿವೆ.

ಈ ಮೇಲ್ಕಾಂಡ ಪ್ರಾಚ್ಯವಶೇಷಗಳನ್ನು ಗಮನಿಸಲಾಗಿ ಆರಗದ ಒಡೆಯರು ವಿಜಯನಗರ ಅರಸರ ಸಾಮಂತರಾಗಿ, ಇಲ್ಲಿ ರಾಜ್ಯಭಾರ ಮಾಡಿದರೆನ್ನಬಹುದಾಗಿದೆ. ಈ ರಾಜ್ಯ ಮಲೆಯ ರಾಜ್ಯ (ಬೆಟ್ಟ ಶ್ರೇಣಿಗಳಿಂದ ಆವೃತವಾಗಿರುವ ರಾಜ್ಯ), ಗುತ್ತಿರಾಜ್ಯ (ಚಂದ್ರಗುತ್ತಿಯವರೆಗೂ ವಿಸ್ತರಿಸಿದ ರಾಜ್ಯ) ಎಂದೆನಿಸಿಕೊಂಡು, ಮಲೆನಾಡಿನ ಸಣ್ಣ ಪ್ರಾಂತ್ಯದಲ್ಲಿ ಸ್ಥಾಪಿತವಾಗಿದ್ದು, ಸಾಕಷ್ಟು ವಿಸ್ತಾರವಾದ ಪ್ರದೇಶದಲ್ಲಿ ತನ್ನ ಆಡಳಿತ ನಿಯಂತ್ರಣವನ್ನು ಸಾಧಿಸಿದ ರಾಜ್ಯವೆನಿಸಿಕೊಂಡಿತು.

**ಅಡಿ ಟಿಪ್ಪಣಿಗಳು:**


- ರಾಜರಾಂ ಹೆಗ್ಗಡೆ, ಅಶೋಕ್ ಶೆಟ್ಟರ್(ಸಂ). ಮಲೆ ಕರ್ನಾಟಕದ ಅರಸು ಮನೆತನಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ ಹಂಪಿ ೨೦೦೧.
- ರಾಮಭಟ್ಟ ಬಿ.ಎಸ್, ಶಿವಮೊಗ್ಗ ಜಿಲ್ಲೆಯ ಇತಿಹಾಸ ಮತ್ತು ಸಂಸ್ಕೃತಿ, ರಾಷ್ಟ್ರೀಯ ಶಿಕ್ಷಣ ಸಮಿತಿ
- ಜಯದೇವಪ್ಪ ಜೈನಕೆರೆ, ಇತಿಹಾಸ ಸಂಪದ, ಶಾಂತಲಪ್ರಕಾಶನ ಶಿವಮೊಗ್ಗ ೨೦೦೭.
- ಸತೀಶ ಕೆ. ವಿಜಯನಗರ ಕಾಲದ ಶೈವ ದೇವಾಲಯಗಳು, ಕನ್ನಡ ಸಾಹಿತ್ಯ ಪರಿಷತ್ ಬೆಂಗಳೂರು
- ಗೋಪಾಲ್ ಆರ್. ಶಿವಮೊಗ್ಗ ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ನಿರ್ದೇಶನಾಲಯ ಮೈಸೂರು, ೨೦೦೮.


# ಶಿವಯೋಗಿ ಸಿದ್ದರಾಮನ 'ಅರಿವು' ಕಲ್ಪನೆ ಪ್ರಸ್ತಾವನೆ

ಪ್ರಭುಗೌಡ ವಿ. ಎಸ್.

ಹನ್ನೆರಡನೆಯ ಶತಮಾನದಲ್ಲಿ ಬಸವಣ್ಣನವರ ಸಮಕಾಲೀನರಾಗಿ ಬದುಕಿದ ಸಿದ್ಧರಾಮನು ತನ್ನ ಯೋಗ ಮತ್ತು ಕರ್ಮ ಗುಣಗಳಿಂದ ವಿಶಿಷ್ಟ ವ್ಯಕ್ತಿತ್ವವನ್ನು ಪಡೆದವನು. ಬಸವಣ್ಣ, ಅಲ್ಲಮಪ್ರಭುದೇವ ಮತ್ತು ಚೆನ್ನಬಸವಣ್ಣನವರ ಪ್ರಭಾವಕ್ಕೊಳಗಾಗಿ ತನ್ನ ಬದುಕಿನ ಸಾಧನೆ ಸಿದ್ಧಿಯನ್ನು ಕಂಡುಕೊಂಡ ಮಹಾನ್ ವಚನಕಾರ. "ಸಿದ್ಧರಾಮನು ಯೋಗಿಯೂ, ಕರ್ಮಿಯೂ ಆಗಿದ್ದು ಪ್ರಭುದೇವ ಚೆನ್ನಬಸವಾದಿಗಳ ಅನುಗ್ರಹದಿಂದ ಜ್ಞಾನಿಯಾದನು, ಕರ್ಮಯೋಗಿ-ಶಿವಯೋಗಿ ಯಾದನು. ಅವನ ವಚನಗಳಲ್ಲಿ ಅವನ ವ್ಯಕ್ತಿತ್ವದ ವಿಕಾಸವು ಕಂಡುಬರುತ್ತದೆ. 'ಭಕ್ತನಾದರೆ ಬಸವಣ್ಣನಾಗಬೇಕು, ಜಂಗಮನಾದರೆ ಪ್ರಭುವಿನಂತಾಗಬೇಕು, ಭೋಗಿಯಾದರೆ ನಮ್ಮ ಗುರು ಚೆನ್ನಬಸವಣ್ಣನಂತಾಗಬೇಕು, ಯೋಗಿಯಾದರೆ ನನ್ನಂತಾಗಬೇಕು"೧ ಎಂಬಂತಹ ವಚನಗಳಲ್ಲಿ 'ಸಿದ್ಧರಾಮನು' ತನ್ನ ಮತ್ತು ಇತರರ ವ್ಯಕ್ತಿತ್ವ ವಿಶೇಷತೆಯನ್ನು ಕುರಿತು ಹೇಳಿರುವುದು ಗಮನಾರ್ಹ ಸಂಗತಿಯಾಗಿದೆ.

ಬಸವಣ್ಣನವರು ಸಂಸ್ಥಾಪಿಸಿದ ಶೂನ್ಯ ಸಿಂಹಾಸನವನ್ನು ಮೊಟ್ಟಮೊದಲ ಬಾರಿಗೆ ಏರಿದ ವ್ಯಕ್ತಿ ಅಲ್ಲಮಪ್ರಭುದೇವ ನಂತರ ಚೆನ್ನಬಸವಣ್ಣನವರು ಈ ಪೀಠಕ್ಕೆ ಬರುವರು. ಇದೇ ಸಂದರ್ಭದಲ್ಲಿ ಕಲ್ಯಾಣದಲ್ಲಿ ಕ್ರಾಂತಿಯಾಗುತ್ತದೆ. ಆಗ ಈ ಶೂನ್ಯಪೀಠವನ್ನೇ ಕಲ್ಯಾಣದಿಂದ ಸೊಲ್ಲಾಪುರದ (ಸೊನ್ನಲಿಗೆ) ಸಿದ್ಧರಾಮ ಶಿವಯೋಗಿ ಸನ್ನಿಧಿಗೆ ತರುತ್ತಾರೆ. ಆಗ ಶೂನ್ಯ ಸಿಂಹಾಸನದ ಮೂರನೆಯ ಅಧಿಪತಿಯಾಗಿ 'ಸಿದ್ಧರಾಮ'ನು ಶರಣ ಧರ್ಮವನ್ನು ಮುನ್ನಡೆಸುತ್ತಾನೆ. ಈ ಒಂದು ಪ್ರಸಂಗ ಸಿದ್ಧರಾಮನ ಬದುಕಿನ ಒಂದು ಹೆಗ್ಗಳಿಕೆಯಾಗಿಯೂ ಕಂಡಿದೆ.

**ಮನವೇ ಸರ್ಪ, ತನುವೇ ಹೇಳಿಗೆ;**
**ಹಾವಿನೊಡತನ ಹುದುವಾಳಿಗೆ!**
**ಇನ್ನಾವಾಗ ಕೊಂದಹುದೆಂದರಿಯೆ;**
**ಇನ್ನಾವಾಗ ತಿಂದುಹುದೆಂದರಿಯೆ!**
**ನಿಚ್ಚಕ್ಕೆ ನಿಮ್ಮ ನಿಮ್ಮ ಪೂಜಿಸಬಲ್ಲೊಡೆ**
**ಅದೇ ಗಾರುಡ, ಕೂಡಲಸಂಗಮದೇವಾ!**

ಎಂದು ಬಸವಣ್ಣನವರು ತಮ್ಮ 'ಸಮತಾ ಭಾವ'ವನ್ನು ಕುರಿತು ಹೇಳಿದರು. ಅದೇ ರೀತಿ ಸಿದ್ಧರಾಮನು ತನ್ನ 'ಸಮತಾ ಗಾರುಡಿಗತನ'ವನ್ನು, ಸಮತಾದೃಷ್ಟಿಯನ್ನು ಸಾರಿ ಸಾರಿ ಹೇಳಿದ್ದು ಪ್ರಮುಖ ಸಂಗತಿಯಾಗಿದೆ.

**ಆರೇನೆಂದರೂ ಓರಂತಿಪ್ಪುದೇ ಸಮತೆ;**
**ಆರು ಜರಿದರೂ ಅವರೆನ್ನ ಮನದ ಕಾಳಿಕೆಯ**
**ಕಳೆದರೆಂಬುದೇ ಸಮತೆ;**
**ಆರು ಸ್ತೋತ್ರ ಮಾಡಿದರೂ ಅವರೆನ್ನ ಜನ್ಮದ**

**ದಗೋಳೆಂಬುದೇ ಸಮತೆ;**
**ಇಂತಿದು ಗುರುಕಾರುಣ್ಯ, ಮನ ವಚನ**
**ಕಾಯದಲ್ಲಿ ಅಹಿತವಿಲ್ಲದೆ, ಕಪಿಲಸಿದ್ಧ ಮಲ್ಲಿಕಾರ್ಜುನಯ್ಯ,**
**ನಿಮ್ಮವರ ನೀವೆಂಬುದೇ ಸಮತೆ.**

ಇದು ಸಿದ್ಧರಾಮನು ತನ್ನ ಬದುಕಿನಲ್ಲಿ ಆದರ್ಶವಾಗಿರಿಸಿಕೊಂಡ ಸಮತೆಯ ಭಾವ ಪರಿಕಲ್ಪನೆ. ಇದು ಅವನ ಅರಿವಿನ ಪರಿಕಲ್ಪನೆಯೂ ಆಗಿದೆ. ತನಗೆ ಯಾರಾದರೂ ತೊಂದರೆ ಕೊಡದಿದ್ದಾಗ ಮನವಚನಕಾಯದಲ್ಲಿ ಅಹಿತವಿಲ್ಲದೆ ಎಲ್ಲರನ್ನು 'ಶಿವಾಂಶಿಕ'ರೆಂದು ಭಾವಿಸುವುದು ತೊಂದರೆದಾಯಕವೇನಲ್ಲ. ಸುಮ್ಮನೆ ನಮ್ಮ ಮನೆಯಲ್ಲಿ ನಾವು ತಣ್ಣಗಿರುವವೆಂದರೂ, ಕಲ್ಯಾಣವನ್ನೇ ತೋರುತ್ತಾ ಇರುವವೆಂದರೂ ಕೆಲವರು ಕೇಳುವುದಿಲ್ಲ. ಕಾಡುತ್ತಾರೆ. ಪೀಡಿಸುತ್ತಾರೆ, ಹಿಂಸಿಸುತ್ತಾರೆ. ಅಂತಹ ಸಂಧರ್ಭದಲ್ಲಿ ಸಮತೆಯನ್ನು ಕಾಪಾಡಿಕೊಳ್ಳುವುದು ಸಾಮಾನ್ಯರ ಸ್ವತ್ತಲ್ಲ. ಆದರೆ ಸಿದ್ಧರಾಮನಂಥ ಶಿವಯೋಗಿ ಸಿದ್ಧಯೋಗರಿಗೆ ಅದು 'ಅರಿದೇವ'ನಲ್ಲವೆಂಬ ಅರ್ಥದಲ್ಲಿ 'ಸಿದ್ಧರಾಮನು' ಉಸುರಿದ ಸಮತೆಯ ಭಾವ ಗಮನಾರ್ಹವಾಗಿದೆ. ಜೊತೆಗೆ ಅರಿತ ಸಿದ್ಧಿಪುರುಷರು ಎಂಥ ಕಠಿಣ ಸನ್ನಿವೇಶದಲ್ಲೂ ತಮ್ಮತನವನ್ನು ರಕ್ಷಿಸಿಕೊಳ್ಳುವ ಶಕ್ತಿ ಸಾಮರ್ಥ್ಯವನ್ನು ಪಡೆದಿರುತ್ತಾರೆಂಬ ಅರಿವಿನ ಪರಿಕಲ್ಪನೆಯಿದೆ.

ಬಸವಣ್ಣನವರಂತೆ ಸಾಮಾಜಿಕ ಕಳಕಳಿಯನ್ನು ಮೈಗೂಡಿಸಿಕೊಂಡ ಸಿದ್ಧರಾಮನು ಸಾಮಾಜಿಕವಾಗಿ ಕೈಗೊಂಡ ಕಾರ್ಯಗಳು ಸರ್ವಕಾಲೀಕ ಮಹತ್ವವನ್ನು ಪಡೆದುಕೊಳ್ಳುತ್ತವೆ. ಈ ಸಾಮಾಜಿಕ ಕೈಂಕರ್ಯದೊಂದಿಗೆ ಸಿದ್ಧರಾಮನು ವೈಚಾರಿಕೆಯ ಮನೋಭಾವವನ್ನು ಹೊಂದಿದ್ದನೆಂಬುದು ಅಷ್ಟೇ ಗಮನಾರ್ಹ ಸಂಗತಿ. "ಸಾಮಾಜಿಕ ಹೊಣೆಗಾರಿಕೆಯಲ್ಲಿ ವೈಚಾರಿಕತೆಯ ಪಾತ್ರ ಅಷ್ಟೇ ಮುಖ್ಯವಾದುದು; ಸಾಮಾಜಿಕ ಸ್ಥಿತ್ಯಂತರಕ್ಕೆ ತಹತಹಿಸುವ ವೈಚಾರಿಕ ಮನೋಭಾವದ ವ್ಯಕ್ತಿ ಕ್ರೀಯಾಶೀಲನಾಗುವುದು ಮುಖ್ಯವಾಗಿದೆ. ಮನ ವಚನ ಕಾಯ ಶುದ್ಧವಾದ ವ್ಯಕ್ತಿ ಜನತೆಯ ನಡುವೆ ನಿಂತು ಸಾಮಾಜಿಕ ಪರಿವರ್ತನೆಗೆ ತೊಡಗಿದಾಗ ಜನ ಸಹಜವಾಗಿ ಅದಕ್ಕೆ ಸ್ಪಂದಿಸುವರು. ಇದು ಎಲ್ಲ ಕಾಲದ ಚಳುವಳಿಗಳಲ್ಲಿ ಕಂಡುಬರುವ ವಾಸ್ತವ ಸತ್ಯ. ಸಾಮಾಜಿಕ ನೆಲೆಯಲ್ಲಿ ಯಾವುದೇ ಬದಲಾವಣೆ ಕ್ಷಣ ಮಾತ್ರದಲ್ಲಿ ಆಗುವಂತಹದ್ದಲ್ಲ, ಪರಂಪರೆಯಿಂದ ಜಿಡ್ಡುಗಟ್ಟಿದ ಜನರ ಮನಸ್ಸನ್ನು ತಿದ್ದಬೇಕು. ಮಾನಸಿಕ ಪರಿವರ್ತನೆ ನಡೆಸಬೇಕು. ಇದಕ್ಕೆ ತಾಳ್ಮೆಬೇಕು; ಜನರ ಮನಸ್ಸನ್ನು ಅರ್ಥ ಮಾಡಿಕೊಂಡು ಹಿತವಾದ ರೀತಿಯಲ್ಲಿ ಬೋಧಿಸಿ ತಿದ್ದಬೇಕು; ಜನರ ಮನಸ್ಸನ್ನು ಗೆಲ್ಲುವ ಜಾಣ್ಮೆ, ಪ್ರಭಾವಶಾಲಿ ಮಾತುಗಾರಿಕೆ ಬೇಕು."[೨] ಎಂಬ ಪರಿಕಲ್ಪನೆಯೊಂದಿಗೆ ಸಿದ್ಧರಾಮನು ಸಮಾಜವನ್ನು ಸುಧಾರಿಸುವ ಗುಣವನ್ನು ತನ್ನಲ್ಲಿ ಆತ್ಮಗತ ಮಾಡಿಕೊಂಡಿದ್ದನು. ಇನ್ನು ಮಾನವನ ಅಹಂಕಾರ, ಸ್ವಾರ್ಥಪರ ಗುಣವನ್ನು ಸಿದ್ಧರಾಮನು ತನ್ನ ವಚನಗಳಲ್ಲಿ ವಿಡಂಬಿಸಿದ್ದು ವಿಶೇಷವಾಗಿದೆ.

**ಮಾಡಿದರು ಮಾಡಿದರು ತಮ್ಮ ಹಿತಕ್ಕಲ್ಲದೆ**
**ಮತ್ತಾರು ಹಿತಕ್ಕಲ್ಲ ನೋಡಯ್ಯಾ**
**ನೋಡಿದರು ನೋಡಿದರು ತಮ್ಮ ಹಿತಕ್ಕಲ್ಲದೆ**
**ಮತ್ತಾರ ಹಿತಕ್ಕಲ್ಲ ನೋಡಯ್ಯಾ**
**ತನ್ನ ಬಿಟ್ಟನ್ಯ ಹಿತವ ನೋಡಿದಡೆ**



**ಕೂಡಿಕೊಂಬ ನಮ್ಮ ಕಪಿಲಸಿದ್ದ ಮಲ್ಲಯ್ಯನವರ**

ಜಗತ್ತಿನ ಪ್ರತಿಯೊಬ್ಬ ಮಾನವನಲ್ಲಿ ನಾನು, ನನ್ನದು, ನನ್ನವರು, ನನ್ನಿಂದ ಎಂಬ ಸಂಕುಚಿತ ಮಾತುಗಳೇ ಕೇಳಿಬರುತ್ತವೆ. ಅದಕ್ಕಾಗಿ ನಾವು ಮಾಡುವ ಮಾಟಗಳು, ನಾವು ನೋಡುವ ನೋಟಗಳು. ಕೇವಲ ನಮಗಾಗಿ, ನಮ್ಮನ್ನೇ ನಾವು ನೋಡಿಕೊಂಡೆವು. ಇಂತಹ ಸಣ್ಣತನದಲ್ಲಿ ಮನುಷ್ಯ ಬದುಕುತ್ತಿದ್ದಾನೆ. ಅತ್ಯಂತ ಸ್ವಾರ್ಥಿಯಾಗಿದ್ದಾನೆಂಬುದು ಸಿದ್ಧರಾಮನ ಕಳವಳವಾಗಿದೆ. ಇದು ಪರಮಾತ್ಮನಿಗೆ ಒಪ್ಪದ ವಿಚಾರ. ಮನುಷ್ಯನು ಮಾಡುವ ಕಾರ್ಯದಲ್ಲಿ ಶ್ರದ್ಧೆಯಿರಬೇಕು, ಪರಹಿತಯಿರಬೇಕು, ಪರೋಪಕಾರ ಗುಣಯಿರಬೇಕು ಅಂದಾಗ ಮಾತ್ರ ಮನುಷ್ಯನ ಆ ಕಾರ್ಯಕ್ಕೆ ಅರ್ಥಬರುತ್ತದೆ. ಅಂಥ ಕಾರ್ಯದಲ್ಲಿ ಮಂಗಳಕರವಾದ ಬೆಳಕಿರುತ್ತದೆ. ಅದು ಮಹಾದೇವನ ಪ್ರೀತಿಗೆ ಪಾತ್ರವಾಗುತ್ತದೆ. ಈ ರೀತಿಯ ಕರ್ಮಾದಿಗಳಿಂದ ಕೂಡಿದ ಮಾನವನ ಬದುಕು ಶಾಂತಿಮಯವಾಗುತ್ತದೆ, ಶಿವಮಯವಾಗುತ್ತದೆಂಬ ಭಾವನೆ ಸಿದ್ಧರಾಮನದಾಗಿತ್ತು.

"ಸಿದ್ಧರಾಮೇಶ್ವರರಿಗೆ – 'ವಚನ'ವು ಕೇವಲ ಅಭಿವ್ಯಕ್ತಿ ಮಾಧ್ಯಮವಾಗಿಲ್ಲ, ಅದು 'ಕಪಿಲಸಿದ್ಧಮಲ್ಲಿಕಾರ್ಜುನನ್ನು ತಿಳಿಯಲಿಕ್ಕೆ' ನೆರವಾಗುವ ಸಾಧನ. 'ವಚನ'ವು ಅವರ ಪಾಲಿಗೆ 'ಆದ್ಯರ ಆಜ್ಞೆ', 'ಈಶ್ವರನಿಗೆ ಬೆಳಗುವ ಜ್ಯೋತಿ'. ಮಾತಿಗಿಂತ ನಡೆಗೆ, ಅನುಭವಕ್ಕೆ ಹೆಚ್ಚಿನ ಪ್ರಾಧಾನ್ಯ ನೀಡುವ ಅವರು 'ಅನುಭಾವವೆಂಬುದು ಅನುಭಾವಿಕಗಲ್ಲದೆ ಹೊತ್ತಗೆಯಲ್ಲಿಲ್ಲ ನೋಡಾ, ಎಂದಿರುವರು. ಪುಸ್ತಕ ವಿದ್ಯೆಯೆ ವಿದ್ಯೆ ಎನ್ನುವ ಪರಂಪರೆಯ ಹುಸಿ ನಂಬಿಕೆಯನ್ನು 'ವಿದ್ಯೆ ಎಂದಡೆ ಭಾರತ–ರಾಮಾಯಣವಲ್ಲ' ಎನ್ನುವ ಮೂಲಕ ಖಂಡಿಸುವರು".[೩] ಈ ರೀತಿಯಲ್ಲಿ ವಚನಕ್ಕೆ ವಿಶೇಷರ್ಥವನ್ನು ಕಲ್ಪಿಸಿಕೊಂಡು ಸಿದ್ಧರಾಮನು ತನ್ನ ವಚನಗಳನ್ನು ರಚಿಸಿದ್ದು ವಿಶೇಷವಾಗಿದೆ.

ಹೀಗೆ ಹತ್ತು–ಹಲವು ದೃಷ್ಟಿಕೋನಗಳಿಂದಾಗಿ ಸಿದ್ಧರಾಮನ ವಚನಗಳು ಓದುಗರ ಗಮನವನ್ನು ಸೆಳೆಯುತ್ತವೆ. ಸಾಮಾಜಿಕವಾಗಿ, ಧಾರ್ಮಿಕವಾಗಿ ಹಾಗೂ ಸಾಂಸ್ಕೃತಿಕ ಬದುಕಿನ ಆದರ್ಶಮಯ ಗುಣಧರ್ಮಕ್ಕನುಗುಣವಾಗಿ ವಿಶಿಷ್ಟಾರ್ಥವನ್ನು ಪಡೆದಿವೆ. ಐತಿಹಾಸಿಕ ನಂಬಿಕೆಯ ಅನುಸಾರ ಸಿದ್ಧರಾಮನು ೬೦೦೦ ವಚನಗಳನ್ನು ರಚಿಸಿದ್ದಾನೆಂಬ ತಿಳಿಯುತ್ತದೆ. ಆದರೆ ಅವೆಲ್ಲವೂ ಉಪಲಬ್ದವಾಗಿಲ್ಲ. ಅದೇನಿದ್ದರೂ ಈಗ ಸುಮಾರು ಎರಡುಸಾವಿರದವರೆಗೆ ಅವನ ವಚನಗಳು ಸಂಪಾದಿಸಲ್ಪಟ್ಟಿವೆ. ಸಿದ್ಧರಾಮನು ಬರೀ ವಚನಗಳನ್ನಲ್ಲದೇ 'ಸ್ತೋತ್ರ ತ್ರಿವಿಧಿ'ಗಳೆಂಬ ಪ್ರಕಾರದ ವಚನಗಳನ್ನು ರಚಿಸಿರುವುದು ಕಂಡುಬರುತ್ತದೆ. ಈ ಸಂಶೋಧನ ಅಧ್ಯಯನಕ್ಕೆ ಅವರ ಈ ಮುಖ್ಯ ವಚನಗಳನ್ನು ಮಾತ್ರ ಆಕರವಾಗಿರಿಸಿಕೊಳ್ಳಲಾಗಿದೆ. ಆದಾಗ್ಯೂ ಸಾಂದರ್ಭಿಕವಾಗಿ ಅವನ ಇನ್ನಿತರ ಪ್ರಕಾರದ ವಚನಗಳನ್ನು ಬಳಸಿಕೊಳ್ಳಲಾಗಿದೆ. ಅದರಲ್ಲೂ ಅವನ ವಚನಗಳಲ್ಲಿ ಹುದುಗಿರುವ 'ಅರಿವಿನ ಪರಿಕಲ್ಪನೆ'ಯನ್ನು ಪ್ರಮುಖ ಉದ್ದೇಶವನ್ನಾಗಿಸಿಕೊಂಡು ಈ ಸಂಶೋಧನ ಅಧ್ಯಯನವನ್ನು ಕೈಗೆತ್ತಿಕೊಳ್ಳಲಾಗಿದೆ.

೧೨ನೇ ಶತಮಾನದಲ್ಲಿ ಬಸವಣ್ಣನವರ ಸಮಕಾಲೀನರಾಗಿ ಬದುಕಿದ ಸಿದ್ಧರಾಮನು ಆ ಕಾಲದ ಶರಣರಲ್ಲಿ ಉಜ್ವಲ ತಾರೆಯಾಗಿ ಬೆಳಗಿದವನು. ಬಹುಮುಖದ ವ್ಯಕ್ತಿತ್ವ ಪಡೆದವನು. ಧರ್ಮ, ಸಮಾಜ, ದರ್ಶನ ಮತ್ತು ಸಾಹಿತ್ಯದ ಹಿನ್ನೆಲೆಯಲ್ಲಿ ಅವನು ರಚಿಸಿದ ವಚನಗಳ ಮಹತ್ವವನ್ನು ಪಡೆಯುತ್ತವೆ. ಅಷ್ಟೇಕೆ ಆ ವಚನಗಳ

ಮಾರ್ಮಿಕತೆ ಇಂದಿಗೂ ಪ್ರಸ್ತುತವೆನಿಸುತ್ತದೆ. ಜಿಡ್ಡುಗಟ್ಟಿದ ಅಂದಿನ ಸಾಮಾಜಿಕ ವ್ಯವಸ್ಥೆಯಲ್ಲಿ ಸಿದ್ಧರಾಮನು ಎತ್ತಿದ ಹತ್ತುಹಲವು ಪ್ರಶ್ನೆಗಳು ಅವನ ವಚನಗಳು ಅಭಿವ್ಯಕ್ತಿ ರೂಪವನ್ನು ಪಡೆದಿರುವುದೊಂದು ವಿಶೇಷವಾಗಿದೆ. ಈ ಹಿನ್ನೆಲೆಯಲ್ಲಿ ಪ್ರಾಸ್ತಾವಿಕವಾಗಿ ಈ ಕೆಳಗಿನ ವಚನವನ್ನು ಉದಾಹರಿಸಬಹುದು.

**ಭೂಷಣವುಳ್ಳ ಜಂಗಮವ ಭೂಪಾಲ ಪೂಜಿಸುವ;**
**ವೇಷವುಳ್ಳ ಜಂಗಮವ ವೇಶಿ ಪೂಜಿಸುವಳು;**
**ವೇಷಧಾರಿ ಜಂಗಮವ ಲೋಕವೆಲ್ಲ ಪೂಜಿಸುವುದು;**
**ಜ್ಞಾನವುಳ್ಳ ಜಂಗಮವನಾರು ಪೂಜಿಸರು ನೋಡಾ,**
**ಕಪಿಲಸಿದ್ಧ ಮಲ್ಲಿಕಾರ್ಜುನಾ**
**(ಸಿ.ವ.ಸಂ.ಪುಟ ೩೨೩)**

ಎಂಬಂತೆ ಸಮಾಜದಲ್ಲಿ ವೇಷ ಭೂಷಣಗಳಿಗೆ ಸಿಗುವ ಗೌರವ ನಿಜವಾದ ಜ್ಞಾನವನ್ನು ಹೊಂದಿದ ಜಂಗಮನಿನಿಗೆ ಸಿಗಲಾರದು, ಯಾರು ಕೂಡ ಅವನನ್ನು ಪೂಜಿಸಲಾರರೆಂಬ ಪ್ರಶ್ನೆಯನ್ನು ಸಿದ್ಧರಾಮನು ಹಾಕಿದ್ದು ಗಮನಾರ್ಹ ಅಂಶವಾಗಿದೆ

ಉಪಸಂಹಾರ

"ಅರಿವೇ ಗುರು" ಅರಿವೇ ಪರಬ್ರಹ್ಮ ಯೋಗಿಯಾದರೆ ನನ್ನಂತಾಗಬೇಕು ಎಂಬಂತೆ ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ 'ವಚನ' ಸಾಹಿತ್ಯಕ್ಕೂ ಅದರದೇ ಆದ ಮಹತ್ವವಿದೆ. ೧೨ನೇ ಶತಮಾನದಲ್ಲಿ ಆಂದೋಲನ ರೂಪದಲ್ಲಿ ಕಾಣಿಸಿಕೊಂಡ ಈ ಸಾಹಿತ್ಯ ಆ ಕಾಲದ ಸಾಮಾಜಿಕ ವ್ಯವಸ್ಥೆಯಲ್ಲಿನ ಹತ್ತು-ಹಲವು ರೀತಿಯ ಸ್ಥಿತ್ಯಂತರಗಳಿಗೆ ದಾರಿ ಮಾಡಿಕೊಟ್ಟಿತು. ಯಾಕೆಂದರೆ ಶಿವಶರಣರು ಬರಿ ಸಾಹಿತ್ಯ ರಚಿಸಬೇಕೆಂಬ ಮನೋಭಾವನೆಯಿಂದ ಬದುಕಿದವರಲ್ಲ. ಅದು ಅವರ ಉದ್ದೇಶವೂ ಆಗಿರಲಿಲ್ಲ. ಆದರೆ ಭಕ್ತಿಯ ಆವಿರ್ಭಾವದೊಂದಿಗೆ ಸಮಾಜದಲ್ಲಿನ ಅಂಕು-ಡೊಂಕುಗಳನ್ನು ತಿದ್ದುವುದರ ಮೂಲಕ ಒಂದು ಸುಂದರವಾದ ಸಮಾಜವನ್ನು ಕಟ್ಟಬೇಕೆಂಬ ಧ್ಯೇಯೋದ್ದೇಶದಿಂದ ಬದುಕಿದವರು. ಅದಕ್ಕಾಗಿ ಅವರು ಮೊದಲು ತಮ್ಮ ಆತ್ಮಶೋಧನೆ ಮಾಡಿಕೊಂಡರು. ತದನಂತರ ಆಂದೋಲನದ ರೂಪದಲ್ಲಿ ಸಮಾಜವನ್ನು ಓರಣಗೊಳಿಸಿದರು, ತಿದ್ದಿದರು. ಈ ಸಂದರ್ಭದಲ್ಲಿ ಶರಣರ ಬಾಯಿಂದ ಹೊರಹೊಮ್ಮಿದ ಮಾತುಗಳೇ ವಚನಗಳಾದವು. ಶಿವಶರಣರ 'ಮಾತು' ಬರಿ ಮಾತಾಗಿ ಉಳಿಯದೇ ಅದು 'ಸತ್ಯ'ದ ನೆಲೆಗಟ್ಟಿನಲ್ಲಿ ತನ್ನ 'ಅಸ್ಮಿತೆ'ಯನ್ನು ಪಡೆದು ಜನಮಾನಸದಲ್ಲಿ ಬೇರೂರಿತು.

ಲೌಕಿಕದಲ್ಲೇ ಅಲೌಕಿಕತೆಯನ್ನು ಸಾಧಿಸಿದ ಶರಣರು ಎಲ್ಲದರಲ್ಲೂ ಭಗವಂತನಿಗೆ ಶರಣಾಗಿ ಬದುಕಿದವರು. ಅವರಿಗೆ ಮರ್ತ್ಯ ಲೋಕವೆಂಬುದು ಕರ್ತಾರನ ಕಮ್ಮಟವಾಗಿತ್ತು. 'ಆಚಾರವೇ ಸ್ವರ್ಗ, ಅನಾಚಾರವೇ ನರಕ' ಎಂಬ ನಂಬಿಕೆಯಲ್ಲಿ ಅವರು ತಮ್ಮ ಬದುಕಿನ ಸಾಧನೆ-ಸಿದ್ಧಿಯನ್ನು ಕಂಡುಕೊಂಡರು. ಅಷ್ಟಲ್ಲದೇ ನಿಜವಾದ ಮಾನವನಲ್ಲಿ ಇರಬೇಕಾದ ಮೌಲ್ಯಗಳಾದ ಸತ್ಯ, ಸಮತೆ, ತ್ಯಾಗ, ದಾನ, ಶಾಂತಿ, ದಯೆ ಇವುಗಳನ್ನೇ ತಮ್ಮ ಬದುಕಿನ ತಳಹದಿಯನ್ನಾಗಿಸಿಕೊಂಡರು. 'ಸತ್ಯ ವಚನವ ನುಡಿಯಬಲ್ಲರೆ ಶರಣರೆಂಬೆನು,' 'ಸದಾಚಾರದಲ್ಲಿ ನಡೆಯಬಲ್ಲರೆ ಶರಣರೆಂಬೆನು', 'ಪುಣ್ಯದಂತೆ ಬಪ್ಪರು, ಸಸಜ್ಞಾನದಂತೆ ಇಪ್ಪರು' ಎಂಬಂತಹ ಮಾತುಗಳಂತೆ ಶಿವಶರಣರ ಬದುಕಿನ ನಿಲುವಾಗಿತ್ತು.

# ಮಹಾಮಾನವತಾವಾದಿ ಬಸವಣ್ಣನವರು

ಜಗದೀಶ ಮುಗಳಿ

೧೨ನೆಯ ಶತಮಾನವು 'ವಿಶ್ವಗುರು' ಎನಿಸಿದ, ಬಸವಣ್ಣನವರು ಜನಿಸಿದ ಯುಗ. ವಿಶ್ವಜ್ಯೋತಿ, ಭಕ್ತಿಭಂಡಾರಿ, ಯುಗಾವತಾರಿ, ಮಹಾಮಾನವತಾವಾದಿ ಬಸವಣ್ಣನವರ ಚಿಂತನೆಗಳು ಸಕಲ ಜನಾಂಗಕ್ಕೂ, ಸರ್ವಕಾಲಕ್ಕೂ ಸಲ್ಲುವಂಥವುಗಳಾಗಿವೆ. ಸಕಲ ಜೀವಾತ್ಮರಿಗೆ ಲೇಸನ್ನು ಬಯಸಿದ ಬಸವಣ್ಣನವರು ಕಲ್ಯಾಣ ಸಮಾಜವನ್ನು ನಿರ್ಮಿಸುವ ಕನಸು ಕಂಡವರು. ಆ ಮೂಲಕ ಕಲ್ಯಾಣ ರಾಷ್ಟ್ರ ನಿರ್ಮಾಣ ಮಾಡಲು ಪ್ರಯತ್ನಿಸಿದ ವಿಶ್ವಮಾನವರೂ ಹೌದು, ಮಹಾಮಾನವತಾವಾದಿಗಳೂ ಹೌದು. 'ಬಸವಣ್ಣ' ಎಂಬ ಹೆಸರಿನಲ್ಲಿ ಮಂತ್ರಶಕ್ತಿಯಿದೆ. ತಾರಕ ಶಕ್ತಿಯಿದೆ. ಅವರು ಜಾತಿವ್ಯವಸ್ಥೆಯ ಸಮಾಜವನ್ನು ಸುಧಾರಿಸಲು ಅರಿವಿನ ಆಂದೋಲನವನ್ನು ಹುಟ್ಟುಹಾಕುತ್ತಾರೆ. ಈ ಆಂದೋಲನವು ಸಮಗ್ರ ಕ್ಷೇತ್ರಗಳನ್ನು ಆವರಿಸಿಕೊಳ್ಳುತ್ತದೆ. ಅವರು ನಡೆಸಿದ ಸಾಮಾಜಿಕ ಕ್ರಾಂತಿಯ ವಸ್ತು ಸ್ವರೂಪವು (Revolutionary Content) ವಿಶ್ವಕಲ್ಯಾಣದ ವಿಚಾರಗಳನ್ನು ಒಳಗೊಂಡಿದೆ. ಅದರ ಮೂಲ ಉದ್ದೇಶವು ಸಕಲ ಬೇಧಭಾವಗಳನ್ನು ತೊಡೆದುಹಾಕಿ, ಮನುಷ್ಯರನ್ನು ಮನುಷ್ಯರಂತೆ ಕಾಣುವುದಾಗಿದೆ. "ಇವನಾರವ, ಇವನಾರವ, ಇವನಾರವನೆಂದೆನಿಸದಿರಯ್ಯ, ಇವ ನಮ್ಮವ, ಇವ ನಮ್ಮವ, ಇವ ನಮ್ಮವನೆಂದೆನಿಸಯ್ಯಾ"[೧] ಎನ್ನುತ್ತ ಸಕಲರಿಗೂ ಆತ್ಮವಿಶ್ವಾಸವನ್ನು ಮೂಡಿಸಿ, ಆತ್ಮಗೌರವದಿಂದ ಬದುಕುವ ಸುಮಾರ್ಗವನ್ನು ಬೋಧಿಸಿದ್ದಾರೆ. ಬಸವಣ್ಣನವರು ಸಕಲ ಮಾನವೀಯ ಮೌಲ್ಯಗಳ ಹರಿಕಾರರಾಗಿದ್ದಾರೆ. ಅವರು ೧೨ ನೆಯ ಶತಮಾನದಲ್ಲಿ ಸಮಾಜಕ್ಕೆ ತಿಳಿಸಿದ ಹಲವು ಚಿಂತನೆಗಳನ್ನು ಪ್ರಸ್ತುತ ವಿಶ್ವಸಂಸ್ಥೆಯ ಮಾನವ ಹಕ್ಕುಗಳ ಪಟ್ಟಿಯಲ್ಲಿ ಕಾಣಬಹುದು. ಜೊತೆಗೆ ನಮ್ಮ ಭಾರತ ದೇಶದ ರಾಜ್ಯನಿರ್ದೇಶಕ ತತ್ವಗಳಲ್ಲಿಯೂ ಕಾಣಬಹುದಾಗಿದೆ. 'ಎನ್ನಿಂದ ಕಿರಿಯರಿಲ್ಲ, ಶಿವಭಕ್ತರಿಂದ ಹಿರಿಯರಿಲ್ಲ' ಎಂದ ಬಸವಣ್ಣನವರು ಸಮಾಜಶಾಸ್ತ್ರಜ್ಞರೂ, ಅರ್ಥಶಾಸ್ತ್ರಜ್ಞರೂ, ರಾಜಕೀಯ ತಜ್ಞರೂ, ನೀತಿಶಾಸ್ತ್ರಜ್ಞರೂ, ವೈಜ್ಞಾನಿಕ ಚಿಂತಕರೂ, ಮನೋವಿಜ್ಞಾನಿಗಳೂ ಆಗಿ ಹಿರಿದಾದ ಸಾಧನೆ ಮಾಡಿದ್ದಾರೆ.

"ಜನಮನದ ಶಕ್ತಿ ಮೇಣವರಭಿಪ್ಸೆಯೆ ಮಹಾತ್ಮರಂ ತಪ್ಪದೆಮ್ಮಿಳೆಗೆ ಎಳೆತರ್ಪುದು ಕಣಾ"[೨] ಎಂದು ಕುವೆಂಪು ಅವರು 'ಶ್ರೀ ರಾಮಾಯಣ ದರ್ಶನಂ' ಮಹಾಕಾವ್ಯದಲ್ಲಿ ಹೇಳಿರುವ ಮಾತು ಬಸವಣ್ಣನವರಿಗೆ ಸಂಪೂರ್ಣ ಅನ್ವಯಿಸುತ್ತದೆ. ಹಿಂದಿನ ವಿಜಯಪುರ ಜಿಲ್ಲೆಯ ಬಸವನ ಬಾಗೇವಾಡಿಯು ಹನ್ನೆರಡನೆಯ ಶತಮಾನದಲ್ಲಿ ಇಂಗಳೇಶ್ವರ-ಬಾಗೇವಾಡಿ ಎಂಬ ಹೆಸರಿನಿಂದ ಖ್ಯಾತವಾಗಿತ್ತು. ಇವೆರಡೂ ಊರುಗಳೂ ಬೇರೆ ಬೇರೆಯಾದರೂ ಅವುಗಳನ್ನು ಅವಳಿ ನಗರಗಳಂತೆ ಗುರುತಿಸಲಾಗುತ್ತಿತ್ತು ಎನಿಸುತ್ತದೆ. ಮಾದರಸರ ಸತಿ ಮಾದಲಾಂಬಿಕೆಯ ಪುಣ್ಯಗರ್ಭದಲ್ಲಿ ಈ ಜಗಜ್ಯೋತಿ ಬಸವಣ್ಣನವರು ಬಾಗೇವಾಡಿಯಲ್ಲಿ ಜನಿಸುತ್ತಾರೆ. ವಿವಿಧ ವಿದ್ವಾಂಸರ ಅಭಿಪ್ರಾಯವನ್ನು ಅವಲೋಕಿಸಿ, ಅವರ ಜನನ ಕಾಲವನ್ನು ಕ್ರಿ.ಶ. ೧೧೩೧ ಎಂದು ಗುರುತಿಸಲಾಗಿದೆ. ಬಸವಣ್ಣನವರ ಬದುಕೆಂದರೆ ಸತತ ಸಾಧನೆಯ ಸೋಪಾನವಿದ್ದಂತೆ. ಅವರ ಬದುಕಿನಲ್ಲಿ ಆರು ಘಟ್ಟಗಳನ್ನು

ಮುಖ್ಯವಾಗಿ ಗುರುತಿಸಬಹುದು. ೧. ಬಾಗೇವಾಡಿಯಲ್ಲಿ ಜನಿಸಿ, ಅಕ್ಕಳಿಗಿಲ್ಲದ ಜನಿವಾರ ತನಗೂ ಬೇಡ ಎನ್ನುವ ಮೂಲಕ ಸಕಲ ತರತಮ ವಿಚಾರಗಳನ್ನು ನಿರಾಕರಿಸಿದ್ದು. ೨. ಕೂಡಲ ಸಂಗಮ ಕ್ಷೇತ್ರಕ್ಕೆ ಹೋಗಿ ಸಕಲ ವಿದ್ಯಾಭ್ಯಾಸವನ್ನು ಪಡೆದು, ಲೋಕಹಿತ ಚಿಂತಕರಾದುದು. ೩. ಲೋಕಕಲ್ಯಾಣಕ್ಕಾಗಿ ಮಂಗಳವೆಡೆಗೆ ಹೋಗಿ ಬಿಜ್ಜಳ ದೊರೆಯ ಆಡಳಿತದಲ್ಲಿ ಕರಣಿಕರಾಗಿ ಸೇವೆಯನ್ನು ಪ್ರಾರಂಬಿಸಿದ್ದು. ೪ ಬಿಜ್ಜಳ ಅರಸನ ಜೊತೆಗೆ ಕಲ್ಯಾಣ ಪಟ್ಟಣಕ್ಕೆ ಹೋಗಿ, ದಂಡಾಧೀಶರಾಗಿ, ಕಲ್ಯಾಣ ಪಟ್ಟಣವನ್ನು ಮಾನವ ಕಲ್ಯಾಣದ ಕ್ಷೇತ್ರವಾಗಿಸಿದ್ದು. ೫. ಕಲ್ಯಾಣದಲ್ಲಿ ಸಕಲ ಶರಣರ ಪಡೆಯನ್ನು ಕಟ್ಟಿ, ಶರಣ ಸಮುದಾಯದೊಂದಿಗೆ ಜಗತ್ತಿನ ಪ್ರಥಮ ಸಂಸತ್ತು ಎನಿಸಿದ 'ಅನುಭವ ಮಂಟಪ'ವನ್ನು ಸ್ಥಾಪಿಸಿ, ಸಕಲ ವಿಚಾರಗಳನ್ನು ವಿನಿಮಯಗೊಳಿಸಿಕೊಳ್ಳುತ್ತ ಸಾಮಾಜಿಕ ಆಂದೋಲನವನ್ನು ಹುಟ್ಟುಹಾಕಿದ್ದು. ೬. ಕೊನೆಗೆ ಕೂಡಲ ಸಂಗಮಕ್ಕೆ ಮರಳಿ ಐಕ್ಯರಾದದ್ದು. ಹನ್ನೆರಡನೆಯ ಶತಮಾನವು ರಾಜಕೀಯ, ಧಾರ್ಮಿಕ ಮತ್ತು ಸಾಮಾಜಿಕ ದೃಷ್ಟಿಯಿಂದ ಬಹಳ ಸಂಕೀರ್ಣವಾದುದು. ಈ ಶತಮಾನದಲ್ಲಿ ಕನ್ನಡ ನಾಡಿನಲ್ಲಿ ಆಳ್ವಿಕೆ ನಡೆಸಿದವರು ಕಲ್ಯಾಣದ ಕಳಚೂರ್ಯ ಮನೆತನದ ದೊರೆ ಬಿಜ್ಜಳ. ಆತನ ಆಸ್ಥಾನದಲ್ಲಿ ಭಂಡಾರದ ಮಂತ್ರಿಯಾದ ಬಸವಣ್ಣನವರು ಹಿಂದೂ ಧರ್ಮದ ವರ್ಣಾಶ್ರಮ ವ್ಯವಸ್ಥೆಯಿಂದ ಹುಟ್ಟಿಕೊಂಡ ಕುಲಭೇದ, ಅಸ್ಪೃಶ್ಯತೆ, ಲಿಂಗಭೇದ, ಜಾತಿ ಪದ್ಧತಿಯ ದೋಷಗಳ ನಿವಾರಣೆಗಾಗಿ ಸ್ವಾತಂತ್ರ್ಯ, ಸಮಾನತೆ, ಕಾಯಕ-ದಾಸೋಹ, ಆತ್ಮಗೌರವ ಮತ್ತು ಪ್ರಜಾಪ್ರಭುತ್ವ ತತ್ವಾಧಾರಿತ ಶರಣ ಧರ್ಮ ಸ್ಥಾಪಿಸುವ ಮೂಲಕ ಸಮಾಜೋ-ಧಾರ್ಮಿಕ ಕ್ಷೇತ್ರದಲ್ಲಿ ಅಪೂರ್ವ ಜಾಗ್ರತೆಗೈಯುತ್ತಾರೆ. ರಾಜರ ಆಸ್ಥಾನದಲ್ಲಿ ಕೇವಲ ಪಂಡಿತರಿಂದ ರಚನೆಯಾಗುತಿದ್ದ ಚಂಪೂ ಕಾವ್ಯಗಳ ಬದಲಾಗಿ ಜನರಾಡುವ ಸರಳಗನ್ನಡ ಭಾಷೆಯಲ್ಲಿ ಶರಣರ ಅನುಭಾವದಿಂದ ವಚನ ಸಾಹಿತ್ಯವು ಸೃಷ್ಟಿಯಾಯಿತು.

ಆಧುನಿಕ ಚಿಂತಕರ ಚಿಂತನೆಗಳ ಬೀಜಾಂಕುರಗಳು ಬಸವಣ್ಣನವರ ವಚನಗಳಲ್ಲಿ ಕಂಡುಬರುತ್ತವೆ. ಅವರ ಚಿಂತನೆಗಳ ವಿಚಾರ ತರಂಗಗಳು ಕಾಲ, ದೇಶ, ಜನಾಂಗಗಳನ್ನು ಮೀರಿ ಇಡೀ ವಿಶ್ವವನ್ನೆಲ್ಲ ಆವರಿಸಿಕೊಳ್ಳಬಲ್ಲವು. ಬಸವಣ್ಣನವರ ಜೀವನವೆಂದರೆ ಲೋಕದ ಸಕಲ ಜನತೆಯ ಲೇಸಿನ ಜೀವನವೆಂದೇ ಅರ್ಥ. 'ಬಸವಣ್ಣನ ನೆನಹು ಸುಖಸಮುದ್ರವಯ್ಯಾ' ಎನ್ನುತ್ತಾರೆ ಅಲ್ಲಮಪ್ರಭುದೇವರು. ಬಸವಣ್ಣನವರನ್ನು 'ಯುಗದ ಉತ್ಸಾಹ' ಎನ್ನಲಾಗುತ್ತದೆ. ಬಸವಣ್ಣನವರ ಕುರಿತು ಡಾ. ಪಿ. ಬಿ. ದೇಸಾಯಿ ಅವರು ಮೌಲ್ಯಯುತವಾದ ವಿಚಾರಗಳನ್ನು ಹೇಳಿರುವರು. "It is clear as the day that Basavesvara was a historical personage. He lived, preached, practiced and achieved. His personality, religion and philosophy have exercised a powerful influence through centuries on the generations of men to the present day.[3] ಬಸವಣ್ಣನವರ ತತ್ತ್ವಗಳು ಮತ್ತು ಸಿದ್ಧಾಂತಗಳು ಸರ್ವಕಾಲಕ್ಕೂ ಅನ್ವಯಿಸುತ್ತವೆ. ವಿಲ್‌ಡ್ಯೂರಾಂಟ ತನ್ನ Story of philosophy ಎಂಬ ಗ್ರಂಥದಲ್ಲಿ "Revolution is precipitated result of accumulated wrongs" Cಂದರೆ "ಶೇಖರಗೊಳ್ಳುತ್ತ ಹೋದ ಹಲವಾರು ಅನ್ಯಾಯಗಳ ಪರ್ಯಾಪ್ತ ಸ್ಥಿತಿಯ ಪರಿಣಾಮವೇ ಕ್ರಾಂತಿ" ಎಂಬ ಮಾತು ತುಂಬಾ ಧ್ವನಿಪೂರ್ಣವಾದುದು. ಹನ್ನೆರಡನೆಯ ಶತಮಾನದ



ಕಾಲಘಟ್ಟವು ಸಂಕೀರ್ಣ ಸ್ವರೂಪದ್ದು. ಜನರು ಹಲವು ಸಾಮಾಜಿಕ, ಸಾಂಸ್ಕೃತಿಕ ಬಿಕ್ಕಟ್ಟುಗಳನ್ನು ಎದುರಿಸಿದ್ದು ಈ ಕಾಲದಲ್ಲಿಯೇ. ಬಸವಣ್ಣನವರು ಸಾಮಾಜದಲ್ಲಿ ಬೇರೂರಿದ್ದ ಮೂಢನಂಬಿಕೆ, ಅಸ್ಪೃಶ್ಯತೆ, ಕಂದಾಚಾರ, ಅನಾಚಾರ, ಸ್ವರ್ಗ, ನರಕ, ದೇವರು ಹಾಗೂ ಧರ್ಮದ ಹೆಸರಿನಲ್ಲಿ ನಡೆಯುತ್ತಿದ್ದ ಪ್ರಾಣಿಬಲಿ ಪದ್ಧತಿ, ದೇವದಾಸಿ ಪದ್ಧತಿ, ಇವೇ ಮೊದಲಾದ ಅನೈತಿಕ ಆಚರಣೆಗಳನ್ನು ಖಂಡಿಸುತ್ತಾರೆ. 'ವೇದಕ್ಕೆ ಒರೆಯ ಕಟ್ಟುವೆ, ಶಾಸ್ತ್ರಕ್ಕೆ ನಿಗಳವನಿಕ್ಕುವೆ, ತರ್ಕದ ಬೆನ್ನ ಬಾರನೆತ್ತುವೆ, ಆಗಮದ ಮೂಗ ಕೊಯಿವೆ' ಎನ್ನುತ್ತಾರೆ. ಸತಿಪದ್ಧತಿ, ತುಱುಗೋಳ್, ಲೆಂಕವಾಳಿ, ಜೋಳವಾಟಿ, ಕೀಳ್ಗುಂಟೆ, ವೇಳೆವಾಳಿಗಳಂಥ ಆತ್ಮಬಲಿದಾನ ಇವೇ ಮೊದಲಾದ ಮನುಷ್ಯಬಲಿ ಪದ್ಧತಿಗಳನ್ನು ಕೂಡ ವಿರೋಧಿಸಿದ್ದು ಕಂಡುಬರುತ್ತದೆ.

**"ದೇವಲೋಕ ಮರ್ತ್ಯಲೋಕವೆಂಬುದು ಬೇರಿಲ್ಲ ಕಾಣಿರೋ!**
**ಸತ್ಯವ ನುಡಿವುದೆ ದೇವಲೋಕ, ಮಿಥ್ಯವ ನುಡಿವುದೆ ಮರ್ತ್ಯಲೋಕ**
**ಆಚಾರವೆ ಸ್ವರ್ಗ, ಅನಾಚಾರವೆ ನರಕ**
**ಕೂಡಲಸಂಗಮದೇವಾ ನೀವೆ ಪ್ರಮಾಣು"[೪]**

ಪ್ರಸ್ತುತ ಆಧುನಿಕ ಕಾಲಘಟ್ಟದ ಜಾಗತಿಕ ಸಂದರ್ಭದಲ್ಲಿ ಖಾಸಗೀಕರಣ, ನಗರೀಕರಣ, ಉದಾರೀಕರಣಗಳು ಹಲವು ಸಮಸ್ಯೆಗಳನ್ನು ಉಂಟುಮಾಡಿವೆ. ಜಾಗತೀಕರಣದಿಂದ ವಿಶ್ವವೇ ಒಂದು ಕುಟುಂಬವೆನಿಸಿದರೂ ವಿವಿಧ ಮತ, ಪಂಥ, ಧರ್ಮ, ಜಾತಿ, ಲಿಂಗ ತರತಮಗಳು, ಭ್ರಷ್ಟಾಚಾರ, ಅನಾಚಾರ, ಅತ್ಯಾಚಾರ, ಕಳ್ಳತನ, ಸುಳ್ಳು, ಮೋಸ, ವಂಚನೆ, ಕೊಲೆ, ಸುಲಿಗೆ, ಅಂತರಂಗ-ಬಹಿರಂಗ ಕಲ್ಮಶಗಳಿಂದ ಸಮಾಜವು ಹಲವು ಬಿಕ್ಕಟ್ಟುಗಳನ್ನು ಎದುರಿಸುತ್ತಿದೆ. ಹೀಗಾಗಿ ಮಾನವ ಜನಾಂಗದ ಭವಿಷ್ಯದ ಬಗ್ಗೆ ತೀವ್ರ ಆತಂಕಗಳು ಮನೆಮಾಡಿರುವ ಸಂದರ್ಭ ಇದಾಗಿದೆ. ಬಸವಣ್ಣನವರ ಚಿಂತನೆಗಳು ಇಂಥ ಬಿಕ್ಕಟ್ಟುಗಳಿಗೆ ಹಲವು ಪರಿಹಾರಗಳನ್ನು ಒದಗಿಸಬಲ್ಲವು. "ಮರ್ತ್ಯಲೋಕವೆಂಬುದು ಕರ್ತಾರನ ಕಮ್ಮಟವಯ್ಯಾ, ಇಲ್ಲಿ ಸಲ್ಲುವರು, ಅಲ್ಲಿಯೂ ಸಲ್ಲುವರಯ್ಯಾ. ಇಲ್ಲಿ ಸಲ್ಲದವರು ಅಲ್ಲಿಯೂ ಸಲ್ಲರು ಕೂಡಲಸಂಗಮದೇವಾ"[೫], 'ಮಾಡಿದೆನೆಂಬುದು ಮನದಲ್ಲಿ ಹೊಳೆದಡೆ, ಏಡಿಸಿ ಕಾಡಿತ್ತು ಶಿವನ ಡಂಗುರ' ಎಂಬ ವಚನಗಳು ವ್ಯಕ್ತಿಯ ಅಹಂಕಾರವನ್ನು ನಿರಸನಗೊಳಿಸಬಲ್ಲವು. ಇಂಥ ಅಮೂಲ್ಯವಾದ ಅವರ ವಚನಗಳು ಜೀವಕಳೆಯಿಂದ ಕೂಡಿದ್ದು, ಗೃಹ್ಯಸೂತ್ರಗಳು, ಧರ್ಮಸೂತ್ರಗಳು, ಆಚಾರ ವ್ಯವಹಾರಗಳು, ದೇವರು, ಭಕ್ತಿ, ಜ್ಞಾನ, ನೀತಿ, ಸಾಮಾಜಿಕ ಬದ್ಧತೆ, ಸ್ತ್ರೀಯರ ಸ್ಥಾನಮಾನ ಮೊದಲಾದ ವಿಚಾರಗಳಿಂದ ಸಮೃದ್ಧವಾಗಿವೆ. ವಿವಿಧ ವಿದ್ವಾಂಸರು ಶರಣರ ವಚನ ಸಾಹಿತ್ಯದ ಕುರಿತು "ಒಂದರಗಳಿಗೆ ಶರಣರ ವಚನಗಳ ಅಭ್ಯಾಸ ಮಾಡಿದರೆ ಸಾಕು. ಪರವಸ್ತುವಿನ ಸಾಕ್ಷಾತ್ಕಾರವಾಗುತ್ತದೆ."[೬] "ಶರಣರ ಪ್ರಭಾವ ಈ ನೆಲದ ಜೀವಂತ ತೊರೆಯಾಗಿ ಹರಿದ ಕಾರಣ, ಅವರ ಚರಿತ್ರೆ ಪ್ರಾಂತಗಳಲ್ಲಿ ಪ್ರವಹಿಸಿ, ಗ್ರಾಮಗಳಲ್ಲಿ ವ್ಯಾಪಿಸಿ, ವ್ಯಕ್ತಿವ್ಯಕ್ತಿಗಳ ಹೃದಯ ಹೊಲವನ್ನು ಹಸಿಗೊಳಿಸಿ ಮುನ್ನಡೆಯಿತು. ಹೀಗಾಗಿ ಒಂದೊಂದು ಪ್ರಾಂತ ಗ್ರಾಮ ವ್ಯಕ್ತಿಗಳು ತಮತಮಗೆ ತೃಪ್ತಿಯಾಗುವ ರೀತಿಯಲ್ಲಿ ಶರಣರನ್ನು ಕೀರ್ತಿಸಿದರು."[೭] ಎನ್ನುತ್ತಾರೆ. ಬಸವಣ್ಣನವರು ಪ್ರಭುತ್ವದ ಅಡಿಯಲ್ಲಿ ದಂಡಾಧೀಶರಾಗಿ, ಕಾಯಕವನ್ನು ಕೈಗೊಂಡರೂ ನಿರಂಕುಶಮತಿಗಳಾಗಿ, ಪ್ರಭುತ್ವದ ಅಂಕುಶದಾಚೆ ಜನತೆಯ ಒಳಿತಿಗಾಗಿ ಕಾರ್ಯ ಕೈಗೊಂಡದ್ದು ಅವರ ಮಹತ್ಸಾಧನೆಯಾಗಿದೆ. "ಬಸವಣ್ಣನ ವಚನಗಳ ಆಧಾರದಿಂದ

ಹೇಳುವುದಾದರೆ, ಆತ್ಮವಿಮರ್ಶೆಯಲ್ಲಿ ತೊಡಗಿರುವ ಆತನು ಮಾನವಾತೀತನಾಗದೆ, ದೇವತ್ವ ಮನುಷ್ಯತ್ವಗಳು ಸಂಧಿಸುವ ಸ್ಥಾನದಲ್ಲಿ ನಿಂತಿದ್ದಾನೆ. ಆತನ ವಚನಗಳು ಜ್ಞಾನಜ್ಯೋತಿಯ ಶುಭ್ರಕಾಂತಿಯಿಂದ ತೊಳಗಿ ಬೆಳಗುತ್ತವೆ."[೮] 'ಸದಾಚಾರ ಸದ್ಭಕ್ತಿಯಿಲ್ಲದವರನೊಲ್ಲೆನಯ್ಯಾ ಅವರಾರಾಧನೆ ದಂಡ' ಎನ್ನುತ್ತಾರೆ.

ಹರಿಹರನ 'ಬಸವರಾಜ ದೇವರ ರಗಳೆ', ಭೀಮಕವಿಯ 'ಬಸವ ಪುರಾಣ', ಸಿಂಗಿರಾಜನ 'ಅಮಲ ಬಸವರಾಜ ಚಾರಿತ್ರ್ಯ', ಷಡಕ್ಷರ ಕವಿಯ 'ಬಸವರಾಜ ವಿಜಯಂ', ಪಾಲ್ಕುರಿಕೆ ಸೋಮನಾಥನ 'ಬಸವ ಪುರಾಣಂ' ಮೊದಲಾದ ಕವಿಗಳ ಕೃತಿಗಳು ಬಸವಣ್ಣನವರ ಜೀವನ ಸಾಧನೆಗಳನ್ನು ತಿಳಿಸುತ್ತವೆ. ಆಧುನಿಕ ಸಂದರ್ಭದಲ್ಲಿ ವಚನ ಪಿತಾಮಹರೆಂದು ಪ್ರಸಿದ್ಧರಾದ ಡಾ. ಫ. ಗು. ಹಳಕಟ್ಟಿ, ಪ್ರೋ. ಎಸ್. ಎಸ್. ಬಸವನಾಳ, ಡಾ. ಆರ್. ಸಿ. ಹಿರೇಮಠ, ಡಾ. ಎಂ. ಎಂ. ಕಲಬುರ್ಗಿ, ಡಾ. ಎಲ್. ಬಸವರಾಜು, ಡಾ. ಎಚ್. ತಿಪ್ಪೇರುದ್ರಸ್ವಾಮಿ ಮೊದಲಾದ ವಿದ್ವಾಂಸರು ಶರಣ ವಚನಗಳನ್ನು ಸಂಗ್ರಹಿಸಿ, ಸಂಪಾದಿಸಿ, ಸಂಸ್ಕರಿಸಿ ಪ್ರಕಟಿಸಿದ್ದಾರೆ. ವಚನ ಸಾಹಿತ್ಯದ ಕುರಿತು ವಿಸ್ತೃತವಾದ ವ್ಯಾಖ್ಯಾನಗಳನ್ನು ಬರೆದು ಪ್ರಕಟಿಸಿರುವರು. ಹೀರೆಮಲ್ಲೂರ ಈಶ್ವರನ್, ಉತ್ತಂಗಿ ಚೆನ್ನಪ್ಪ, ಕುಮಾರ ಕಕ್ಕಯ್ಯ, ಅ. ನ. ಕೃಷ್ಣರಾವ್, ಗುರುಲಿಂಗ ಕಾಪ್ಸೆ, ಗಂಗಮ್ಮ ಸತ್ಯಂಪೇಟ, ವೀರಣ್ಣ ರಾಜೂರ, ಎಸ್. ಆರ್. ಗುಂಜಾಳ, ಎಚ್. ಡಿ. ಚಂದನಗೌಡರ, ಚಂದ್ರಶೇಖರ ವಸ್ತ್ರದ, ಜಚನಿ, ದೇ. ಜವರೇಗೌಡ, ಬಿ. ಸಿ. ಜವಳಿ, ಪ್ರಭುಶಂಕರ, ಸಿ. ಪಿ. ಪ್ರಭುಸ್ವಾಮಿಮಠ, ಸಿದ್ರಾಮಪ್ಪ ಪಾವಟೆ, ಬಿ. ಪುಟ್ಟಸ್ವಾಮಯ್ಯ, ಬಸವರಾಜ ಸಬರದ, ಮಾತೆ ಮಹಾದೇವಿ, ಟಿ. ಆರ್. ಮಹಾದೇವಯ್ಯ, ಲಿಂಗಣ್ಣ ಸತ್ಯಂಪೇಟೆ, ಎಂ. ಆರ್. ಶ್ರೀನಿವಾಸಮೂರ್ತಿ, ಆರ್. ಆರ್. ದಿವಾಕರ, ತಪೋವನ ಕುಮಾರಸ್ವಾಮಿಗಳು, ಸಿದ್ದಯ್ಯ ಪುರಾಣಿಕ, ಹರ್ಡೇಕರ ಮಂಜಪ್ಪ, ಡಾ. ಎಂ. ಚಿದಾನಂದ ಮೂರ್ತಿ ಮೊದಲಾದ ವಿದ್ವಾಂಸರು ಬಸವಣ್ಣನವರ ವ್ಯಕ್ತಿತ್ವವನ್ನು ಅನೇಕ ರೀತಿಯಲ್ಲಿ ವಿವರಿಸಿದ್ದಾರೆ. ಕುವೆಂಪು, ಡಾ. ಜಿ. ಎಸ್. ಶಿವರುದ್ರಪ್ಪ, ಡಾ. ಸಿದ್ಧಯ್ಯ ಪುರಾಣಿಕ, ಶಾಂತರಸ, ಚೆನ್ನವೀರ ಕಣವಿ, ಶರಣಪ್ಪ ಗುಡದಿನ್ನಿ ಮೊದಲಾದ ಕವಿಗಳು ಬಸವಣ್ಣನವರ ಮೇಲೆ ಕವಿತೆಗಳನ್ನು ರಚಿಸಿದ್ದಾರೆ. ಇಪ್ಪತ್ತನೆಯ ಶತಮಾನದ ಕನ್ನಡದ ಮಹಾಕವಿ; ರಾಷ್ಟ್ರಕವಿಗಳೆಂದು ಪ್ರಸಿದ್ಧರಾದ ಶ್ರೀ ಕುವೆಂಪು ಅವರು ಬಸವಣ್ಣನವರ ವಚನಗಳನ್ನೋದಿ ಪ್ರಭಾವಿತರಾಗಿ, ತಮ್ಮ ಒಂದು ಕವಿತೆಯಲ್ಲಿ ಬಸವಣ್ಣನವರ ಉಜ್ವಲ ವ್ಯಕ್ತಿತ್ವನ್ನು ಕಡೆದು ಕೃತಾರ್ಥರಾಗಿದ್ದಾರೆ:

**"ಕಾರ್ತಿಕದಕತ್ತಲಲಿ ಆಕಾಶದೀಪವಾಗಿ ನೀ ಬಂದೆ,**
**ಬಟ್ಟೆಗೆಟ್ಟವರಿಗೊಂದುದೊಂದಿದಿಕ್ಕಾಗಿ**
**ಎಂಟು ಶತಮಾನಗಳ ಹಿಂದೆ,**
**ಅಗ್ನಿಖಡ್ಗವನಾಂತ ಓ ಆಧ್ಯಾತ್ಮಕ್ರಾಂತಿವೀರಾ**
**ದೇವದಯೆಯೊಂದು ಹೇ ಧೀರಾವತಾರ,**
**ಶ್ರೀ ಬಸವೇಶ್ವರಾ!..."[೯]**

ಮೌಲಿಕ ನುಡಿಕಾಣಿಕೆ ಇದು! ಕವಿ ಕುವೆಂಪು ಅವರ ಕಡೆದಿಟ್ಟ ಬಸವಣ್ಣನವರ ಕುರಿತಿರುವ ಈ ಕವಿತೆ ಎಲ್ಲ ಮನುಜರಿಗೆ ನಿರಂತರ ಚಿರಂತನ ಸ್ಫೂರ್ತಿಯ ಸೆಲೆಯಾಗಿದೆ. ಡಾ. ಎಂ. ಎಂ. ಕಲಬುರ್ಗಿಯವರು "ಜಾಗತಿಕ ಇತಿಹಾಸದಲ್ಲಿ ಶಿವಶರಣದೊಂದು ವಿನೂತನಯುಗ.., ಶರಣಪ್ರಪಂಚದ ವಸಂತಕಾಲ ಬಸವಯುಗ."[೧೦] ಎಂದಿದ್ದಾರೆ.



"ಬಸವಣ್ಣನ ವ್ಯಕ್ತಿತ್ವ ಎಷ್ಟು ಹಿರಿಯದೋ ಅಷ್ಟು ಮಾನವೀಯ. ಅದರ ಸ್ಪಂದನವನ್ನೂ ಹೋರಾಟವನ್ನು ನಾವು ಅರ್ಥಮಾಡಿಕೊಂಡು ಅನುಭವಿಸಬಲ್ಲೆವು. ಅವನ ಆರ್ತಭಕ್ತಿ, ಕರ್ಮಜೀವನದ ತೊಡಕು, ಸಮಾಜದೂಷಣೆ ಎಲ್ಲವೂ ಒಂದು ಬೆಳೆಯುತ್ತಲಿರುವ, ಪ್ರತಿಕೂಲ ಪರಿಸ್ಥಿತಿಯೊಡನೆ ಹೋರಾಡುತ್ತ, ಏರುತ್ತಲಿರುವ ಮಹಾಜೀವನದ ಸಹಜ ರಮ್ಯವಾದ ಅಭಿವ್ಯಕ್ತಿ. ಈ ಸೂತ್ರವನ್ನು ಮನದಂದು ಅವನ ವಚನಗಳನ್ನು ಓದಿದರೆ ಅವನ ವಿಕಾಸಶೀಲವಾದ ಮಹಾವ್ಯಕ್ತಿತ್ವ, ಅದನ್ನು ಪರಿಪರಿಯಾಗಿ ಒಡಮೂಡಿಸಿದ ವಚನಸಂಪತ್ತಿ ಇವನ್ನು ಅರಿತುಕೊಳ್ಳಬಹುದು."[೧೧] ಎನ್ನಲಾಗುತ್ತದೆ. ದೇಜಗೌ ಅವರು ಬಸವಣ್ಣನವರ ಕ್ರಾಂತಿಯ ವಿಚಾರಗಳನ್ನು ಕುರಿತು "ಅವರು ನಡೆಸಿದ ಧಾರ್ಮಿಕ ಕ್ರಾಂತಿಯು ವ್ಯಾಪಕತೆಯಲ್ಲಿ ಮಾರ್ಟಿನ್ ಲೂಥರನ ಕ್ರಾಂತಿಯನ್ನು ಮೀರಿಸುತ್ತದೆ. ಮಾರ್ಕ್ಸನ ವೈಜ್ಞಾನಿಕ ಸಮಾಜವಾದದ ಕನಸನ್ನು ಮೊದಲು ಕಂಡವರು ಬಸವಣ್ಣನವರು; ಅಷ್ಟೇ ಅಲ್ಲ, ಪ್ರೇಮಾಹಿಂಸೆಗಳ ತಳಹದಿಯ ಮೇಲೆ ರಚನೆಗೊಳ್ಳಬೇಕೆಂಬ ಅವರ ಸಮಾಜವಾದ ಸಕಲ ಜೀವಾವಳಿಯ ಲೇಸನ್ನು ದೃಷ್ಟಿಯಲ್ಲಿರಿಸಿಕೊಂಡಿದೆ; ಭೂದಾನ ಶ್ರಮದಾನಾದಿ ಸರ್ವದಾನಗಳನ್ನೂ ಒಳಗೊಳ್ಳುತ್ತದೆ. ಅವರ ಸರಳ ಜೀವನದ ಕಲ್ಪನೆ ಸಾರಳ್ಯಕ್ಕಿಂತಲೂ ಸರಳ ಮಾತ್ರವಲ್ಲ, ಥೋರೋ ಟಾಲ್‌ಸ್ಟಾಯ್ ಓವೆನ್ ಮೊದಲಾದ ವಿಚಾರವಂತರ ಕಲ್ಪನೆಯನ್ನೂ ಮೀರಿಸುತ್ತದೆ. ಸಾಂಸ್ಕೃತಿಕ ಕ್ರಾಂತಿ ರಾಜಕೀಯ ಕ್ರಾಂತಿಗೆ ಅಥವಾ ಭದ್ರತೆಗೆ ಅಡಿಗಲ್ಲಾಗಬೇಕೆಂಬ ತತ್ವವನ್ನು ಜಗತ್ತಿನ ಹಲವು ಪ್ರವಾದಿಗಳಿಗಿಂಥ ಮುಂಚೆ ಪ್ರತಿಪಾದಿಸಿದವರು ಬಸವಣ್ಣನವರು."[೧೨] ಎನ್ನುವ ಮಾತುಗಳು ಅರ್ಥಪೂರ್ಣವಾಗಿವೆ.

ಪಾಶ್ಚಿಮಾತ್ಯದ ಕೆಲವು ವಿದ್ವಾಂಸರಲ್ಲಿ ಬಸವಣ್ಣನವರ ವಿಚಾರಧಾರೆಗಳನ್ನು ತಮ್ಮ ಕೃತಿಗಳಲ್ಲಿ ತಿಳಿಸಿರುವುದು ಕಂಡುಬರುತ್ತದೆ. ಅಂಥವರಲ್ಲಿ ಬ್ರಿಟಿಷ್ ಸರಕಾರದಲ್ಲಿ ತೆಲಗು ಪ್ರದೇಶದಲ್ಲಿ ಸೇವೆಯಲ್ಲಿ ಸಿ. ಪಿ. ಬ್ರೌನ್ ಅವರು 'ಜಂಗಮರ ಮತ, ಆಚಾರಗಳು ಮತ್ತು ಸಾಹಿತ್ಯ ಕುರಿತು ಪ್ರಬಂಧ' (ಅನು. ಪ್ರೋ. ಜಿ. ಬಿ. ಸಜ್ಜನ), ಬಾಸೆಲ್ ಮಿಶನ್ನಿನ ಪ್ರೊಟೆಸ್ಟಂಟ ಧರ್ಮೋಪದೇಶಕನಾದ ರೆ. ಜಿ. ವುರ್ಥ ಅವರು ಭೀಮಕವಿಯ ಬಸವಪುರಾಣವನ್ನು ಜರ್ಮನ್ ಭಾಷೆಗೆ, ನಂತರ ಆಂಗ್ಲ ಭಾಷೆಗೆ ಅನುವಾದ ಮಾಡುತ್ತಾರೆ. ಭಾರತದ ಜಿಲ್ಲಾ ಗೇಝೆಟಿಯರುಗಳನ್ನು ಸಿದ್ಧಪಡಿಸಿದ ಎಡ್ಗರ ಥರ್ಸ್ಟನ್, ಬಿ. ಎಲ್ ರೈಸ್, ಆರ್. ಈ. ಎಂಥೋವನ್ ಮುಂತಾದವರು ಬಸವಣ್ಣನವರ ಅಷ್ಟಾವರಣ, ಪಂಚಾಚಾರ, ಷಟ್‌ಸ್ಥಲಗಳ ಬಗೆಗೆ ವಿವರಿಸಿರುವರು. ಸರ್. ಜೇಮ್ಸ ಕ್ಯಾಂಬೆಲ್ ಮತ್ತು ಅರ್ಥರ್ ಮೈಲ್ಸ್ ಅವರು ಬಸವಣ್ಣನವರ ಕುರಿತು ವ್ಯಕ್ತಪಡಿಸಿದ ವಿಚಾರಗಳು ಮಹತ್ವಪೂರ್ಣವಾದವುಗಳಾಗಿವೆ. "ಬಸವಣ್ಣನವರ ಕುರಿತು ಪೌರಾಣಿಕ ಕಥೆ ಏನೇ ಹೇಳಲಿ; ಅವನು ಭಾರತ ದೇಶದ ಮೊಟ್ಟಮೊದಲ ಸ್ವತಂತ್ರ ವಿಚಾರವಾದಿ ಆಗಿದ್ದನೆಂಬ ವಿಚಾರ ಸ್ಪಷ್ಟವಾಗಿದೆ. ಅವನನ್ನು ಭಾರತ ದೇಶದ ಲೂಥರನೆಂದು ಕರೆಯಬಹುದು."[೧೩] ಎಂದಿದ್ದಾರೆ ಅರ್ಥರ್ ಮೈಲ್ಸ್. ಅದೇ ರೀತಿ ಕೆ. ವಿ. ವಲೆಬಿಲ್, ಮಾಯಿಕೇಲ್ ಆರ್. ಬ್ಲೇಕ್, ಡೇವಿಡ್ ಎನ್. ಲೊರೆಂಜ್ ಮೊದಲಾದ ಪಾಶ್ಚಿಮಾತ್ಯ ವಿದ್ವಾಂಸರು ಬಸವಣ್ಣನವರ ವಿಚಾರಧಾರೆಗಳನ್ನು ಕುರಿತು ಚರ್ಚಿಸಿದ್ದು ಕಂಡುಬರುತ್ತದೆ.

**"ಸಾರ: ಸಜ್ಜನರ ಸಂಗವ ಮಾಡುವುದು,**
**ದೂರ: ದುರ್ಜನರ ಸಂಗ ಬೇಡವಯ್ಯಾ.**
**ಆವ ಹಾವಾದಡೇನು? ವಿಷವೊಂದೆ**

**ಅಂತವರ ಸಂಗ ಬೇಡವಯ್ಯ.**
**ಅಂತರಂಗ ಶುದ್ಧವಿಲ್ಲದವರ ಸಂಗವು**
**ಸಿಂಗಿ, ಕಾಳಕೂಟ ವಿಷವೊ, ಕೂಡಸಂಗಯ್ಯಾ."[೧೪]**

ಸಜ್ಜನರ, ಅಂತರಂಗ ಶುದ್ಧವುಳ್ಳವರ ಸಂಗವು ಬಹಳ ಮುಖ್ಯವಾದುದು. ಅದು ವ್ಯಕ್ತಿಯನ್ನು ಸುಪಥದಲ್ಲಿ ನಡೆಯುವಂತೆ ಮಾಡುತ್ತದೆ. ಬಸವಣ್ಣನವರು ಆಚಾರಕ್ಕೆ ಬಹಳ ಪ್ರಶಾಸ್ತ್ಯ ಕೊಟ್ಟಿರುವುದು ಕಂಡುಬರುತ್ತದೆ. ಆ ಮೂಲಕ ನೈತಿಕ ನೆಲೆಗಟ್ಟಿನಲ್ಲಿ ಬದುಕನ್ನು ಸುಂದರಗೊಳಿಸಿಕೊಳ್ಳುವ ಸುಮಾರ್ಗವನ್ನು ಸೂಚಿಸಿದ್ದಾರೆ. 'ದೇಹವನ್ನು ದೇಗುಲವಾಗಿಸಿದ' ಬಸವಣ್ಣನವರ ಚಿಂತನೆಯು ಲೋಕೋತ್ತರವಾದುದು. ಇಡೀ ವಿಶ್ವದಲ್ಲಿಯೇ ಬಸವಣ್ಣನವರು ಮಾತ್ರ ಇಂಥ ಚಿಂತನೆ ಮಾಡಿದ ಮಹಾಮಾನವತಾವಾದಿ. ಮನುಷ್ಯನ ದೇಹವನ್ನು ದೈವತ್ವಗೊಳಿಸಿದ್ದಾರೆ. ತನ್ನನ್ನು ತಾನು ಅರಿತ ಜೀವನು ತಾನೇ ದೇವನಾಗುವ ಪರಿಕಲ್ಪನೆ ಹೊಚ್ಚಹೊಸತಾಗಿದೆ.

**"ದಯವಿಲ್ಲದ ಧರ್ಮವದೇವುದಯ್ಯಾ?,**
**ದಯವೇ ಬೇಕು ಸಕಲಪ್ರಾಣಿಗಳೆಲ್ಲರಲ್ಲಿ,**
**ದಯವೇ ಧರ್ಮದ ಮೂಲವಯ್ಯಾ,**
**ಕೂಡಲಸಂಗಯ್ಯನಂತಲ್ಲದೊಲ್ಲನಯ್ಯಾ."[೧೫]**

'ದೇವನೊಬ್ಬ, ನಾಮ ಹಲವು', 'ಆಚಾರವೇ ಸ್ವರ್ಗ, ಅನಾಚರವೇ ನರಕ', 'ಲೋಕದ ಡೊಂಕ ನೀವೇಕೆ ತಿದ್ದುವಿರಿ? ನಿಮ್ಮ ನಿಮ್ಮ ತನುವ ಸಂತೈಸಿಕೊಳ್ಳಿ, ನಿಮ್ಮ ನಿಮ್ಮ ಮನವ ಸಂತೈಸಿಕೊಳ್ಳಿ.' ಇಂಥ ಹಲವು ವಚನಗಳು ಜನತೆಯಲ್ಲಿ ಜಾಗೃತಿಯನ್ನು ಮೂಡಿಸಿದವು. ಬಸವಣ್ಣನವರು ಈ ನೆಲದ ಜನಬದುಕನ್ನು ಪ್ರೀತಿಸಿದರು. ಆಕಾಶಕ್ಕಿಂತ ನೆಲದ ಬದುಕು ಮುಖ್ಯವೆಂದರು. ಕಾಯಕ ಮತ್ತು ದಾಸೋಹ ತತ್ವಗಳನ್ನು ಜಾರಿಗೆ ತರುವ ಮೂಲಕ ಶ್ರಮಿಕರಲ್ಲಿ ಆತ್ಮವಿಶ್ವಾಸವನ್ನು ಮೂಡಿಸಿದರು. ದಾಸೋಹದಲ್ಲಿ ಹಲವಾರು ಬಗೆಗಳುಂಟು. ತ್ರಿವಿಧ ದಾಸೋಹವನ್ನು ಮಾಡುವೆನೆಂದು ಬಸವಣ್ಣನವರು ತಮ್ಮ ವಚನದಲ್ಲಿ ಹೇಳಿದ್ದಾರೆ.

**"ನಾನು ಆರಂಭವ ಮಾಡುವೆಯಾ, ಗುರುಪೂಜೆಗೆಂದು,**
**ನಾನು ಬೆವಹಾರವ ಮಾಡುವೆನಯ್ಯಾ, ಲಿಂಗಾರ್ಚನೆಗೆಂದು,**
**ನಾನು ಪರಸೇವೆಯ ಮಾಡುವೆನಯ್ಯಾ, ಜಂಗಮ ದಾಸೋಹಕ್ಕೆಂದು.**
**ನಾನಾವ ಕರ್ಮಂಗಳ ಮಾಡಿದಡೆಯು**
**ಆ ಕರ್ಮಫಲಭೋಗವು ನೀ ಕೊಡುವೆ ಎಂಬುದು ನಾನು ಬಲ್ಲೆನು.**
**ನೀ ಕೊಟ್ಟ ದ್ರವ್ಯವ ನಿಮಗಲ್ಲದೆ ಮತ್ತೊಂದಕ್ಕೆ ಮಾಡೆನು,**
**ನಿಮ್ಮ ಸೊಮ್ಮಿಂಗೆ ಸಲಿಸುವೆನು**
**ನಿಮ್ಮಾಣೆ ಕೂಡಲಸಂಗಮದೇವ"[೧೬]**

ದೇವರು ಕೊಟ್ಟಿರುವುದನ್ನು ಸಮಾಜಕ್ಕೆ ಅರ್ಪಣೆ ಮಾಡುವುದೇ ದಾಸೋಹ ಎಂಬುದು ಬಸವಣ್ಣನವರ ಉಪದೇಶ. ದಾಸೋಹದಲ್ಲಿ, ಅನ್ನ ದಾಸೋಹ, ಜ್ಞಾನ ದಾಸೋಹ, ಪ್ರಾಣ ದಾಸೋಹಗಳೆಂಬವು ಬಹುಮುಖ್ಯವಾದವುಗಳು. ಬಸವಣ್ಣನವರು ಇಡೀ ಬ್ರಹ್ಮಾಂಡದ ಗೋಲಾಕಾರವಾದ ವಿಶ್ವವನ್ನು ಇಷ್ಟಲಿಂಗದ ರೂಪದಲ್ಲಿ ಪೂಜಿಸಿದರು. ಭೂಮಿಯು ಗೋಲಾಕಾರವಾಗಿರುವಂತೆ ಲಿಂಗವು ಜಗತ್ತಿನ ಆಕಾರವನ್ನು ಹೊಂದಿದೆ. ಜಗತ್ತಿನಲ್ಲಿ ಶಕ್ತಿಯು ಅಡಗಿರುವಂತೆ ಲಿಂಗದಲ್ಲಿ ಶಿವನು ಅಡಗಿರುವನು. ಶಿವ–ಶಕ್ತಿಯರ



ಸಂಗಮವೇ ಲಿಂಗ. ಲಿಂಗವು ಕಪ್ಪಾಗಿರುವಂತೆ, ಕಣ್ಣುಗುಡ್ಡೆಗಳು ಕಪ್ಪಾಗಿರುವುದರಿಂದ ಲಿಂಗದ ಮೇಲಿನ ಕಾಂತಿಯು ಕಣ್ಣುಗಳ ಕಾಂತಿಯೊಡನೆ ಬೆರೆತು ಬೆಳಕು ಪ್ರತಿಫಲಿತವಾಗಿ ಪ್ರಕಾಶ ಪ್ರಾಪ್ತವಾಗುವುದು. ಇದು ಜ್ಞಾನಕ್ಕೆ ಕಾರಣವಾಗುತ್ತದೆ. ದೃಷ್ಟಿಯೋಗದಿಂದ ಕಣ್ಣಿನ ಕಾಂತಿ ಕಳೆಯೇರುವುದು. ಇಂಥ ಇಷ್ಟಲಿಂಗದ ಮೂಲಕ ಜನತೆಗೆ ಆತ್ಮ ಕಲ್ಯಾಣವನ್ನು ಸಾಧಿಸುವ ಸುಮಾರ್ಗವನ್ನು ತಿಳಿಸಿದ್ದಾರೆ. ಶರಣ ಧರ್ಮವು ಕೇವಲ ಧರ್ಮವಾಗಿ ಮಾತ್ರವಲ್ಲದೇ ಸಮಾಜದರ್ಶನವೂ ಆಗಿ ಸಾಮಾಜಿಕ ಬದಲಾವಣೆಯಲ್ಲಿ ಮಹತ್ವದ ಪಾತ್ರವಹಿಸಿದ್ದು ಕಂಡುಬರುತ್ತದೆ. 'ಕಲ್ಯಾಣವೆಂಬ ಪ್ರಣತಿಯಲ್ಲಿ ಬಸವಣ್ಣನೆಂಬ ಜ್ಯೋತಿಯ ಮುಟ್ಟಿಸಲು ತೊಳಗಿ ಬೆಳಗುತ್ತಿದ್ದುದಯ್ಯಾ ಶಿವನ ಪ್ರಕಾಶ' ಎಂಬ ಅಲ್ಲಮಪ್ರಭುದೇವರ ನುಡಿಯು ಬಸವಣ್ಣನವರ ಘನವ್ಯಕ್ತಿತ್ವಕ್ಕೆ ಹಿಡಿದ ಕನ್ನಡಿಯಾಗಿದೆ. ಜನಮುಖಿ ಚಿಂತನೆ, ಜೀವಪರ ಕಾಳಜಿ, ಜೀವಪರ ಕಳಕಳಿ, ಸಹಕಾರ, ಸಹಬಾಳ್ವೆ, ಸಮಾನತೆ, ನಡೆನುಡಿ ಸಿದ್ಧಾಂತ, ಪರಸ್ಪರ ಗೌರವ, ಸಕಲರ ಲೇಸನ್ನು ಬಯಸುವ ಚಿಂತನೆಗಳಿಂದ ಬಸವಣ್ಣನವರು 'ಮಹಾಮಾನವತಾವಾದಿ' ಎನಿಸಿದ್ದಾರೆ.

**ಕೊನೆಟಿಪ್ಪಣಿಗಳು:**


೧. ಡಾ. ಎಂ. ಎಂ. ಕಲಬುರ್ಗಿ(ಸಂ.); ವಚನ, ಪುಟ. ೧೭
೨. ಕುವೆಂಪು, ಶ್ರೀ ರಾಮಾಯಣದರ್ಶನಂ, ಅಯೋಧ್ಯಾ ಸಂಪುಟಂ, ಪುಟ. ೧೦
೩. Dr. P. B. Desai; Basavesvara and His Times, p. 130
೪. ಡಾ. ಎಂ. ಎಂ. ಕಲಬುರ್ಗಿ(ಸಂ.); ವಚನ, ಪುಟ. ೫೪
೫. ಡಾ. ಎಂ. ಎಂ. ಕಲಬುರ್ಗಿ(ಸಂ.); ವಚನ, ಪುಟ. ೭೪
೬. ಎಂ. ಆರ್. ಶ್ರೀನಿವಾಸಮೂರ್ತಿ; ವಚನ ಧರ್ಮಸಾರ, ಪುಟ. ೧೨
೭. ಡಾ. ಎಂ. ಎಂ. ಕಲಬುರ್ಗಿ; ಶಾಸನಗಳಲ್ಲಿ ಶಿವಶರಣರು, ಪುಟ. ೦೭
೮. ತ. ಸು. ಶಾಮರಾಯ; ಕನ್ನಡ ಸಾಹಿತ್ಯ ಚರಿತ್ರೆ, ಪುಟ. ೫೫
೯. ಡಾ. ಎಸ್. ಆರ್.ಗುಂಜಾಳ; ವಿದ್ವಾಂಸರ ದೃಷ್ಟಿಯಲಿ ಬಸವಣ್ಣ, ಪುಟ. ೨೯.
೧೦. ಡಾ. ಎಂ. ಎಂ. ಕಲಬುರ್ಗಿ; ಶಾಸನಗಳಲ್ಲಿ ಶಿವಶರಣರು, ಮುನ್ನುಡಿ, ಪುಟ. ಃಥ
೧೧. ರಂ. ಶ್ರೀ ಮುಗಳಿ; ಕನ್ನಡ ಸಾಹಿತ್ಯ ಚರಿತ್ರೆ, ಪುಟ. ೧೫೦
೧೨. ದೇಜಗೌ; ಬಸವ ಸಂಹಿತೆ. ಪುಟ. ೧೦೫–೧೦೬
೧೩. ಡಾ. ಎಸ್. ಆರ್.ಗುಂಜಾಳ; ವಿದ್ವಾಂಸರ ದೃಷ್ಟಿಯಲಿ ಬಸವಣ್ಣ, ಪುಟ. ೬೭
೧೪. ಡಾ. ಎಂ. ಎಂ. ಕಲಬುರ್ಗಿ(ಸಂ.); ವಚನ, ಪುಟ. ೮೮
೧೫. ಡಾ. ಎಂ. ಎಂ. ಕಲಬುರ್ಗಿ(ಸಂ.); ವಚನ, ಪುಟ. ೫೨
೧೬. ಅದೇ, ಪುಟ. ೫೭–೫೮




# ಸಮಾಜವಾದಿ ನೆಲೆಯ 'ಜಲ' ನಾಟಕ

**ಮಂಜುನಾಥ ಬಿ. ಟಿ.**

ಇಪ್ಪತ್ತನೆಯ ಶತಮಾನದ ಎಪ್ಪತ್ತು–ಎಂಭತ್ತರ ದಶಕದಿಂದೀಚೆಗೆ ಆಧುನಿಕ ಕನ್ನಡ ಸಾಹಿತ್ಯದಲ್ಲಿ ಐತಿಹಾಸಿಕ ಮಹತ್ವದ ದಲಿತ–ಬಂಡಾಯ ಸಾಹಿತ್ಯ ಚಳುವಳಿಯು ಕಾಣಿಸಿಕೊಂಡಿತು. ಮೂಲತ: ಬಂಡಾಯ ಎಂಬುದೊಂದು ಮನೋಧರ್ಮವಾಗಿದ್ದು ಸಾಮಾಜಿಕ ಪರಿಸರದಲ್ಲಿರುವ ವೈಷಮ್ಯ, ವೈರುಧ್ಯ ಮತ್ತು ಸಮಾನತೆಯ ಬಗೆಗಳನ್ನು ತಮ್ಮ ಗ್ರಹಿಕೆಯ ಒಳನೋಟಗಳಿಂದ ಅರ್ಥೈಸಿಕೊಂಡು ಪ್ರಶ್ನಿಸುವ ಆ ಮೂಲಕ ಆರೋಗ್ಯಕರವಾದ ಹೊಸ ಸಾಂಸ್ಕೃತಿಕ ಬದುಕನ್ನು ಕುರಿತು ಹಾರೈಸುವ ಧೃಡಚಿತ್ತದ ಕಾರ್ಯ ಚಟುವಟಿಕೆಗಳ ಹೆಮ್ಮೆಯ ಕ್ರಮವಾಗಿದೆ. ಮುಖ್ಯವಾದ ಈ ಚಳುವಳಿಯ ಲೇಖಕರಲ್ಲಿ ಮ.ನ. ಜವರಯ್ಯನವರು ಒಬ್ಬರಾಗಿದ್ದು, ಅಂಬೇಡ್ಕರ್ ಜೀವನ ದೃಷ್ಟಿ ಹಾಗೂ ಸಮಗ್ರ ಚಿಂತನೆಗಳನ್ನು ತಮ್ಮ ಆಳವಾದ ಅಧ್ಯಯನದ ಮೂಲಕ ಕನ್ನಡದ ಓದುಗರಿಗೆ ಒದಗಿಸಿಕೊಟ್ಟಿರುವ ಮತ್ತು ದಲಿತ ವರ್ಗದ ಶರಣ–ಶರಣೆಯರನ್ನು ಒಳಗೊಂಡ ಸಮಗ್ರ ವಚನ ಸಾಹಿತ್ಯದ ಸಾರ ಸರ್ವಸ್ವವನ್ನು ಅತ್ಯಂತ ಸರಳವಾಗಿ ಕನ್ನಡ ಓದುಗರಿಗೆ ಒದಗಿಸಿದ ಅಪರೂಪದ ಲೇಖಕರಾಗಿದ್ದಾರೆ. ಇವರು ತಮ್ಮ ಮಾಗಿ, ಜಲ, ಯುಗಾಂತರ, ಕೇಳು ಜಗಮಾದಿಗ ಹೊಲೆಯ ಹಾಗೂ ತನ್ನ ಇನ್ನಿತರ ಸಾಹಿತ್ಯಕ ಕೊಡುಗೆಗಳ ಮೂಲಕ ಸಮಾಜಮುಖಿ ವಿಷಯಗಳನ್ನೊಳಗೊಂಡಂತಹ ಸಮಾಜೋದ್ಧಾರದ ನೆಲೆಯಲ್ಲಯೆ ಕೃತಿಗಳನ್ನು ರಚಿಸುರುತ್ತಾರೆ.

ಗೌತಮ ಬುದ್ಧನನ್ನು ಕುರಿತಂತೆ ಕನ್ನಡ ಸಾಹಿತ್ಯದಲ್ಲಿ ಸಾಕಷ್ಟು ಕೃತಿಗಳು ರಚಿತವಾಗಿದ್ದು ಗೌತಮನ ಬಾಲ್ಯ ಜೀವನ ಸಂಸಾರ ಸಂಸ್ಕಾರ ಸನ್ಯಾಸ ಸಂದೇಶ ಹೀಗೆ ಹಲವಾರು ವಿಷಯಗಳನ್ನು ಜೊತೆಗೆ ಆತನ ಸಮೀಪದ ಪಾತ್ರಗಳಾದ ಶುದ್ಧೋದನ ಯಶೋದರೆ, ರಾಹುಲ ಅಂಗುಲಿಮಾಲ, ಚನ್ನ ಮುಂತಾದವುಗಳೊಂದಿಗೆ ಬುದ್ಧನ ಚಿತ್ರಣ ಕುರಿತಂತೆ ಹಲವು ಮಹತ್ವದ ಕೃತಿಗಳು ಇತ್ತೀಚೆಗೆ ಬರೆಯಲ್ಪಟ್ಟಿವೆ. ಬಹುಮುಖ್ಯವಾಗಿ ಕುವೆಂಪುರವರ ಮಹಾರಾತ್ರಿ, ಬಿ. ಪುಟ್ಟಸ್ವಾಮಯ್ಯನವರ ಗೌತಮ ಬುದ್ಧ, ಶಿವರಾಮ ಕಾರಂತರ ಕಿಸಗೋತಮಿ, ಮ.ನ.ಜ. ರವರ ಜಲ, ಜೆ.ಪಿ. ರಾಜರತ್ನಂರ ಬುದ್ಧನ ಕುರಿತ ಕೃತಿಗಳು ಪ್ರಮುಖವೆನಿಸುತ್ತವೆ. ಮ.ನ.ಜ. ರವರ ಜಲ ನಾಟಕ ಕೃತಿಯು ಹಳೆಯ ವಸ್ತುವನ್ನೆ ಆಧರಿಸಿದ್ದರೂ ನೂತನವೆಂಬಂತೆ ರಚನೆಗೊಂಡು ಅದ್ಭುತ ನಾಟಕವಾಗಿ ಪ್ರಯೋಗಗೊಂಡಿದೆ. ಇಲ್ಲಿನ ಪ್ರಧಾನ ಪಾತ್ರ ಮತ್ತು ವಸ್ತುವಾಗಿ ಬುದ್ಧ ನಿರೂಪಿತಗೊಂಡಿದ್ದಾನೆ. ಕುವೆಂಪು ಅವರ 'ಮಾಹಾರಾತ್ರಿ' ಸಿದ್ಧಾರ್ಥ ಬುದ್ಧನಾದ ಬಗೆಯನ್ನು ಅನನ್ಯವಾಗಿ ಚಿತ್ರಿಸುವ ಒಂದು ಸರಳ ಸುಂದರ ಸಣ್ಣನಾಟಕವಾಗಿದ್ದು ಸಿದ್ಧಾರ್ಥ ಅನಿಕೇತನವಾಗಿ ಬುದ್ಧನಾಗಿ ನಮಗೆ ನಿಲುಕದಷ್ಟು ಎತ್ತರಕ್ಕೆ ಬೆಳೆದು ಬಿಡುತ್ತಾನೆ. ಹಾಗೆಯೆ ಬಿ. ಪುಟ್ಟಸ್ವಾಮಯ್ಯರ 'ಗೌತಮಬುದ್ಧ' ಎಂಬ ಮಹತ್ವದ ಕೃತಿಯ ಐತಿಹಾಸಿಕ ದೃಷ್ಟಿಯಿಂದ ಮಹತ್ವದೆನಿಸುತ್ತದೆ. ಕಾರಂತರ ಜೆ.ಪಿ.ರಾಜರತ್ನಂರ ಕೃತಿಗಳಲ್ಲಿಯೂ ಬುದ್ಧ ಭಿನ್ನ ಭಿನ್ನ ನೆಲೆಗಳಲ್ಲಿ ಗುರುತಿಸಲ್ಪಡುತ್ತಾನೆ ಆದರೆ ಅವುಗಳಾಚೆಗಿನ ಸತ್ಯವನ್ನು ತೆರೆದು



ತೊರುವ ಧೈರ್ಯವನ್ನು ಮ.ನ. ಜ 'ಜಲ ನಾಟಕದಲ್ಲಿ ಮಾಡಿದ್ದಾರೆ. ಹಲವು ಶ್ರೇಷ್ಠಚಿಂತಕರು ಸೃಜನಶೀಲರು ಒಪ್ಪಿಕೊಂಡಿರುವುದನ್ನು ವಿರೋಧಿಸುವ ಧೈರ್ಯವಂತಿಕೆ ಬುದ್ಧನನ್ನು ಪರಿಪೂರ್ಣನ್ನಾಗಿಸುವ ನಡೆಯಲ್ಲಿನ ಒಂದು ಮಹತ್ವದ ಹೆಜ್ಜೆಯಾಗಿದೆ. ಬಹುಶ: ವಿಶ್ವಸಾಹಿತ್ಯದ ಸಂದರ್ಭದಲ್ಲಿ ಈ ಧೈರ್ಯವಂತಿಕೆ ಸೃಜನಸ್ಪರ್ಷದೊಂದಿಗೆ ಕನ್ನಡದಲ್ಲಿಯೇ ಮೊದಲ ಬಾರಿಗೆ ಈ ನಾಟಕದಲ್ಲಿ ಕಾಣಿಸಿಕೊಂಡಿದೆ.

ಅಂಬೇಡ್ಕರರು ಬುದ್ಧನನ್ನು ನೋಡಿದ ಬಗೆ ವಿಬಿನ್ನವಾದುದು. ಅಂಬೇಡ್ಕರ್ ಮತ್ತು ಬುದ್ಧರಿರ್ವರನ್ನು ಆಳವಾಗಿ ತಿಳಿದಿರುವ ಮ.ನ.ಜ.ರು ಅಂಬೇಡ್ಕರ್ ಮತ್ತು ಬುದ್ಧನ ಸಾಮಿಪ್ಯತೆಯನ್ನು ಹಾಗೂ ಬುದ್ಧನ ತತ್ವಗಳಿಗೆ ಅಂಬೇಡ್ಕರರು ಮಾರು ಹೋಗಿ ಬುದ್ಧತ್ವವನ್ನು ಕಂಡುಕೊಂಡ ಬಗೆಯನ್ನು ಸೂಕ್ಷ್ಮವಾಗಿ ಅರಿತು ಅಂಬೇಡ್ಕರ್ ಮತ್ತು ಬುದ್ಧನನ್ನು ಜಲ ನಾಟಕದಲ್ಲಿ ವಿಭಿನ್ನ ರೀತಿಯಲ್ಲಿ ತೋರಿಸಿದ್ದಾರೆ. ಇಲ್ಲಿನ ಬುದ್ಧನಲ್ಲಿ ಅಂಬೇಡ್ಕರರನ್ನು ಮನಗಾಣಬಹುದಾಗಿದೆ. ಬುದ್ಧನ ಕುರಿತು ಅಂಬೇಡ್ಕರರು ಅಶ್ವಘೋಷನ 'ಬುದ್ಧಚರಿತ'ವನ್ನು ಅಧಾರವಾಗಿಟ್ಟುಕೊಂಡು ರಚಿಸಿರುವ 'ಬುದ್ಧ ಮತ್ತು ಆತನ ದಮ್ಮ' ಕೃತಿ ಬುದ್ಧನ ಕುರಿತು ಭಾರತದಲ್ಲೇ ಮೊದಲ ಬಾರಿಗೆ ವೈಚಾರಿಕ ನೆಲೆಗಟ್ಟಿನಲ್ಲಿ ಹಾಗೂ ಸ್ಪಷ್ಟವಾಗಿ ತಿಳಿಸುವ ಮೊದಲ ಕೃತಿಯಂತಿದೆ. ಅಂಬೇಡ್ಕರ್‌ರವರ ದೃಷ್ಟಿಯಲ್ಲಿ ಭಾರತದ ಚರಿತ್ರೆ ಎಂದರೆ ಬೌದ್ಧ ಧರ್ಮ ಮತ್ತು ಬ್ರಾಹ್ಮಣ ಧರ್ಮಗಳ ನಡುವೆ ನಡೆದ ಸಂಘರ್ಷ. ಗೌತಮ ಬುದ್ಧ ಸನ್ಯಾಸಿಯಾಗಲು ಪ್ರಮುಖ ಕಾರಣವೆಂದರೆ – ಶಾಕ್ಯರಲ್ಲಿ ಸಂಘವೊಂದಿತ್ತು. ಇಪ್ಪತ್ತು ವರ್ಷ ತುಂಬಿದ ಶಾಕ್ಯ ಯುವಕರೆಲ್ಲ ಆ ಸಂಘಕ್ಕೆ ಕಡ್ಡಾಯವಾಗಿ ಸದಸ್ಯರಾಗಬೇಕಿತ್ತು. ಅದರಂತೆ ಸಿದ್ಧಾರ್ಥನು ಆ ಸಂಘದ ಸದಸ್ಯನಾದನು. ತುಸು ಕಾಲಾನಂತರ ಶಾಕ್ಯರಾಜ್ಯದ ನೆರೆ ರಾಜ್ಯ ಕೊಲೀಯಾದ ನಡುವೆ ಹರಿಯುತ್ತಿದ್ದ ರೋಹಿಣಿ ನದಿ ನೀರಿನ ಹಂಚಿಕೆ ವಿಷಯದಲ್ಲಿ ಎರಡು ರಾಜ್ಯಗಳ ನಡುವೆ ಘರ್ಷಣೆಯಾಗುತ್ತದೆ. ಎರಡು ರಾಜ್ಯಗಳ ಜನರು ರೋಹಿಣಿ ನದಿ ನೀರನ್ನು ತಮ್ಮ ತಮ್ಮಲ್ಲೇ ಉಳಿಸಿಕೊಳ್ಳಲು ಯುದ್ದ ಮಾಡಲು ಮುಂದಾಗುತ್ತಾರೆ. ಈ ವಿಷಯ ಶಾಕ್ಯ ಸಂಘದ ಮುಂದೆ ಬರುತ್ತದೆ. ಶಾಕ್ಯ ಸಂಘದ ಸದಸ್ಯರು ಕೊಲೀಯಾದ ವಿರುದ್ದ ಯುದ್ಧ ಸಾರಲು ಮುಂದಾಗುತ್ತಾರೆ. ಸಿದ್ಧಾರ್ಥ ಆ ಯುದ್ದವನ್ನು ವಿರೋದಿಸುತ್ತಾನೆ. ಸಂಘದ ತೀರ್ಪಿಗೆ ವಿರುದ್ದವಾಗಿ ನಿಂತ ಸಿದ್ಧಾರ್ಥನಿಗೆ ಶಾಕ್ಯ ಸಂಘವು ಶಿಕ್ಷೆ ವಿಧಿಸಲು ಮುಂದಾಗಿ ಮೂರು ವಿವಿಧ ಶಿಕ್ಷೆಗಳನ್ನು ವಿಧಿಸುತ್ತದೆ. ಸೈನ್ಯ ಸೇರಿ ಎಲ್ಲರಂತೆ ಯುದ್ಧ ಮಾಡುವುದು. ಗಡಿಪಾರು ಇಲ್ಲವೆ ಬಹಿಷ್ಕಾರ ಹಾಗೂ ಜೀವಾವದಿ ಶಿಕ್ಷೆ ಅಥವಾ ಮರಣದಂಡನೆ ಇವುಗಳಲ್ಲಿ ಒಂದು ಶಿಕ್ಷೆಯನ್ನು ಆಯ್ದುಕೊಳ್ಳುವಂತೆ ಸೂಚಿಸುತ್ತದೆ. ಸಿದ್ಧಾರ್ಥ ಈ ಮೂರು ಶಿಕ್ಷೆಗಳಲ್ಲಿ ಗಡಿಪಾರು ಶಿಕ್ಷೆಯನ್ನು ಒಪ್ಪಿಕೊಳ್ಳುತ್ತಾನೆ. ಆ ನಂತರ ಸಿದ್ಧಾರ್ಥ ಸನ್ಯಾಸಿಯಾದನು ಎಂದು ಹೇಳುತ್ತಾ ಇತಿಹಾಸಕಾರರು ಮೂಲ ಕಥೆಯನ್ನು ಬಿಟ್ಟು ಕಟ್ಟುಕಥೆಯನ್ನು ಹೆಣೆದು ಇಡೀ ಚರಿತ್ರೆಯನ್ನೇ ತಿರುಚುವ ಪ್ರಯತ್ನ ಮಾಡಿದ್ದಾರೆ. ನಾನೊಬ್ಬ ಚರಿತ್ರಕಾರನಾಗಿ ಆಳವಾದ ಅಧ್ಯಯನ ಸಂಶೋಧನೆಯಿಂದ ಈ ವಿಷಯವನ್ನು ಶೃತಪಡಿಸಿದ್ದೇನೆ ಎಂದಿದ್ದಾರೆ. ಸಿದ್ಧಾರ್ಥ ಗೌತಮನು ಒಬ್ಬ ರೋಗಿಯನ್ನು, ಒಬ್ಬ ಮುದುಕನನ್ನು, ಹಾಗೂ ಒಂದು ಹೆಣವನ್ನು ನೋಡಿ ಮಾನವ ಜನ್ಮದ ನಶ್ವರತೆಗೆ ಮರುಗಿ ತನ್ನ ಇಪ್ಪತೊಂದನೇ ವಯಸ್ಸಿಗೆ ಸನ್ಯಾಸಿಯಾದನೆಂದು ಜಗತ್ತಿನಾದ್ಯಾಂತ ಪ್ರಚಾರ ಮಾಡಲಾಗಿದೆ ಹಾಗೂ ಎಲ್ಲರನ್ನೂ ನಂಬಿಸಲಾಗಿದೆ. ಆದರೆ ಇದನ್ನು ಒಪ್ಪದ

ಡಾ. ಬಿ. ಆರ್. ಅಂಬೇಡ್ಕರರು "ಬುದ್ದನು ಒಬ್ಬ ಮೃತವ್ಯಕ್ತಿಯನ್ನು, ಒಬ್ಬ ರೋಗಿಯನ್ನು, ಮತ್ತೊಬ್ಬ ಮುದುಕನನ್ನು ನೋಡಿದ್ದರಿಂದಲೇ ಅವನಲ್ಲಿ ವೈರಾಗ್ಯ ಉಂಟಾಯಿತೆಂದು ಸಾಂಪ್ರದಾಯಿ ಚರಿತ್ರೆಯುದ್ದಕ್ಕೂ ಹೇಳಿಕೊಂಡು ಬರಲಾಗಿದೆ. ಆದರೆ ಅವನು ಸನ್ಯಾಸದೀಕ್ಷೆ ತೆಗೆದುಕೊಂಡು ಇಪ್ಪತ್ತೊಂದನೇ ವಯಸ್ಸಿನವರೆಗೂ ಸತ್ತವರನ್ನು ರೋಗಿಗಳನ್ನು ಮುದುಕರನ್ನು ನೋಡಿಯೇ ಇರಲಿಲ್ಲವೆನ್ನುವ ಈ ಚರಿತ್ರೆಯನ್ನು ನಂಬುವುದಾದರೂ ಹೇಗೆ ಎಂಬ ಮೂಲಭೂತ ಪ್ರಶ್ನೆಯಿತ್ತಿದ್ದಾರೆ. ಅಷ್ಟಲ್ಲದೆ ತಮ್ಮ "ಬುದ್ಧ ಮತ್ತು ಆತನ ಧಮ್ಮ " ಎಂಬ ಮಹಾಕೃತಿಯಲ್ಲಿ ಬಾಬಾ ಸಾಹೇಬರು ಸಿದ್ಧಾರ್ಥ ಗೌತಮನ ವೈರಾಗ್ಯಕ್ಕೆ ಶಾಕ್ಯ ಮತ್ತು ಕೂಲಿಯಾ ರಾಜ್ಯಗಳ ನಡುವಿನ ರೋಹಿಣಿ ನದಿ ನೀರಿನ ವಿವಾದದ ಹಿಂದಿದ್ದ ಅಂದಿನ ಬ್ರಾಹ್ಮಣ ಮತೀಯ ಶಕ್ತಿಗಳ ಪಿತೂರಿಯ ಒಳಸುಳಿಗಳನ್ನು ಸಹ ಅವರು ನೀಡಿದ್ದಾರೆ. ಇದನ್ನು ಆಧಾರವಾಗಿಟ್ಟುಕೊಂಡು ಮ.ನ.ಜ. ರವರು 'ಜಲ' ಎಂಬ ಮಹತ್ವದ ನಾಟಕವನ್ನು ರಚಿಸಿದ್ದಾರೆ.

ಮೇಳಗೀತೆಯಿಂದ ಪ್ರಾರಂಭವಾಗುವ ನಾಟಕವು ಆ ಗೀತೆಯಲ್ಲಿಯೇ ಸಮಾಜದ ಕೊಳೆತೊಳೆಯುವ, ಸಿದ್ಧಾರ್ಥ-ಬುದ್ದನಾಗುವ, ಪರಿಪೂರ್ಣ ವ್ಯಕ್ತಿತ್ವದ ನಿರೂಪಣೆಯನ್ನು ಮಾಡಲಾಗಿದೆ. ನಾಟಕವು ನಾಲ್ಕು ಅಂಕಗಳನ್ನು ಹೊಂದಿದ್ದು ಒಟ್ಟು ಇಪ್ಪತ್ತು ದೃಶ್ಯಗಳಿಂದ ಕೂಡಿದ್ದು ಹೊಸತನದೊಂದಿಗೆ ರೂಪಗೊಂಡಿದೆ. ಸಮಾಜದಲ್ಲಿನ ಜಾತಿ, ಮೇಲು-ಕೀಳು ಕೂಲಿಕಾರ್ಮಿಕ-ಆಳುವ ವರ್ಗ, ಶೋಷಣೆ, ಪ್ರಾಣಿ-ಪಕ್ಷಿ ಮಾನುಷವಾದ ಹಿಂಸೆ, ಲಾಲಾಸೆ, ಲಂಪಟತನ, ನದಿನೀರಿನ ಕುರಿತ ಜಲವಿವಾದ ಅತಿಮಾನುಷವಾದ ನಡವಳಿಕೆ ಇತ್ಯಾದಿ ಸ್ವೀಕಾರಾರ್ಹವಲ್ಲದ ತಮೋಗುಣಗಳನ್ನು ಪ್ರತಿಭಟಿಸುವ ಚಿತ್ರಣಗಳನ್ನು ನಾಟಕಕಾರ ಅತ್ಯಂತ ಸೊಗಸಾಗಿ ಕಟ್ಟಿಕೊಟ್ಟಿದ್ದಾರೆ. ಸಮಾಜದಲ್ಲಿ ಜಾತಿ ವ್ಯವಸ್ಥೆ ಸಲ್ಲದು, ಸಮಾಜದಲ್ಲಿ ಬದುಕುವ ಹಕ್ಕೂ ಎಲ್ಲರಿಗೂ ಇದೆ. ಮನುಷ್ಯ ಪ್ರಕೃತಿಯ ಮೇಲೆ ಹಿಡಿತ ಸಾಧಿಸಲು ಸಾಧ್ಯವಿಲ್ಲ, ಎಲ್ಲವನ್ನು ಎಲ್ಲರೂ ಹೊಂದುವ, ಪಡೆಯುವ ಮೂಲಕ ಸರ್ವಸಮಾನ ಬದುಕನ್ನು ಅನುಭವಿಸಬಹುದು ಎಂಬ ಸಂದೇಶವನ್ನು 'ಜಲ' ನಾಟಕದಲ್ಲಿ ಗೌತಮ ಬುದ್ದನ ಪಾತ್ರದ ಮುಖೇನ ನೀಡುವ ಕೆಲಸವನ್ನು ಮಾಡಿದ್ದಾರೆ.

ದೊರೆ ಶುದ್ಧೋದನನ ಪ್ರಜಾಪ್ರಭುತ್ವ ಮಾದರಿಯ ಆಳ್ವಿಕೆ ಶಾಕ್ಯ ಸಾಮ್ರಾಜ್ಯದ ಬ್ರಾಹ್ಮಣ ಮಹಾಮಂತ್ರಿ ಉದಯಿನ್, ಬ್ರಾಹ್ಮಣ ಆಡಳಿತಾಧಿಕಾರಿ ನೀತಿಚಂದ್ರ ಮತ್ತು ಕ್ಷತ್ರಿಯನಾದ ಹಾಗೂ ಸೇನಾಪತಿಯಾದ ಯೋಧನೇತ - ಇವರುಗಳಿಗೆ ಸ್ವಲ್ಪವೂ ಹಿಡಿಸುವುದಿಲ್ಲ, ಅಷ್ಟೇ ಅಲ್ಲ ಸರ್ವಜಾತಿಗಳನ್ನು ಸಮಾನವಾಗಿ ಕಾಣುವ, ವೇದ-ಶಾಸ್ತ್ರಪುರಾಣಗಳ ಪೊಳ್ಳುತನವನ್ನು ಬಯಲು ಮಾಡುವ ಸಿದ್ಧಾರ್ಥ ಗೌತಮನ ಪ್ರಜಾಪ್ರಭುತ್ವ ಮಾದರಿ ಸರ್ವರು ಸಮಾನರು ಎನ್ನುವ ದೃಷ್ಟಿಕೋನ ಎಲ್ಲರ ಮೆಚ್ಚುಗೆಗೆ ಪಾತ್ರವಾಗುತ್ತದೆ. ನಾಟಕದುದ್ದಕ್ಕೂ ಕಂಡು ಬರುವ ಈ ಅಂಶವು ಸಾಮಾಜಿಕ ನೆಲೆಯಲ್ಲಿ ಅತ್ಯಂತ ಮುಖ್ಯವಾದುದು ಎನಿಸುತ್ತದೆ.

ಭೂಮಿ, ಜಲ, ಕೃಷಿ ಸಂಬಂಧಿತ ವಿಷಯಗಳನ್ನು ಸಾಮಾಜಿಕವಾದ ನೆಲೆಯಲ್ಲಿ ನೋಡುವ ನಾಟಕಕಾರ ನಾಯಕನಿಗೆ ಸಂವಾದಿಯಾಗಿ ರೈತರು ಕಾರ್ಮಿಕರು ಹಾಗೂ ಅವರು ಹಾಡುವ ಹಾಡುಗಳನ್ನು ನಾಟಕದಲ್ಲಿ ಬಳಸಿಕೊಂಡು ಸಾಮಾಜಿಕ ನ್ಯಾಯದ ಪರಿಕಲ್ಪನೆಗಳನ್ನು ಮನಮುಟ್ಟುವಂತೆ ಚಿತ್ರಿಸಿದ್ದಾರೆ, "ಮಾನವನು ಮರೆತ ಮಾನವಗೆ, ಮಾನವತೆಯ ಮಾರ್ಗ ತೋರಿದ, ಮಾನವೋತ್ತಮನ ಕಥೆಯಿದೆ" ಎನ್ನುವ ಮೇಳದವರು ಹಾಡಿಕೊಳ್ಳುವ ಸಾಲುಗಳು ಸಾಮಾಜಿಕ ಸಮಾನತೆಯ, ಬುದ್ಧನ ವ್ಯಕ್ತಿತ್ವದ ಬಿಂಬದಂತೆ ಕಾಣುತ್ತವೆ.



ಶಾಕ್ಯ ಸಾಮ್ರಾಜ್ಯದಲ್ಲುಂಟಾದ ಕಳವಳಕಾರಿ ಅಘಾತಕಾರಿ ಅಂಶಗಳಿಗೆ ಪ್ರತಿಭಟನೆಯಾಗಿ ಮೇಳದವರು ಹಾಡಿಕೊಳ್ಳುವ. "ಕಾಲಕಾಲಕೂ ನಡೆಯದೆಂದು, ಅರಿವು ಕೊಲುವುದು ಆಗದೆಂದು, ಯಾರಿಗೂ ಕಾಯದೆ ಬಂದೇ ಬರಲಿದೆ. ಕುಟಿಲಕೋಟಿಯ ತುಳಿದು ಹಿಂದೆ" ಎನ್ನುವ ಸಾಲುಗಳು ಹೊಸ ಸಮಾಜವನ್ನು ಕಟ್ಟುವ, ಶೋಷಣೆಯನ್ನು ಮೆಟ್ಟುವ ಪ್ರತಿರೋಧದ ಮಾತುಗಳಂತೆ ಕಂಡು ಬರುತ್ತದೆ, ಸಿದ್ದಾರ್ಥ ಗೌತಮನನ್ನು ಹೆಚ್ಚಾಗಿ ಆರಾಧಿಸುವ ಕೊಂಡಾಡುವ, ನಾಯಕನನ್ನಾಗಿ ಒಪ್ಪಿಕೊಳ್ಳುವ, ರೈತ, ಕಾರ್ಮಿಕ, ಚಂಡಾಲ ಕೆಳದರ್ಜೆಯ ಕೆಲಸಮಾಡುವ ಇನ್ನಿತರರು ಆತನ ಮುಖೇನವೇ ಸಮಾನತೆಯ ಬೆಳಕಿನತ್ತ ಸಾಗುವ ಹಂಬಲವನ್ನು ವ್ಯಕ್ತಪಡಿಸಿ ಹೊರಜಗತ್ತಿನ ಆಶಾಕಿರಣವೆನ್ನುವಂತೆ ಕಾಣುತ್ತಾರೆ. ಸಮಾಜದ ಉದ್ಧಾರಕ್ಕಾಗಿಯೆ ಶಾಕ್ಯಸಂಘದ ಪ್ರಮಾಣವನ್ನು ಸ್ವೀಕರಿಸುವ ಸಿದ್ದಾರ್ಥ ಗೌತಮನು ಎಲ್ಲ ವರ್ಗಗಳ ಜನರಿಗೂ ತಲುಪಬೇಕು ಎಂಬ ಇಂಗಿತವನ್ನು ವ್ಯಕ್ತಪಡಿಸುತ್ತಾನೆ. ನೆಲ, ಜಲ, ಜೀವ ರಕ್ಷಣೆಗೆ ತಾನು ಸದಾಸಿದ್ದ ಎಂಬುದನ್ನು ವಿರೋಧಿಗಳಿಗೆ ಮನವರಿಕೆಯಾಗುವಂತೆ ತಿಳಿಸುತ್ತಾನೆ.

ನಾಟಕದಲ್ಲಿ ಕಂಡುಬರುವ ಮತ್ತೊಂದು ಸಮಾಜಮುಖಿಯಾದ ಪ್ರಮುಖ ಅಂಶವೆಂದರೆ ಊಳಿಗಮಾನ್ಯದ ವಿರುದ್ಧದ ಪ್ರತಿಭಟನೆ, ಶೋಷಣೆಯ ವಿರೋಧ, ಗೌತಮನ ಪಾತ್ರ ಈ ಊಳಿಗದವರ, ಕಾರ್ಮಿಕರ, ಶೋಷಿತರ ಪರವಾಗಿ ಸದಾ ತುಡಿಯುತ್ತಲೇ ಇರುತ್ತದೆ. ನಾಟಕದ ಕೆಲಭಾಗಗಳಲ್ಲಿ ಸಿದ್ಧಾರ್ಥ ಗೌತಮನ ಪಾತ್ರವು ಸೇವಕರನ್ನು ಸೇವಕರ ಕುಟುಂಬದ ಯೋಗಕ್ಷೇಮವನ್ನು ವಿಚಾರಿಸುತ್ತಲೇ ಇರುತ್ತದೆ. ಇದು ಸಾಮಾಜಿಕವಾದ ಹಾಗೂ ಆದರ್ಶಮಯವಾದ ಗುಣವು ಆಗಿದೆ. "ದುರ್ಬಲರು ಮತ್ತು ದು:ಖಿಗಳ ಬಗ್ಗೆ ಅನುಕಂಪ ನನ್ನಲ್ಲಿ ಪ್ರಥಮ ಗುಣ ಆಗೋದಕ್ಕೆ ಬಿಡಬಾರ್ದಂತೆ - ಎಂಥ ಕೆಟ್ಟ ತರ್ಕ ಎಂದೆನ್ನಬಹುದು ಎಂಬ ಮಾತು ಸಮಾಜದಲ್ಲಿನ ಕೆಳವರ್ಗಗಳ ಬಗ್ಗೆ ಮೇಲ್ವರ್ಗ ತಾಳಿರುವ ಭಾವನೆ ಮತ್ತು ಅವರೊಂದಿಗಿನ ಪರಿಯನ್ನು ಸೂಚಿಸಿದರೆ, ಸಿದ್ದಾರ್ಥನ ತಿರಸ್ಕಾರವನ್ನು ಕಾಣಬಹುದು.

ಸಮಾಜದಲ್ಲಿ ಸಾಮಾಜಿಕ ಸಂಘರ್ಷಗಳು ಬರಬಹುದು ಅಂತಹ ಸಂದರ್ಭದಲ್ಲಿ ಪರಸ್ಪರ ಅರಿತು ಮುನ್ನೆಡೆಯಬೇಕು, ಕಲಹ ತೀವ್ರಗಾಮಿ ನಡವಳಿಕೆಗಳನ್ನು ದೂರವಿರಿಸಬೇಕು ಎಂಬುದು ಸಿದ್ದಾರ್ಥ ಗೌತಮನ ಅಭಿಪ್ರಾಯವಾಗಿತ್ತು. ಇದಕ್ಕೆ ಸಾಂಕೇತಿಕವಾಗಿ ನಾಟಕದಲ್ಲಿ ಬರುವ "ದ್ವೇಷಕ್ಕೆ ದ್ವೇಷದಿಂದ ಉತ್ತರ ಕೊಡೋದು ನನ್ನಿಂದಾಗೋದಿಲ್ಲ" ಎಂಬ ಮಾತುಗಳನ್ನು ಉದಾಹರಿಸಬುದು.

ಚಂಡಾಲ ಕುಲದ ಮಾರ್ಕಾಂಡೇಯ, ಚೆನ್ನ, ಅಂಕಿತಾ, ಇತ್ಯಾದಿ ಪಾತ್ರಗಳನ್ನೆ ಹೆಚ್ಚಾಗಿ ಆಶ್ರಯಿಸುವ ಸಿದ್ಧಾರ್ಥ ಜಾತಿ ವ್ಯವಸ್ಥೆಯ ವಿರುದ್ಧ ನಿಂತು ಸರ್ವ ಸಮಾನತೆಯ ಸಂದೇಶ ನೀಡುತ್ತಾನೆ. ಸರ್ವರಿಗೂ, ಪ್ರಾಣಿಪಕ್ಷಿಗಳಿಗೂ ಸ್ವತಂತ್ರ ಬದುಕು ನಡೆಸುವ ಅವಕಾಶ ಪ್ರಕೃತಿ ನೀಡಿದೆ. 'ಜೀವ ಕೊಡೋಕೆ ಸಾದ್ಯವಿಲ್ಲದವನಿಗೆ ಜೀವ ತೆಗೆಯೋ

ಹಕ್ಕೆಲ್ಲಿದೆ' ಎಂಬ ಮಾತಿನ ಮೂಲಕ ದಬ್ಬಾಳಿಕೆ ಹಿಂಸೆ, ಯುದ್ಧಮಾಡಿ ಪ್ರಾಣಹಾನಿ ಮಾಡುವವರಿಗೆ ಪ್ರಶ್ನಿಸುತ್ತಾನೆ. ಯುದ್ಧ, ಕಲಹ, ಸಂಘರ್ಷಗಳು ಸಮಾಜಕ್ಕೆ ಹಾನಿಕಾರಕವಾದುವುಗಳು 'ಮಾನವ ಹತ್ಯಾಕಾಂಡ ಮಾನವ ಜನಾಂಗದ ಯಾವ ಸಮಸ್ಯೆಗೂ ಪರಿಹಾರವಾಗಲಾರದು' ಎಂಬ ಮಾತುಗಳು ಸಮಾಜವನ್ನು ಸರಿಯಾಗಿ ಕಟ್ಟುವ ಬೆಳೆಸುವ ಸಂಕೇತಗಳೆಂಬಂತೆ ಬಳಕೆಯಾಗಿವೆ.

ಸಿದ್ಧಾರ್ಥ ಗೌತಮನು ಯೋಶೋಧರೆಯನ್ನು " ಪರಿಪರಿಯಾಗಿ ಪರಿಹಾಸ್ಯ ಮಾಡೋ ಜಾಣೆ ಅಂತ ಗೊತ್ತಿದ್ದರೆ ನಾನು ಖಂಡಿತಾ ಸ್ವಯಂವರಕ್ ಬರ್ತಿರಲಿಲ್ಲ" ಎಂದು ಹಾಸ್ಯಮಾಡಿದಾಗ ಯಶೋಧರೆ ಪ್ರತಿಭಟನೆಯ ಮಾತುಗಳನ್ನಾಡುತ್ತಾಳೆ. ಆಗಾ ಸಿದ್ಧಾರ್ಥಗೌತಮನು 'ಈ ಪರಿಪೂರ್ಣ ವ್ಯಕ್ತಿತ್ವ ಎಲ್ಲ ಸ್ತ್ರಿಯರಿಗೂ ಬರ್ಲೀ ಅಂತ ಹಾರೈಸ್ತೇನೆ' ಎನ್ನುತ್ತಾನೆ. ಇಲ್ಲಿ ಸ್ತ್ರಿ ಸಮಾನತೆಯ ಸಾಂಕೇತಿಕಾಂಶಗಳನ್ನು ಮನಗಾಣಬಹುದಾಗಿದೆ.

ಸಿದ್ಧಾರ್ಥ – ಚೆನ್ನನ ಸ್ನೇಹಿತ್ವ, ಆಡಳಿತ ನೀತಿಯ ಪ್ರಶ್ನಿಸುವಿಕೆ, ಸ್ತ್ರೀಸಮಾನತೆಯ ಕಲ್ಪನೆ, ಕೃಷಿಕಾರ್ಮಿಕರ ಕ್ಷೇಮ ವಿಚಾರಣೆ, ಯುದ್ಧ ವಿರೋಧಿಭಾವನೆ ಅಂಕಿತಾಳನ್ನು ಬದುಕಿಸಿದ್ದು ಮಾರ್ಕಾಂಡಯ್ಯನಿಗೆ ರೋಹಿಣಿ ಜಲ ಪ್ರೇಕ್ಷಣೆ, ( ನದಿ, ವಿವಾದ ಪಸ್ತುತವೆನಿಸುತ್ತದೆ ) ಅಹಿಂಸಾತ್ಮಕವಾದ ಆಡಳಿತಕ್ಕಾಗಿ ಹಂಬಲ, ಜಾತಿ ವೈಷಮ್ಯದ ಜ್ವಾಲೆ ನೆಲ ಸುಡುವುದೆಂಬ ಭಾವನೆ, ಬದುಕುವ ಹಕ್ಕು ಎಲ್ಲರಿಗೂ ಇದೆ ಎನ್ನುವ ಸಂದೇಶ ಈ ಎಲ್ಲ ಅಂಶಗಳು ಸಮಾಜವಾದಿ ನೆಲೆಯಲ್ಲಿ ಸಮಾಜಮುಖಿ ಆಶಯದಲ್ಲಿ ಕಂಡು ಬರುವ ಬಹುಮುಖ್ಯ ಅಂಶಗಳೇ ಆಗಿವೆ.

ಮ.ನ.ಜ. ರವರು 'ಜಲ' ನಾಟಕವನ್ನು ಎರಕಹೊಯ್ದ ಒಂದು ಸಂಕೀರ್ಣ ಕೃತಿರೂಪವಾಗಿರಿಸಿದ್ದಾರೆ. ಗೌತಮನನ್ನು ಅರ್ಥಮಾಡಿಕೊಳ್ಳಲು, ರಾಜಕೀಯ ಮತ್ತು ಸಾಮಾಜಿಕ ಒಳಿತಿನ ನಂಟನ್ನು ತಿಳಿದುಕೊಳ್ಳಲು ಪ್ರತಿಷ್ಠಾಪಿತ ನೆಲೆಗಳನ್ನು ಭೇದಿಸಿ ಹೊಸನೆಲೆಯನ್ನು ಕಂಡುಕೊಳ್ಳುವ ಬಗೆಯನ್ನು ಕಲಿಯಲು 'ಜಲ'ದ ಅಧ್ಯಯನ ಸಹಕಾರಿಯಾಗಿದೆ. ತ್ಯಾಗದ ಮೂಲಕ ಜನಾಭಿಮುಖಿಯಾಗಬಲ್ಲ, ಮಾನವೀಯ ಧರ್ಮದ ಜಯ ಸಮಾಜದಲ್ಲಿ ಮೌಲ್ಯಗಳ ಭಿತ್ತರ ನಾಟಕಾಧ್ಯಯನದ ಸಂದರ್ಭದಲ್ಲಿ ಕಂಡುಬರುತ್ತದೆ.

**ಪರಾಮರ್ಶನ ಗ್ರಂಥಗಳು**

೧. ಜಲ ; ಮ.ನ. ಜವರಯ್ಯ
೨. ಇಂದು ನಮಗೆ ಬೇಕಿರುವುದು ಆನಂದಭಂತೆ ಬುದ್ಧ ಬೆಳಕು (ಲೇಖನ) ವಿಜಯವಾಣಿ ಪತ್ರಿಕೆ
೩. ಮ.ನ.ಜ. ಸಾಹಿತ್ಯ ವಿಚಾರ ಲೇಖನಗಳು
೪. ಡಾ. ಬಿ.ಆರ್. ಅಂಬೇಡ್ಕರ್‌ರವರ ರಾಚಪ್ಪಾಜಿ ಚಿಂತನೆಗಳು
೫. ಬುದ್ಧ ಭಗವಾನ್ ದಿಲೀಪ್. ಕೆ.



# ಡಾ. ಅಂಬೇಡ್ಕರ್ ಜೀವನ ಮತ್ತು ರಾಷ್ಟ್ರೀಯತೆ ಒಂದು ಅವಲೋಕನ

✍ ಅರುಣ ಹೊಸಮಠ

ಭಾರತರತ್ನ ಡಾ. ಬಾಬಾಸಾಹೇಬ್ ಅಂಬೇಡ್ಕರ್ ಅವರು ಶತಮಾನ ಕಂಡ ಓರ್ವ ಅತಿ ಶ್ರೇಷ್ಠ ರಾಷ್ಟ್ರನಾಯಕ. ಡಾ. ಭೀಮರಾವ್ ಅಂಬೇಡ್ಕರ್ ಅವರು ೧೪ ಏಪ್ರೀಲ್ ೧೮೯೧ ರಂದು ಈಗಿನ ಮಧ್ಯಪ್ರದೇಶದ ಮ್ಹೋವ್ ಎಂಬ ಗ್ರಾಮದಲ್ಲಿ ಜನಿಸಿದರು. ಅವರು ರಾಮಜೀ ಮಾಲೋಜೀ ಸಕ್ಪಾಲ್ ಮತ್ತು ಭೀಮಾಬ್ಯಾ ಮುರ್ಬಾದ್‌ಕರ್ ದಂಪತಿಯ ೧೪ನೇ ಮಗು. ಮರಾಠಿ ಹಿನ್ನೆಲೆಯ ಅವರ ಕುಟುಂಬ ಇಂದಿನ ಮಹಾರಾಷ್ಟ್ರದ ರತ್ನಗಿರಿ ಜಿಲ್ಲೆಯ ಅಂಬಾವಾಡೆ ಗ್ರಾಮದ ಮೂಲದ್ದು. ಮಹಾರಾಷ್ಟ್ರದ ಅಸ್ಪೃಶ್ಯರೆನೆಸಿಕೊಂಡ ಮಹಾರ್ ಜಾತಿಗೆ ಸೇರಿದ ಒಂದು ಕಡು ಬಡ ಮನೆತನದಲ್ಲಿ ಜನಿಸಿದ ಅವರು ಹಿಂದು ಸಮಾಜದಲ್ಲಿನ ದಲಿತ ವರ್ಗ ಏಳ್ಗೆಯನ್ನೆ ತನ್ನ ಪ್ರಧಾನ ಜೀವನ ಕಾರ್ಯವಾಗಿ ಸ್ವೀಕರಿಸಿದ್ದರು.

ಅಂಬೇಡ್ಕರ್ ಅವರ ಪೂರ್ವಿಕರು ಬಹುಕಾಲದಿಂದ ಬ್ರಿಟಿಷ್ ಈಸ್ಟ್ ಇಂಡಿಯಾ ಕಂಪೆನಿಯ ಸೇನೆಗೆ ಸೇರಿಕೊಂಡಿದ್ದರು. ಅಂಬೇಡ್ಕರ್ ತಂದೆ ರಾಮಜೀ ಮಾಲೋಜೀ ಸಕ್ಪಾಲ್ ಸುಬೇದಾರ್ ಹುದ್ದೆಯಲ್ಲಿ ಸೇವೆ ಸಲ್ಲಿಸುತ್ತಿದ್ದರು. ಅಂಬೇಡ್ಕರ್ ಅವರ ಪರಿಶ್ರಮ ಮತ್ತು ಸತತ ಅಧ್ಯಯನ ಶೀಲ ಗುಣಗಳು ಅವರನ್ನು ವಿಶ್ವದ ಮಹಾನ್ ಚಿಂತಕ ಮತ್ತು ಮೇಧಾವಿ ಬಿರುದನ್ನು ನೀಡಿದವು ಎಂದರೆ ತಪ್ಪಾಗದು. ಜನ್ಮಜಾತ ಅಸಾಧಾರಣ ಬುದ್ಧಿ, ಪ್ರತಿಭೆ ಮತ್ತು ಕರ್ತೃತ್ವಗಳ ಭಂಡಾರವಾಗಿದ್ದ ಡಾ. ಅಂಬೇಡ್ಕರ್ ಅವರು, ತಮ್ಮ ಅವಿರತ ಪರಿಶ್ರಮದಿಂದ ತಮಗೆ ಎದುರಾದ ಸಂಕಷ್ಟಗಳನ್ನು ವಿರುದ್ಧ ಹೋರಾಡುತ್ತಾ, ಬಾನೆತ್ತರದವರೆಗೂ ತಮ್ಮ ವ್ಯಕ್ತಿತ್ವವನ್ನು ಬೆಳೆಸಿಕೊಂಡು, ಭಾರತದ ಸಂವಿಧಾನದ ಶಿಲ್ಪಿಯಾದರು. ಇಷ್ಟೆಲ್ಲಾ ಮಹಾಸಾಧನೆಗೈದರೂ ಕೂಡ, ತಮ್ಮ ಬದುಕಿನ ಅತ್ಯಂತ ಔನ್ನತ್ಯದಲ್ಲೂ ತಮ್ಮ ಶೋಷಿತ, ಪೀಡಿತರನ್ನು ಅವರು ಮರೆಯಲಿಲ್ಲ, ಅದು ಅವರ ದೊಡ್ಡತನ. ತಾನು ತನ್ನ ಪರಿವಾರ ಎಂಬ ಸಣ್ಣ ಪರಿಸರದಲ್ಲಿ ತಮ್ಮನ್ನು ತಾವು ಸೀಮಿತಗೊಳಿಸದೆ, ವಿಶಾಲ ಕುಲ ಕೋಟಿಯ ಉನ್ನತಿಗಾಗಿ ತನ್ನ ಇಡಿ ಜೀವನವನ್ನೆ ಮುಡಿಪಾಗಿರಿಸಿರುವುದು ಅವರ ಹೃದಯವಂತಿಕೆಯ ಸಂಕೇತ.

ಡಾ. ಅಂಬೇಡ್ಕರ್ ಅವರ ಕುರಿತಾಗಿ ಸಾವಿರಾರು ಪುಸ್ತಕಗಳು ಪ್ರಕಟಗೊಂಡಿವೆ. ಅಷ್ಟೇ ಅಲ್ಲದೆ ದಿನಪತ್ರಿಕೆಗಳಲ್ಲಿ ಅಂಬೇಡ್ಕರ್ ಅವರ ಕುರಿತಾಗಿ ಅನೇಕ ಲೇಖನಗಳು ಕೂಡ ಪ್ರಕಟಗೊಂಡಿವೆ. ಕನ್ನಡ, ಇಂಗ್ಲೀಷ್, ಹಿಂದಿ ಮೊದಲಾದ ಭಾಷೆಗಳಲ್ಲಿ ಪುಸ್ತಕಗಳು ಪ್ರಕಟಗೊಂಡಿವೆ. ಅವರು ಬಾಂಬೆ ಪ್ರಾಂತ್ಯದ ವಿಧಾನಸಭೆಯಲ್ಲಿ ಮಾತನಾಡಿದ ಭಾಷಣಗಳನ್ನು ಮತ್ತು ಅವರು ಬರೆದ ಪುಸ್ತಕ ಮತ್ತು ಲೇಖನಗಳು ಭಾರತೀಯ ಸಮಾಜಕ್ಕೆ ಬೆಲೆಯುಳ್ಳ ಕಾಣಿಕೆಗಳಾಗಿವೆ. ಡಾ. ಅಂಬೇಡ್ಕರ್ ಅವರು ಕೇವಲ ದಲಿತರ ನಾಯಕ ಎಂಬ ಸೀಮಿತ ಅಭಿಪ್ರಾಯ ಸಾಮಾನ್ಯವಾಗಿ ಸಮಾಜದಲ್ಲಿ ನೆಲೆಯೂರಿದೆ. ಆದರೆ ಈ ಧೀಮಂತಚೇತನ ಭಾರತದ ಸಮಗ್ರ ಪ್ರಗತಿ ಮತ್ತು ಎಲ್ಲ ಸಮುದಾಯದ

ಬಗ್ಗೆ ಕಾಳಜಿಯನ್ನು ಹೊಂದಿದ್ದರು. ಅವರ ಪ್ರತಿಯೊಂದು ನಡೆ ಮತ್ತು ಕಾರ್ಯವು ರಾಷ್ಟ್ರದ ಹಿತದತ್ತ ಸಾಗುತ್ತಿತ್ತು. ಹುಟ್ಟಿದ ಜಾತಿ ಮತ್ತು ಅವರು ತಮ್ಮನ್ನು ಸಮರ್ಪಿಸಿಕೊಂಡ ಅಸ್ಪೃಶ್ಯರ ಏಳ್ಗೆ ಸಾಧಿಸುವಂತಹ ಜೀವನಕಾರ್ಯ ಇವುಗಳಿಂದಾಗಿ ಅವರೋರ್ವ ಅಸ್ಪೃಶ್ಯರ ನಾಯಕ ಎಂಬ ಭಾವನೆ ಸಾಮಾನ್ಯವಾಗಿ ಮೂಡುತ್ತದೆ. ಆದರೆ ಬಾಬಾಸಾಹೇಬರು ಕೇವಲ ಒಂದೇ ವರ್ಗದ ನಾಯಕರಾಗಿರಲಿಲ್ಲ. ವಾಸ್ತವಿಕವಾಗಿ ಅವರು ರಾಷ್ಟ್ರದ ಹಿತಕ್ಕೆ ಬದ್ಧರಾಗಿದ್ದ ಓರ್ವ ಅತಿಶ್ರೇಷ್ಠ ಸಮಾಜ ಸುಧಾರಕರಾಗಿದ್ದರು. ಭಾರತದ ಉಳಿದೆಲ್ಲ ನಾಯಕರಂತೆ ಡಾ.ಅಂಬೇಡ್ಕರ್ ಅವರು ಕೂಡಾ ರಾಷ್ಟ್ರದ ಎಲ್ಲ ಕ್ಷೇತ್ರ, ಎಲ್ಲ ಜಾತಿ ಮತ್ತು ಎಲ್ಲ ಭಾಗಗಳ ಏಳ್ಗೆ ಮತ್ತು ಪ್ರಗತಿ ಬಯಸಿದ್ದರು ಮತ್ತು ಆ ದಿಸೆಯಲ್ಲಿ ಅವರ ಮಾಡಿದ ಸಾಧನೆಯನ್ನು ಸಮಾಜಕ್ಕೆ ತೋರ್ಪಡಿಸುವ ಉದ್ದೇಶ ಮುಖ್ಯಸಂಗತಿಯಾಗಿದೆ.

ಬಾಬಾಸಾಹೇಬ್‌ರ ನೈಜ ಹಿರಿಮೆಯ ಎತ್ತರ, ಆಳಗಳ ಪರಿಚಯವಾಗುವುದು ಅವರು ಬದುಕಿ ಬಾಳಿದ ಏಳು ದಶಕಗಳ ಅನೇಕ ವಿಧದ ಸನ್ನಿವೇಶಗಳ ಹಿನ್ನೆಲೆಯಲ್ಲಿ ಅವರನ್ನು ಅರಿಯಲು ಪ್ರಯತ್ನಿಸಿದಲ್ಲಿ ಮಾತ್ರ. ಕೇವಲ ಒಂದೇ ಮುಖದಿಂದ ನೋಡಿ, ಅವರನ್ನು ಒಂದು ವರ್ಗದ ನಾಯಕತ್ವಕ್ಕೆ ಮಾತ್ರ ಸೀಮಿತಗೊಳಿಸುವುದು ಅವರಿಗಷ್ಟೇ ಅಲ್ಲ, ವಾಸ್ತವಿಕತೆಗೂ ಅಪಚಾರವೆಸಗಿದಂತೆ. ಅವರ ಕುರಿತಾಗಿ ವಸ್ತುನಿಷ್ಠ ಅಧ್ಯಯನ ಮಾಡಿದವರಿಗೆಲ್ಲ ಅವರೋರ್ವ ತುಂಬ ದೂರ ದೃಷ್ಟಿಯಿಂದ ಕೂಡಿದ ಅಪ್ಪಟ ರಾಷ್ಟ್ರೀಯವಾದಿ ನಾಯಕರಾಗಿದ್ದರು ಎನ್ನುವುದು ಯಾವುದು ಸಂಶಯಕ್ಕೆಡೆಯಿಲ್ಲದಂತೆ ಗೋಚರಿಸುವಂತಹ ನಿಷ್ಕರ್ಷೆ. ಈ ಲೇಖನದಲ್ಲಿ ರಾಷ್ಟ್ರದ ಏಳ್ಗೆಗೆ ಸಂಬಂಧಿಸಿಂದತೆ ಬಾಬಾಸಾಹೇಬ್‌ರು ಮಾಡಿದ ಸಾಧನೆಗಳ ಪ್ರಮುಖ ಸಂಗತಿಗಳ ಕುರಿತಾಗಿ ಚರ್ಚಿಸಲಾಗಿದೆ.

**ಶಾಂತಿಯುತ ಚಳುವಳಿ :**

೧೯೨೭ರಲ್ಲಿ ಡಾ. ಬಾಬಾಸಾಹೇಬ್ ಅವರು ಕೊಲಾಬಾ ಜಿಲ್ಲೆಯ ಮಹಾದ್‌ನಲ್ಲಿ ಜರುಗಿದ ಸಮ್ಮೇಳವೊಂದರ ಅಧ್ಯಕ್ಷತೆ ವಹಿಸಿದ್ದರು. ಅಲ್ಲಿ ಅವರು, 'ನಾವೀಗ ಮೇಲು ಕೀಳು ಎಂಬುದನ್ನು ನಮ್ಮ ಮನಸ್ಸುಗಳಿಂದ ಕಿತ್ತುಹಾಕಬೇಕಾಗಿದೆ. ಸ್ವಾವಲಂಬನೆಯನ್ನು ಕಲಿತು ಆತ್ಮಗೌರವವನ್ನು ಗಳಿಸಿಕೊಂಡಲ್ಲಿ ನಮ್ಮ ಉದ್ಧಾರವನ್ನು ಸಾಧಿಸಬಹುದು' ಎಂದು ಹೇಳಿದ್ದರು. ಸಾರ್ವಜನಿಕ ಕೆರೆ ಮತ್ತು ಬಾವಿಗಳ ನೀರನ್ನು ಎಲ್ಲರೂ ಬಳಸುವುದಕ್ಕೆ ಅವಕಾಶ ಕಲ್ಪಿಸಬೇಕು ಎಂದು ಬಾಂಬೆ ಶಾಸನಸಭೆ ಮಸೂದೆಯೊಂದನ್ನು ಅಂಗೀಕರಿಸಿತ್ತು. ಆದರು ಕೂಡಾ ವಿವಿಧೆಡೆ ದಲಿತರಿಗೆ ನೀರನ್ನು ಬಳಕೆ ಮಾಡಲು ಅವಕಾಶ ನೀಡತ್ತಿರಲಿಲ್ಲ. ಈ ಕುರಿತಾಗಿ ಬಾಬಾಸಾಹೇಬರು ಚೌದಾರ್ ಕೆರೆಗೆ ಶಾಂತಿಯುತ ಮೆರವಣಿಗೆಯನ್ನು ಹಮ್ಮಿಕೊಂಡು ಕೆರೆಯ ನೀರನ್ನು ಕುಡಿಯುವ ಮೂಲಕ ಅವರು ನವ ಇತಿಹಾಸವನ್ನೆ ನಿರ್ಮಿಸಿದರು. ಆದರೆ ಸವರ್ಣೀಯರು ಅಸ್ಪೃಶ್ಯರು ಕೆರೆಯ ನೀರನ್ನು ಕುಡಿಯುವುದನ್ನು ವಿರೋಧಿಸಿ ಹಿಂಸಾತ್ಮಕ ದಾಳಿ ನಡೆಸಿದರು. ಆದರೆ ಬಾಬಾಸಾಹೇಬ್ ಹಿಂಸೆಯಿಂದ ಪ್ರಯೋಜನವಾಗುವುದಿಲ್ಲ ಎಂದು ಮನಗಂಡು, ಯಾವುದೇ ಕಾರಣಕ್ಕೂ ಹೋರಾಟ ಶಾಂತಿಯುತವಾಗಿರಬೇಕು ಎಂದು ಕಟ್ಟುಪಾಡು ವಿಧಿಸಿದರು. ವಿವಿಧ ಮಂದಿರಗಳಲ್ಲಿ ಅಸ್ಪೃಶ್ಯರಿಗೆ ಪ್ರವೇಶ ಕುರಿತಾಗಿ ಕೂಡಾ ಸವರ್ಣೀಯರು ಅಂಬೇಡ್ಕರ್ ಮೇಲೆ ದಾಳಿ ಮಾಡಿದರು ಕೂಡಾ, ಅವರು ತಮ್ಮ ಹಕ್ಕನ್ನು ಮತ್ತೊಬ್ಬರ ಮೇಲೆ ಹಿಂಸೆ ಮಾಡಿ, ಅಸ್ಪೃಶ್ಯರಿಗೆ ನ್ಯಾಯ ಕೊಡಿಸುವುದು ಸೂಕ್ತವಲ್ಲ ಎಂಬುದನ್ನು ಅವರ ಈ ಶಾಂತಿಯುತ



ನಡೆಯಿಂದ ತಿಳಿಯಬಹುದು.

**ಸ್ಪಷ್ಟ ಧ್ಯೇಯ ಮತ್ತು ವಿಶಾಲ ಮನಸ್ಸು :**

ಸವರ್ಣೀಯರು ದಲಿತರ ಮೇಲೆ ಶತಮಾನಗಳಷ್ಟು ಅನ್ಯಾಯ ಮಾಡಿದ್ದರು ಕೂಡಾ, ಡಾ. ಅಂಬೇಡ್ಕರ್ ಸವರ್ಣೀಯರ ಮೇಲೆ ದ್ವೇಷ ಸಾಧಿಸಲಿಲ್ಲ. ಅವರು ಸಂವಿಧಾನ ರಚಿಸುವ ಸಂದರ್ಭದಲ್ಲಿ ದಲಿತರ ಏಳ್ಗೆ ಮತ್ತು ಎಲ್ಲರಿಗೂ ಸಮಾನ ಹಕ್ಕು ಈ ವಿಷಯವಾಗಿ ಒತ್ತು ನೀಡಿದರೆ ಹೊರತು, ಸವರ್ಣೀಯರಿಗೆ ಹಾನಿ ಉಂಟುಮಾಡುವ ಯಾವುದೇ ಬಗೆಯ ಕಾರ್ಯವನ್ನು ಅವರು ತಮ್ಮ ಜೀವನದಲ್ಲಿ ಮಾಡಲಿಲ್ಲ. ಈ ಗುಣವೇ ಅವರಲ್ಲಿನ ರಾಷ್ಟ್ರದ ಪ್ರಗತಿಯ ಸ್ಪಷ್ಟ ಧ್ಯೇಯ ಹೊಂದಿರುವುದನ್ನು ಮತ್ತು ವಿಶಾಲ ಮನಸ್ಸನ್ನು ತೋರ್ಪಡಿಸುತ್ತದೆ.

**ದೇಶದ ಹಿತವೇ ಮುಖ್ಯ :**

ದಲಿತ ವರ್ಗದ ಏಳ್ಗೆಗಾಗಿ ಡಾ. ಅಂಬೇಡ್ಕರ್ ಪರಿಶ್ರಮಿಸುತ್ತಿದ್ದ ದಿನಗಳಲ್ಲಿ ರಾಷ್ಟ್ರದ ಸ್ವಾತಂತ್ರ್ಯ ಸಂಗ್ರಾಮವು ಭರದಿಂದ ಸಾಗಿತ್ತು. ದಲಿತರ ಏಳ್ಗೆಯ ಜೊತೆಯಲ್ಲಿ ಒಟ್ಟು ದೇಶದ ಸ್ವಾತಂತ್ರ್ಯದ ಸಲುವಾಗಿ ಬೇಕಾದ ಮಾನಸಿಕತೆಯನ್ನು ದಲಿತ ವರ್ಗದಲ್ಲಿ ರೂಪಿಸುವುದು ಆಗ ಅವರಿಗೆ ಅಗತ್ಯವೆನಿಸಿತ್ತು. ಅಷ್ಟೇ ಅಲ್ಲದೆ ಸ್ವರಾಜ್ಯ ಪ್ರಾಪ್ತಿಗಾಗಿ ನಡೆಯುತ್ತಿದ್ದ ಇತರ ಹಲವು ಪ್ರಕ್ರಿಯೆಗಳಲ್ಲಿ ಅವರು ಅತ್ಯಂತ ಮಹತ್ವದ ಪಾತ್ರ ವಹಿಸಿದ್ದರು. ಸ್ವಾತಂತ್ರ್ಯಪೂರ್ವದಲ್ಲಿ ಮುಂಬಯಿ ಪ್ರಾಂತ್ಯದ ಶಾಸನ ಸಭೆಯಲ್ಲಿ ಅವರು ಮಾತನಾಡುತ್ತಾ, ನನ್ನ ವ್ಯಕ್ತಿಹಿತ ಹಾಗೂ ದೇಶಹಿತ ಇವೆರಡರ ನಡುವೆ ದ್ವಂದ್ವ ಉಂಟಾದಾಗ ಸಹಜವಾಗಿಯೇ ನನ್ನ ಅದ್ಯತೆ ದೇಶಕ್ಕೆ ಎಂದು ನುಡಿದಿದ್ದರು.

**ರಾಷ್ಟ್ರಕ್ಕೆ ಮಾರಕವಾಗದ ಮತಾಂತರ :**

ಡಾ. ಅಂಬೇಡ್ಕರರು ೧೯೩೫ರಲ್ಲಿ 'ನಾನು ಹಿಂದುವಾಗಿ ಹುಟ್ಟಿರುವುದು ನಿಜ. ಆದರೆ ಸಾಯುವುದಂತೂ ಹಿಂದುವಾಗಿ ಅಲ್ಲ' ಎಂಬ ಘೋಷಣೆಯನ್ನು ನೀಡಿದ್ದರು. ಡಾ. ಅಂಬೇಡ್ಕರ ಅವರು ಸುಮಾರು ಆರು ಕೋಟಿ ಅಸ್ಪೃಶ್ಯರೊಂದಿಗೆ ಅನೇಕ ಮತಗಳು ತಮ್ಮ ಮತದಲ್ಲಿ ಮತಾಂತರಗೊಳ್ಳಬೇಕು ಎಂದು ಅನೇಕ ಆಮಿಷಗಳನ್ನು ಒಡ್ಡಿದ್ದವು. ಆದರೆ ಅಂಬೇಡ್ಕರ್ ತಮ್ಮ ಮತಾಂತರದ ನಡೆ, ರಾಷ್ಟ್ರದ ಒಗ್ಗಟ್ಟಿಗೆ ಮಾರಕವಾಗದಿರಲಿ ಎಂಬ ಕಾರಣದಿಂದ ಬೌದ್ಧ ಪಂಥಕ್ಕೆ ಮತಾಂತರಗೊಂಡರು. ಅಷ್ಟೇ ಅಲ್ಲದೆ ಉಳಿದ ಅಸ್ಪೃಶ್ಯ ಅನುಯಾಯಿಗಳಿಗೆ ಬೌದ್ಧಧರ್ಮಕ್ಕೆ ಮತಾಂತರ ಹೊಂದುವಂತೆ ಪ್ರೇರೆಪಿಸಿದರು. ೧೯೪೮ರಲ್ಲಿ ಹೈದರಾಬಾದ್ ಸಂಸ್ಥಾನ ನಿಜಾಮನ ನಡೆಯನ್ನು ಕಂಡು ಅಂಬೇಡ್ಕರ್ ಅಲ್ಲಿನ ದಲಿತರಿಗೆ ನಿಜಾಮನ ಪರ ಕೈಜೋಡಿಸದಂತೆ ಕರೆ ನೀಡುವುದರ ಮೂಲಕ ಮತಾಂತರಗೊಳ್ಳದಂತೆ ತಡೆದರು. ಆಗ ಅವರು 'ಹೈದ್ರಾಬಾದ್ ಸಂಸ್ಥಾನದಲ್ಲಿರುವ ನಮ್ಮ ಎಲ್ಲ ಬಂಧುಗಳಿಗೆ ಇನ್ನೊಂದು ಎಚ್ಚರಿಕೆ. ಭಾರತದ ವೈರಿಯಾಗಿರುವ ನಿಜಾಮನೊಂದಿಗೆ ಯಾವುದೇ ಪ್ರಸಂಗದಲ್ಲಿ ಕೈಜೋಡಿಸಿ ನಮ್ಮ ಜನಾಂಗಕ್ಕೆ ಕಳಂಕ ತರಬೇಡಿ' ಎಂದು ಸೂಚನೆ ನೀಡಿದ್ದರು. ಅವರ ಈ ನಡೆ ರಾಷ್ಟ್ರದ ಬಗ್ಗೆ ಹೊಂದಿದ ಕಾಳಜಿಯನ್ನು ತೋರುತ್ತದೆ.

**ರಾಷ್ಟ್ರದ ಸಮಗ್ರ ಉತ್ಥಾನ :**

ಬಡವರ, ದೀನರ, ದಲಿತರ ಏಳ್ಗೆ ಮಾತ್ರವಲ್ಲದೆ, ರಾಷ್ಟ್ರದ ಸಮಗ್ರ ಅಭಿವೃದ್ಧಿಗೆ

ಡಾ. ಅಂಬೇಡ್ಕರ್ ಅವರ ಹೃದಯ ಮಿಡಿಯುತ್ತಿತ್ತು. ಎಲ್ಲರಿಗೂ ಉನ್ನತ ಶಿಕ್ಷಣ ದೊರೆಯಬೇಕು ಎನ್ನುವ ನಿಟ್ಟಿನಲ್ಲಿ ಅವರು ಮುಂಬೈ ಪ್ರಾಂತದ ಶಾಸನ ಸಭೆಯ ಸದಸ್ಯರಾದಾಗ ಕರ್ನಾಟಕದ ಧಾರವಾಡದಲ್ಲಿ ವಿಶ್ವವಿದ್ಯಾಲಯ ನಿರ್ಮಿಸುವಂತೆ ಸರ್ಕಾರದ ಗಮನ ಸೆಳೆದಿದ್ದರು. ಉನ್ನತ ಶಿಕ್ಷಣದ ಕುರಿತಾಗಿದ್ದ ಕಾಳಜಿಯ ಪರಿಣಾಮ ಕರ್ನಾಟಕ ವಿಶ್ವವಿದ್ಯಾಲಯ ರಚನೆಗೊಂಡಿದ್ದಲ್ಲದೆ, ದಕ್ಷಿಣ ಭಾರತದಲ್ಲಿಯೇ ಪ್ರತಿಷ್ಠಿತ ವಿಶ್ವವಿದ್ಯಾಲಯ ಎಂದು ಹೆಸರುವಾಸಿಯಾಗಿದೆ.

ಮಹಿಳೆಯರಿಗೆ ಸಮಾನ ಹಕ್ಕು, ಆರ್ಥಿಕ ಚಿಂತನೆ ಹೀಗೆ ಅನೇಕ ಕ್ಷೇತ್ರಗಳಲ್ಲಿ ಅವರ ಕಾರ್ಯ ಸಾಧನೆ ಮತ್ತು ಕೊಡುಗೆ ಅಮೂಲ್ಯವಾಗಿದೆ. ಬಾಬಾಸಾಹೇಬರು ಓರ್ವ ಮಹಾನ ಸಮಾಜ ಸುಧಾರಕ, ಧ್ವನಿ ಇಲ್ಲದವರ ಧ್ವನಿ, ಅದ್ಭುತ ವಿದ್ವಾಂಸ, ವಾಸ್ತವವಾದಿ ನಾಯಕ, ಪ್ರಸಿದ್ಧ ಅರ್ಥಶಾಸ್ತ್ರಜ್ಞ, ಮೇಧಾವಿ, ಧಾರ್ಮಿಕ ಚಿಂತಕ, ಉಜ್ವಲವಾಗ್ಮಿ, ಪ್ರಭಾವಶಾಲಿ ಪತ್ರಕರ್ತ ಮತ್ತು ಲೇಖಕ, ಶಿಕ್ಷಣತಜ್ಞ, ದಾರ್ಶನಿಕ, ವಿದೇಶಾಂಗ ನೀತಿಯ ದೂರಗಾಮಿ, ದೂರ ದೃಷ್ಟಿಯ ಯೋಜನಕಾರ ಹೀಗೆ ಈ ಬಗೆಯ ಅತಿಮಾನುಷ ಸಾಧನೆಗಳಿಂದ ಡಾ.ಅಂಬೇಡ್ಕರ್ ಅವರು ರಾಷ್ಟ್ರದ ಸರ್ವಾಂಗೀಣ ಉತ್ಥಾನಕ್ಕೆ ಅಮೂಲ್ಯ ಕೊಡುಗೆ ನೀಡಿದ್ದಾರೆ.

**ಉಪಸಂಹಾರ:**

ಸಾಮಾನ್ಯ ಸ್ಥಿತಿಯಲ್ಲಿ ಯಾರಾದರೂ ನಾಯಕವೆನಿಸಿಕೊಳ್ಳಬಹುದು. ಆದರೆ ವಿಷಮ ಸಮಯದಲ್ಲಿ ಮತ್ತು ಹಲವು ವಿವಿಧ ಸವಾಲುಗಳನ್ನು ನಿಭಾಯಿಸಬೇಕಾದಾಗ ಸಮಾಜದ ಒಟ್ಟು ಹಿತ ಯಾವುದರಲ್ಲಿದೆ ಎಂಬುದನ್ನು ಗುರುತಿಸಬಲ್ಲ. ಯೋಗ್ಯ ಕಾಲದಲ್ಲಿ ಯೋಗ್ಯ ನಿರ್ಣಯ ತೆಗೆದುಕೊಳ್ಳಬಲ್ಲ, ತನ್ನ ಅನುಯಾಯಿಗಳನ್ನು ಎಲ್ಲ ಪ್ರಸಂಗಗಳಲ್ಲೂ ಹಿತಕಾರಿಯಾದ ದಿಕ್ಕಿನಲ್ಲೇ ಮುನ್ನಡೆಸಬಲ್ಲ. ಸಮಗ್ರ ಜನಕಲ್ಯಾಣ ಮತ್ತು ಸಮಾಜದ ಹಿತಯಾವುದರಲ್ಲಿದೆ ಎಂಬುದನ್ನು ಗುರುತಿಸಿ, ತನ್ನವರಿಗಾಗಲಿ ತನ್ನ ವಿರೋಧಿಗಳಿಗೇ ಆಗಿರಲಿ ಅಪ್ರಿಯವೆನಿಸಬಹುದಾದರೂ ಸತ್ಯವನ್ನೇ ಹೇಳುವಂತಹ ಛಾತಿ ತೋರಿಸಬಲ್ಲ ಮುಂದಾಳುವೇ ನಿಜವಾದ ಸಾಮಾಜಿಕ ನಾಯಕ. ಡಾ. ಅಂಬೇಡ್ಕರ್ ಅವರು ಈ ಮೇಲೆ ತಿಳಿಸಿದ ಎಲ್ಲ ಗುಣಗಳನ್ನು ಹೊಂದಿದ್ದರು. ಈ ಧೀಮಂತರಾಷ್ಟ್ರವಾದಿ ನಾಯಕ ಕೇವಲ ಒಂದು ವರ್ಗದ ಉನ್ನತಿಗೆ ಶ್ರಮಿಸಿದ್ದಾರೆ ಎಂದು ತಿಳಿಯುವುದು ಮತ್ತು ಆ ಬಗೆಯಲ್ಲಿ ಪ್ರಚಾರ ನೀಡುವುದು ತರವಲ್ಲ. ಅಂಬೇಡ್ಕರ್ ಭಾರತದ ಅಭ್ಯುದ್ಯಯಕ್ಕೆ ಹಗಲಿರುಳು ಶ್ರಮಿಸಿದ ಮತ್ತು ಚಿಂತಿಸಿದ ಮಹಾನ್ ಚೇತನ ಎಂಬುದರಲ್ಲಿ ಎರಡು ಮಾತಿಲ್ಲ.

**ಗ್ರಂಥಋಣ**

೧) ಧನಂಜಯಕೀರ್, (೨೦೦೫). ಡಾ.ಅಂಬೇಡ್ಕರ್ – ಲೈಫ್‌ಆ್ಯಂಡ್ ಮಿಷನ್. ಮುಂಬೈ: ಪ್ಯಾಪುಲರ್ ಪ್ರಕಾಶನ.

೨) ದತ್ತೋಪಂತ ಠೇಂಗಡಿ, (೧೯೯೫). ಸಾಮಾಜಿಕ ಕ್ರಾಂತಿಸೂರ್ಯ ಡಾ.ಬಾಬಾಸಾಹೇಬ್ ಅಂಬೇಡ್ಕರ್. ಬೆಂಗಳೂರು: ರಾಷ್ಟ್ರೋತ್ಥಾನ ಪ್ರತಿಷ್ಠಾನ.

೩) ಚಂದ್ರಶೇಖರ ಭಂಡಾರಿ. (೨೦೦೨), ರಾಷ್ಟ್ರನಾಯಕ ಡಾ.ಅಂಬೇಡ್ಕರ್. ಬೆಂಗಳೂರು: ರಾಷ್ಟ್ರೋತ್ಥಾನ

೪) ಡಾ.ಬಾಬಾಸಾಹೇಬ ಅಂಬೇಡ್ಕರ್ ಅವರ ಸಮಗ್ರ ಬರೆಹಗಳು ಮತ್ತು ಭಾಷಣಗಳು, (೨೦೧೦). ಬೆಂಗಳೂರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ.

# ಬಾಗಲಕೋಟ ಪ್ರದೇಶದಲ್ಲಿನ ವಿಜಯನಗರ ಶಾಸನಗಳು

**ಡಾ. ದಶರಥ ಹರಿಜನ**

**ಡಾ. ಚಂದ್ರಕಲಾ. ಸಿ. ಹಳ್ಳಿ.**

---

**ಪ್ರಸ್ತಾವನೆ:**

ಬಾಗಲಕೋಟೆಯು ಕರ್ನಾಟಕ ರಾಜ್ಯದ ಐತಿಹಾಸಿಕ ಸ್ಥಾನವನ್ನು ಹೊಂದಿರುವ ಅಂದಿನ ವಿಜಾಪುರ ಜಿಲ್ಲೆಯು [ವಿಜಯಪುರ] ಒಂದು ತಾಲೂಕು ಕೇಂದ್ರವಾಗಿತ್ತು. ಆದರೆ  ಭಾರತದ ಸ್ವಾತಂತ್ರ್ಯದ ೫೦ನೇ ವರ್ಷದ ಸವಿನೆನಪಿನ ಆಚರಣೆಯ ಸಂದರ್ಭವಾದ ಅಗಷ್ಟ ೧೫, ೧೯೯೭ ರಂದು ಹೊಸ ಜಿಲ್ಲೆಯಾಗಿ ರಚಿಸಲ್ಪಟ್ಟಿತು. ಇಂದು ಈ ಜಿಲ್ಲೆಯು ಆರು ತಾಲೂಕುಗಳನ್ನು ಒಳಗೊಂಡಿದ್ದು, ಅವುಗಳೆಂದರೆ ಬಾದಾಮಿ, ಬಾಗಲಕೋಟೆ, ಬೀಳಗಿ, ಮುಧೋಳ, ಹುನಗುಂದ  ಮತ್ತು ಜಮಖಂಡಿ ಈ ಜಿಲ್ಲೆಯಲ್ಲಿ ಕೃಷ್ಣಾ, ಮಲಪ್ರಭಾ ಮತ್ತು ಘಟಪ್ರಭಾ ನದಿಗಳಿದ್ದು, ಇವು ಈ ಜಿಲ್ಲೆಯ ಜನರ ಜೀವನಾಡಿಗಳಾಗಿದ್ದು ಅವು ಜಿಲ್ಲೆಯ ಕೂಡಲಸಂಗಮದಲ್ಲಿ ಕೂಡುತ್ತವೆ. ಇದು ಕಪ್ಪು ಮತ್ತು ಮರಳು ಮಿಶ್ರಿತ ಕೆಂಪು ಮಣ್ಣಿನಿಂದ ಕೂಡಿದ ಪ್ರದೇಶವಾಗಿದೆ.

**ಜಿಲ್ಲೆಯ ರಾಜಕೀಯ ಇತಿಹಾಸ:**

ಬಾಗಲಕೋಟೆ ಜಿಲ್ಲೆಯು ಇತಿಹಾಸವು ಪ್ರಾಗೈತಿಹಾಸಿಕಕ್ಕೆ ಸಂಬಂದಿಸಿದ ಅನೇಕ ನೆಲೆಗಳು ಈ ಜಿಲ್ಲೆಯಲ್ಲಿ ಲಭ್ಯವಾಗಿದ್ದು ಅವುಗಳನ್ನು ಆದಿಹಳೆಯ ಶಿಲಾಯುಗ, ಮಧ್ಯಹಳೆಯ ಶಿಲಾಯುಗ ಸಂಸ್ಕೃತಿ, ನೂತನ ಶಿಲಾಯುಗ ಸಂಸ್ಕೃತಿ ಶಿಲಾತಾಮ್ರಯುಗ ಸಂಸ್ಕೃತಿ, ಇತಿಹಾಸ ಕಾಲಘಟ್ಟಕ್ಕೆ ಬಂದರೆ ಈ ಜಿಲ್ಲೆಯಲ್ಲಿ ಶಾತವಾಹನರು ಬಾದಾಮಿ ಚಾಲುಕ್ಯರು, ರಾಷ್ಟ್ರಕೂಟರು, ಕಲ್ಯಾಣದ ಚಾಲುಕ್ಯರು, ನೊಳಂಬರು, ಕಳಚೂರಿಯರು, ಸೇವುಣರು, ವಿಜಯನಗರ ಹಾಗೂ ಆದಿಲ್‌ಶಾಹಿಗಳ ಕಾಲದ ಶಾಸನಗಳು ಲಭ್ಯವಾಗಿದ್ದು ಈ ಮನೆತನಗಳ ಆಳ್ವಿಕೆಯನ್ನು ಗುರುತಿಸಬಹುದಾಗಿದೆ. ಈವರೆಗೆ ಈ ಜಿಲ್ಲೆಯ ವಿವಿಧ ರಾಜಮನೆತನಗಳು ೬೪೭ ಶಾಸನಗಳು ಪ್ರಕಟವಾಗಿದ್ದು ಅವುಗಳಲ್ಲಿ ೨೪ ಶಾಸನಗಳು ವಿಜಯನಗರ ಕಾಲಕ್ಕೆ ಸೇರಿದ್ದಾಗಿವೆ. ಈ ಜಿಲ್ಲೆಯನ್ನು ಆಳಿದ ಪ್ರಮುಖ ರಾಜಮನೆಗಳಲ್ಲೊಂದಾದ ವಿಜಯನಗರ ಸಾಮ್ರಾಜ್ಯವನ್ನು ಸಂಗಮ ಮನೆತನದ ಹಕ್ಕ ಬುಕ್ಕ ಕಂಪ್ಪಣ ಮುದ್ದಪ್ಪ ಹಾಗೂ ಮಾರಪ್ಪರೆಂಬ ಐದು ಜನ ಸೋದರರಿಂದ ಕ್ರಿ.ಶ.೧೩೪೭ರಲ್ಲಿ ಅಸ್ತಿತ್ವಕ್ಕೆ ಬಂದಿತು. ವಿಜಯನಗರ ಸಾಮ್ರಾಜ್ಯ ತುಂಗಭದ್ರಾ ನದಿಯ ದಂಡೆಯ ಮೇಲಿರುವ ಹಂಪಿಯನ್ನು ರಾಜಧಾನಿಯನ್ನು ವರಾಹವನ್ನು ರಾಜ್ಯ ಲಾಂಛನ ಮಾಡಿಕೊಂಡು ಅಧಿಕಾರಕ್ಕೆ ಬಂದ ವಿಜಯನಗರವನ್ನು ನಾಲ್ಕು ವಂಶದವರು ಆಳಿದರು. ಅವುಗಳೆಂದರೆ ಸಂಗಮ ವಂಶ (೧೩೪೭–೧೪೮೫) ಸಾಳುವ ವಂಶ (೧೪೮೫–೧೫೦೫) ತುಳುವ ವಂಶ (೧೫೦೫–೧೫೬೭) ಮತ್ತು ಅರವೀಡು ವಂಶ (೧೫೭೦–೧೬೪೬) ಸಂಗಮ ವಂಶದ ಮೊದಲ ದೊರೆಯಾದ ಹರಿಹರನ [ಕ್ರಿ.ಶ.೧೩೩೬–೫೬] ಶಾಸನವು ಈ ಜಿಲ್ಲೆಯಲ್ಲಿ ದೊರೆಯುವುದರಿಂದ ಪ್ರಾರಂಭದಿಂದಲೂ ಇದು ವಿಜಯನಗರ ಅಧೀನವಾಗಿತ್ತು ಎಂದು ತಿಳಿದುಬರುತ್ತದೆ. ಬಾದಾಮಿ ತಟ್ಟುಕೋಟೆ

ಮೇಲಿರುವ ಶಾಸನವು ವಿಜಯನಗರ ಅರಸರಾದ ಹರಿಹರನು ಬಾದಾಮಿಯಲ್ಲಿ ಕೋಟೆಯಲ್ಲಿ ಕಟ್ಟಿ ಬಾದಾಮಿ ಸೀಮೆಯನ್ನು ಒಂದು ಆಡಳಿತ ಕೇಂದ್ರವಾಗಿ ಮಾಡಿಕೊಂಡು ಆಡಳಿತ ನಡೆಸಿದುದಾಗಿ ತಿಳಿದುದಾಗಿ ತಿಳಿದುಬರುತ್ತದೆ. ಇವನ ನಂತರ ಅಧಿಕಾರಕ್ಕೆ ಬಂದವರು ಸಾಳ್ವ ಮನೆತನದ ೧ ಶಾಸನ ಲಭ್ಯವಾಗಿದ್ದು, ಅವರ ಆಳ್ವಿಕೆಗೆ ಈ ಜಿಲ್ಲೆಯು ಒಳಗಾಗಿತ್ತು ಎಂದು ಹೇಳಬಹುದು. ಅನಂತರ ಆಳಿದ ತುಳು ಮನೆತನದ ಕೃಷ್ಣದೇವರಾಯನ ಶಾಸನವು ಲಭ್ಯವಾಗಿವೆ. (ಕ್ರಿ.ಶ.೧೫೦೯-೧೫೨೯)ರಲ್ಲಿ ಬಾಗಲಕೋಟೆ ಜಿಲ್ಲೆಯ ವಿಜಯನಗರ ಅಳ್ವಿಕೆಗೆ ಒಳಪಟ್ಟಿತ್ತೆಂದು ತಿಳಿದುಬರುತ್ತದೆ.

ಕೃಷ್ಣದೇವರಾಯನ ನಂತರ ವಿಜಯನಗರ ಸಾಮ್ರಾಜ್ಯದ ಸಿಂಹಾಸನವನ್ನು ಅಚ್ಯುತರಾಯ ಏರಿದನು. ಇವನ ಕಾಲದ ಎರಡು ಶಾಸನಗಳು ಈವರೆಗೆ ಪ್ರಕಟವಾಗಿದ್ದು ಒಂದು ಶಾಸನವು ಬಾದಾಮಿಯಲ್ಲಿದ್ದು ಇನ್ನೊಂದು ಅನುವಾಳದಲ್ಲಿದೆ. ಇನ್ನೊಂದು ಬಾದಾಮಿ ಕ್ರಿ.ಶ. ೧೫೪೩ರ ಶಾಸನದಲ್ಲಿ ಕೊಂಡರಾಜವೆಂಬುವನು ಕೊತ್ತಲವನ್ನು ನಿರ್ಮಿಸಿದಂತೆ ಹೇಳುತ್ತದೆ. ಅನುವಾಳದಲ್ಲಿರುವ ಶಾಸನವು ದಾನ ಶಾಸನವಾಗಿದೆ. ಇವುಗಳ ಆಧಾರದ ಮೇಲೆ ಈ ಜಿಲ್ಲೆಯ ಅಚ್ಯುತರಾಯನ ಆಳ್ವಿಕೆ ಒಳಪಟ್ಟಿತ್ತೆಂದು ಗುರುತಿಸಬಹುದಾಗಿದೆ. ಸದಾಶಿವರಾಯ ಮತ್ತು ಇವನ ಸಾಮಂತರಿಂದ ಬರೆಸಲ್ಪಟ್ಟಿರುವ ಶಾಸನಗಳು ಲಭ್ಯವಾಗಿವೆ. ಅವು ವಿವಿಧ ದೇವಾಲಯಗಳ ಭೂದಾನ, ದೇವಾಲಯ ಜೀರ್ಣೋದ್ಧಾರ ಅಂಗ, ರಂಗಭೋಗಕ್ಕೆ ಪೂಜಾ ಕಾರ್ಯಗಳಿಗೆ ಮತ್ತು ತೆರಿಗೆ ಬಿಟ್ಟಿದ್ದನ್ನು ಕೋಟೆ ನಿರ್ಮಿಸಿದನ್ನು ತಿಳಿಸುತ್ತದೆ. ವಿಜಯನಗರ ಅರಸರು ಹುನಗುಂದ ಪ್ರದೇಶದ ಮೇಲೆ ವಿಧಿಸುತ್ತಿದ್ದ ತೆರಿಗೆ ರದ್ದು ಮಾಡಿರುವುದು ತಿಳಿದುಬರುತ್ತದೆ. ಸದಾಶಿವನ ನಂತರ ಈ ಜಿಲ್ಲೆಯು ವಿಜಯನಗರ ಸಾಮಂತರ ಆಳ್ವಿಕೆಗೆ ಒಳಗಾಯಿತು. ಈ ಶಾಸನಗಳನ್ನು ನೋಡಿದರೆ ವಿಜಯನಗರ ಅರಸರ ಕಾಲದಲ್ಲಿ ಬಾಗಲಕೋಟೆ ಪ್ರದೇಶವು ರಾಜಕೀಯ ಪ್ರಾಮುಖ್ಯತೆಯನ್ನು ಪಡೆದುಕೊಂಡಿತ್ತೆಂದು ತಿಳಿದುಬರುತ್ತದೆ. ಕ್ರಿ.ಶ.೧೫೬೫ ರಲ್ಲಿ ಐದು ಶಾಹಿ ಸುಲ್ತಾನರು ಒಂದೂಗೂಡಿ ಜನೇವರಿ ೨೩ರಂದು ರಕ್ಕಸ ತಂಗಡಿಗಿ ಎಂಬಲ್ಲಿ ಯುದ್ಧ ಹೂಡಿದ್ದರು. ಅಂತಿಮವಾಗಿ ರಾಮರಾಯನು ಶತ್ರುಗಳ ಕೈಗೆ ಸೆರೆಯಾದನು. ಸುಲ್ತಾನರು ರಾಮರಾಯನನ್ನು ಕೊಲೆ ಮಾಡಿದರು. ಹೀಗಾಗಿ ವಿಜಯನಗರ ಸಾಮ್ರಾಜ್ಯದ ಆಳ್ವಿಕೆಯನ್ನು ಅಂತ್ಯವಾಯಿತು. ರಾಮರಾಯನ ಸೋದರನಾದ ವೆಂಕಟಾದ್ರಿ ಹಾಗೂ ತಿರುವಲಿರು ರಾಜಧಾನಿ ವಿಜಯನಗರಕ್ಕೆ ಹಿಂತಿರುಗಿ ಅದರ ರಕ್ಷಣೆಯನ್ನು ಮಾಡಲು ಗಮನ ಕೊಡದೇ ಬಂಧನಕ್ಕೆ ಒಳಗಾಗಿದ್ದ ಸದಾಶಿವರಾಯನನ್ನು ಸೇರಿಸಿಕೊಂಡು ಅರಮನೆಯ ಸಂಪತ್ತನ್ನು ಆನೆ ಮೇಲೆ ಹೇರಿಕೊಂಡು ಪೇನಗೊಂಡಗೆ ಹೋದರು ಇದು ಮುಂದೆ ಅರವಿಡ ಅರಸರ ರಾಜಧಾನಿಯಾಗಿ ಕ್ರಿ.ಶ. ೧೬೬೪ರವರೆಗೆ ಮುಂದುವರೆದು ವಿಜಯನಗರ ಸಾಮ್ರಾಜ್ಯವು ಅಂತ್ಯವಾಯಿತು.

**ಧಾರ್ಮಿಕ ವ್ಯವಸ್ಥೆ :**

ಈ ಪ್ರದೇಶದಲ್ಲಿ ದೊರೆತಿರುವ ಶಾಸನಗಳಲ್ಲಿ ಉಲ್ಲೇಖವಾಗಿರುವ ಶೈವ, ವೈಷ್ಣವ, ಜೈನ ಧರ್ಮಗಳಿಗೆ ಸಂಬಂಧಿಸಿದಂತೆ ಆಯಾ ಧರ್ಮೀಯರು ನಡೆಸಿದ ವ್ರತಗಳು ಅಚರಣೆಗಳು, ಧಾರ್ಮಿಕ ನಂಬಿಂಕೆಗಳು ಕಟ್ಟಿಸಿದ ದೇವಾಲಯಗಳು.



ದೇವಾಲಯಗಳಲ್ಲಿ ದಿನನಿತ್ಯ ನಡೆಯುವ ಕಾರ್ಯಗಳಾದ ಅಂಗ-ಭೋಗ, ರಂಗಭೋಗ, ಋಗ್ವೇದ ಖಂಡಿಕ, ಶಾಸ್ತ್ರಖಿಡಿಕ ಖಂಡಸ್ಫುಟಿತ, ಜೀರ್ಣೋದ್ಧಾರಗಳಿಗಾಗಿ ಬಿಟ್ಟಿರುವ ದಾನ□ದತ್ತಿಗಳು ಪೂಜೆಗಳಿಗಾಗಿ ಮಾಡಿಸಿದ ದೇವ-ದೇವತೆಗಳ ಮೂರ್ತಿಶಿಲ್ಪಗಳು ಮತ್ತು ದೇವಾಲಯಗಳನ್ನು ರಾಜ ಮಹಾರಾಜರಿಂದ ಹಿಡಿದು ಶ್ರೀಸಾಮಾನ್ಯವರೆಗೆ ಮಹಾರಾಣಿರಿಂದ ಹಿಡಿದು ಸಾಮಾನ್ಯ ಮಹಿಳೆಯವರೆಗಿನ ಜನರು ನಿರ್ಮಿಸಿದ್ದಾರೆ. ಇವರು ಯಾವುದೇ ಮತ-ಪಂಥ ಧರ್ಮಗಳಿಗೆ ಸೇರಿದರು. ಸಹ ಅನ್ಯಮತೀಯರ ದೇವಾಲಯಗಳಿಗೆ ದಾನ-ದತ್ತಿ ನೀಡಿ ಧಾರ್ಮಿಕ ಉದ್ಧಾರತೆಯನ್ನು ಮೆರೆದಿದ್ದಾರೆ.

**ಶೈವ ಧರ್ಮ :**

ಶಿವೋಪಾಸನೆಯ ಇತಿಹಾಸವು ವೇದಗಳಿಗಿಂತಲೂ ಹಿಂದಕ್ಕೆ ಹೋಗುತ್ತದೆ. ಹರಪ್ಪ-ಮೊಹೆಂಜೊದಾರೋಗಳ ಸ್ಕಂಧವ ಸಂಸ್ಕೃತಿಯಲ್ಲಿ (ಸು.ಕ್ರಿ.ಪೂ ೩೨೫೦-೨೭೫೦) ಕೊಂಬುಗಳಿರುವ ದೇವತೆಯ ಚಿತ್ರವಿರುವ ಮುದ್ರಿಕೆಗಳೂ ಲಿಂಗಗಳೂ ದೊರಕಿವೆ. ಕೊಂಬುಗಳಿರುವ ದೇವತಗಳಿಗೆ ಮೂರು ಮುಖಗಳಿಂದ ಅವನು ಯೋಗಸಮಾಧಿಯ ಭಂಗಿಯಲ್ಲಿ ಕುಳಿತಿದ್ದಾನೆ. ಅವನ ಸುತ್ತಮುತ್ತ ಮತ್ತು ಪೀಠದ ಕೆಳಗೆ ಆನೆ, ಹುಲಿ, ಖಡ್ಗ ಮೃಗ, ಎಮ್ಮೆ, ಜಿಂಕೆಗಳು ಸುತ್ತವರಿದಿರುವದರಿಂದ ಇದನ್ನು ಪರಿಶೀಲಿಸಿ ಆ ವಿಗ್ರಹವು ಹಿಂದೂಧರ್ಮದ ಮಹಾಯೋಗಿ ಪಶುಪತಿಯೂ ಅದ ಶಿವನ ಪ್ರಾಚೀನ ರೂಪವನ್ನು ಸೂಚಿಸುತ್ತದೆಯೆಂದು ಸರ ಜಾನ್ ಮಾರ್ಷಲ್ಲರು ಅಭಿಪ್ರಾಯಪಡುತ್ತಾರೆ. ಋಗ್ವೇದದಲ್ಲಿ ರುದ್ರನು ದುಷ್ಟಶಕ್ತಿಗಳಿಗೆ ಅಧಿಪತಿಯೆಂಬಂತೆ ಚಿತ್ರಿತನಾಗಿದ್ದಾನೆ. ರುದ್ರ ಎಂದರೆ ಗರ್ಜಿಸುವವನು ಎಂದರ್ಥ. ಮುಂದೇ ಶಿವನಿಗೆ ಅನ್ವಯಿಸಲಾದ ಅನೇಕ ಲಕ್ಷಣಗಳನ್ನು ರುದ್ರನಿಗೆ ಅನ್ವಯಿಸಿ ಅಲ್ಲಿ ಹೇಳಲಾಗಿದೆ. ಉದಾಹರಣೆಗೆ ರುದ್ರನ ವಾಸಸ್ಥಾನವು ಪರ್ವತಗಳಲ್ಲಿ ಅವನು ಜಟೆಯನ್ನು ಎತ್ತಿ ಕಟ್ಟಿದ್ದಾನೆ ಚರ್ಮವನ್ನು ಧರಿಸಿದ್ದಾರೆ. ಸ್ವಭಾವತಃ ಭಯಂಕರನಾದ ಅವನು ಮಂಗಳಕರ ಅಥವಾ 'ಶಿವ' ನಾಗಲೆಂದು ಪ್ರಾರ್ಥನೆ ಮಾಡಿರುವುದು ಕಂಡುಬರುತ್ತದೆ. ಕರ್ನಾಟಕದಲ್ಲಿ ಅತಿ ಪ್ರಾಚೀನ ಶೈವ ದೇವಾಲಯದ ಉಲ್ಲೇಖ ನರಗುಂದ ತಾಲೂಕಿನ ಬಾದಾಮಿಯ ಸಮೀಪದಲ್ಲಿರುವ ವಾಸನದಲ್ಲಿ ದೊರೆತ ಕ್ರಿ.ಶ. ೨-೩ನೇ ಶತಮಾನದ ಶಾಸನದಿಂದ ತಿಳಿದುಬರುತ್ತದೆ. ಬಾದಾಮಿ ಚಾಲುಕ್ಯರ ಕಾಲದ ಪೂರ್ವದಲ್ಲಿ ಶೈವ ಧರ್ಮ ಬಾಗಲಕೋಟೆ ಜಿಲ್ಲೆಯ ಇತ್ತು ಎಂದು ತಿಳಿದುಬರುತ್ತದೆ.

ಕ್ರಿ.ಶ.೧೫೦೯ಕ್ಕೆ ಸೇರಿದ ಕೆರೂರ ಶಾಸನವು ತ್ರುಟಿತವಾಗಿದೆ. ಮಹಾಮಂಡಳೇಶ್ವರನೊಬ್ಬನು ಬಸವ ದೇವರಿಗೆ ದಾನ ಕೊಟ್ಟಿರುವ ಭೂಮಿಯ ಸೀಮೆಗಳನ್ನು ಮಾತ್ರ ಉಲ್ಲೇಖಿಸುತ್ತದೆ. ಇದು ಕೃಷ್ಣದೇವರಾಯನ ಕಾಲಕ್ಕೆ ಸೇರಿದ್ದಾಗಿರಬಹುದೆಂದು ಊಹಿಸಲಾವಕಾಶವಿದೆ. ಮೂರನೆಯ ಶಾಸನವು ಬೀಳಗಿಯ ಸಿದ್ದೇಶ್ವರ ದೇವಾಲಯದಲ್ಲಿರುವ ಕ್ರಿ.ಶ.೧೫೫೮ ಕಾಲಕ್ಕೆ ಸೇರಿದ್ದು ಇದು ತ್ರುಟಿತವಾಗಿದ್ದು ಇದರಲ್ಲಿ ಅರಸನ ಉಲ್ಲೇಖವಿಲ್ಲಾ. ಆದರೆ ವಜೀರ್ ಹೈದರಖಾನನ ಸೇವಕನಾದ ಶೈನಿಕಗೋತ್ರದ ಖಂಡೇರಾವ ತಿಮ್ಮಾಜಿ ಎಂಬುವನು ಎರಡು ದೀಪಸ್ತಂಭಗಳನ್ನು ನಿಲ್ಲಿಸಿದನ್ನು ತಿಳಿಸುತ್ತದೆ. ನಾಲ್ಕನೆಯ ಶಾಸನವು ಜಮಖಂಡಿ ತಾಲೂಕಿನ ಕೊಣ್ಣೂರ ಗ್ರಾಮದಲ್ಲಿದ್ದು ಕ್ರಿ.ಶ.೧೬೭೫ಕ್ಕೆ ಸೇರಿದ್ದಾಗಿದೆ. ಶಾಸನವು ತ್ರುಟಿತವಾಗಿದ್ದು ವಿಜಯನಗರ ಸಾಮಂತನಾಗಿರಬಹುದಾದ ನಾಗಣ್ಣಗೌಡನು? ಬೀರೇದೇವರ ದೇವಾಲಯದ

ಚಂದ್ರಶಾಲೆಯನ್ನು ಕಟ್ಟಿಸಿದಂತೆ ತಿಳಿಸುತ್ತದೆ. ಐದನೆಯ ಶಾಸನವು ಬೀಳಗಿಯ ಸಿದ್ದೇಶ್ವರ ದೇವಾಲಯದ ಮೆಟ್ಟಿಲುಗಳ ಮೇಲಿರುವ ಕ್ರಿ.ಶ.೧೬೯೫ಕ್ಕೆ ಸೇರಿದ್ದಾಗಿದ್ದು ಇದು ತ್ರುಟಿತವಾಗಿದ್ದು ಇದರಲ್ಲಿ ಖಂಡೇರಾವ ತಿಮ್ಮಾಜಿ ಎಂಬುವನು ಪೂರ್ವದ್ವಾರವನ್ನು ಮಾಡಿಸಿರುವುದನ್ನು ಹೇಳುತ್ತದೆ.

**ಶಕ್ತಿ ಆರಾಧನೆ:**

ಬಾಗಲಕೋಟೆ ಜಿಲ್ಲೆಯಲ್ಲಿ ಶಕ್ತಿ ದೇವತೆ ಪಂಥವನ್ನು ಕುರಿತು ಉಲ್ಲೇಖಿಸುವ ಒಟ್ಟು ೩ ಶಾಸನಗಳು ಈವರೆಗೆ ಪ್ರಕಟವಾಗಿವೆ. ಇವುಗಳಲ್ಲಿ ಅಚ್ಯುತದೇವರಾಯನ ೧) ಸದಾಶಿವರಾಯನ ೧, ಹೆಸರಿನ ಉಲ್ಲೇಖವಿಲ್ಲದ ತ್ರುಟಿತವಾಗಿರುವ ಕ್ರಿ.ಶ.೧೪ನೆಯ ಶತಮಾನಕ್ಕೆ ಸೇರಿದ ೧, ಇವೆ. ಈ ೩ ಶಾಸನಗಳು ಬಾದಾಮಿ ತಾಲೂಕಿನಲ್ಲಿದ್ದು ಇವುಗಳಲ್ಲಿ ಮೊದಲನೆಯ ಶಾಸನವು ಕ್ರಿ.ಶ.೧೫೩೨ಕ್ಕೆ ಸೇರಿದಿವೆ. ಬಾದಾಮಿ ಶಾಸನವಾಗಿದ್ದು ಇದು ಅಚ್ಯುತದೇವರಾಯನ ಆಳ್ವಿಕೆಯ ಕಾಲದಲ್ಲಿ ಮುಸಲ್ಮಾನರಿಂದ (ಮಹಾರಾಜ) ನಾಶವಾಗಿದ್ದ ಬಾದಾಮಿಯ ಬನಶಂಕರಿ ದೇವಾಲಯ ಮೊದಲಾದ ದೇವಾಲಯಗಳನ್ನು ಜೀರ್ಣೋದ್ಧಾರ ಮಾಡಬೇಕೆಂದು ಅಚ್ಯುತರಾಯನು ತನ್ನ ಸೇನಾಪತಿ ಆದ ಚಿಕ್ಕಪ್ಪನಾಯಕನಿಗೆ ಹೇಳುತ್ತಾನೆ. ಅವನು ತನ್ನ ಮಗನಾದ ಚಿಕ್ಕಚಿನ್ನಪ್ಪ ನಾಯಕನಿಗೆ ಹೇಳೂತ್ತಾನೆ. ಚಿಕ್ಕಚಿನ್ನಪ್ಪನಾಯಕನನ್ನು ಬನದ ದೇವಿಯ ದೇವಾಲಯವನ್ನು ಜೀರ್ಣೋದ್ಧಾರ ಮಾಡಿಸಿ. ಅಚ್ಯುತ ಮಹಾರಾಯರಿಗೂ, ತನ್ನ ಸ್ವಾಮಿ ಚಿನ್ನಪ್ಪನಾಯಕರಿಗೂ ಆಯುರಾರೋಗ್ಯ ಆಯುಶ್ವಯಾಃಭಿ ವೃದ್ಧಿಯಾಗಬೇಕೆಂದು ಎಂದು ಮತ್ತು ಮಹಾಚರಣದರ್ಶನಿಯಾದ ಭುವನಾಧೀಶ್ವರಿಗೆ ಎಂದು ಉಲ್ಲೇಖಿಸುತ್ತದೆ.

ಎರಡನೆಯ ಶಾಸನವು ಕ್ರಿ.ಶ.೧೫೪೪ಕ್ಕೆ ಸೇರಿದ್ದು ಅದೇ ತಾಲೂಕಿನ ಬನಶಂಕರಿ ದೇವಾಲಯದ ಪ್ರಕಾರದಲ್ಲಿರುವ ಕಲ್ಲಿನ ಮೇಲೆಯಿದ್ದು ಇದು ಸದಾಶಿವರಾಯ ಆಳ್ವಿಕೆಯ ಕಾಲದಲ್ಲಿ ಹಡಪದ ಯರೆಕೃಷ್ಣಪ್ಪನಾಯಕನು ಬನದ ಮಹಾಮಾಯಿತು ಆದ ಅಮೃತಪಡಿಯ ಅಂಗರಂಗ ವೈಭವಕ್ಕೆಂದು ಬಾದಾಮಿ ಸೀಮೆಗೆ ಸಲ್ಲುವ ನದಿತೀರವಾದ ದಾಣಕ ಸಿರಿವೂರನ್ನು ದಾನವಾಗಿ ಕೊಟ್ಟಿರುವುದನ್ನು ಉಲ್ಲೇಖಿಸುತ್ತದೆ.

ಮೂರನೆಯ ಶಾಸನವು ಬಾದಾಮಿ ತಾಲೂಕಿನ ಚೋಳಚಗುಡ್ಡ ಗ್ರಾಮದಲ್ಲಿದ್ದು, ಕ್ರಿ.ಶ.೧೪ನೆಯ ಶತಮಾನಕ್ಕೆ ಸರಿದ್ದಾಗಿದೆ. ಶಾಸನವು ತ್ರುಟಿತವಾಗಿದ್ದು, ಹೆಸರು ಉಲ್ಲೇಖವಿಲ್ಲ. ಇದರಲ್ಲಿ ಭುವನಾಧೀಶ್ವರಿ (ಬನಶಂಕರಿ)ಯ ಮೂರು ಗೊರವರು ಮತ್ತು ಜಂಗಮಯ ಮೋಜರಗಳ ಅಡಿಕೆ ಫಲವನ್ನು ಕೊಂಡು ಸರ್ವಮಾನ್ಯವಾಗಿ ಯಾರಿಗೋ ದಾನ ನೀಡಿರುವ ವಿಷಯವಿದೆ ಬಹುಶಃ ಈ ದಾನವನ್ನು ಹೋರಾಟದಲ್ಲಿ ಮಡಿದ ವೀರನ ಕುಟುಂಬಕ್ಕೆ ನೀಡಿರಬಹುದು.

**ವೈಷ್ಣವ ಧರ್ಮ:**

ಶಿವನಿಗೆ ಒಂದು ಇತಿಹಾಸವಿರುವಂತೆ ಹಿಂದೂ ಧರ್ಮದಲ್ಲಿ ಅವನಷ್ಟೇ ಪ್ರಬಲ ದೇವತೆಯಾಗಿರುವ ವಿಷ್ಣುವಿಗೂ ಒಂದು ಇತಿಹಾಸ ಇದೆ. ವಿಷ್ಣುವು ವೇದಗಳಲ್ಲಿ ಪ್ರಧಾನ ದೇವತೆಯಲ್ಲದಿದ್ದರೂ ಅಪ್ರಧಾನನೇನೋ ಅಲ್ಲಿ ಅವನು ತನ್ನ ಮೂರು ಹೆಜ್ಜೆಗಳಿಂದ ಲೋಕ ಸಮಸ್ತವನ್ನೇ ಅಳೆಯುವುದನ್ನು ಉತ್ಸಾಹದಿಂದ ಋಗ್ವೇದದಲ್ಲಿ ವರ್ಣಿಸಲಾಗಿದೆ. ವಿಷ್ಣುವಿನ ಅತ್ಯುನ್ನತ ಲೋಕದಲ್ಲಿ ಒಂದು ಜೇನಿನ ಬಾವಿಯಿದೆ. ಅಲ್ಲಿ



ದೇವತೆಗಳಲ್ಲರೂ ರಮಿಸುವರು. ಇವುಗಳನ್ನು ನೋಡಿದರೆ ವಿಷ್ಣುವಿಗೆ ಋಗ್ವೇದದಲ್ಲಿ ಸ್ವಲ್ಪಾದರು ಗೌರವದ ಸ್ಥಾನವಿದೆಯೆಂದು ಹೇಳಬೇಕಾಗುತ್ತದೆ. ಬ್ರಾಹ್ಮಣರ ಕಾಲದಲ್ಲಿ ವಿಷ್ಣುನೆ ಶ್ರೇಷ್ಠವೆಂದು ವರ್ಣಿಸಲಾಗಿದೆ. ಯಜ್ಞಯಾಗಾದಿಗಳಿಗೂ ವರ್ಣಾಶ್ರಮ ಧರ್ಮಕ್ಕೂ ಪ್ರಾಧಾನ್ಯವನ್ನು ಕೊಟ್ಟಿದ್ದು ವೈದಿಕ ಧರ್ಮದಅಕ್ಕ ಪಕ್ಕದಲ್ಲಿಯೇ ಮೂಲತಃ ಅದಕ್ಕಿಂತ ಭಿನ್ನವಾದ ಒಂದು ಧರ್ಮವು ಬೆಳೆದುಕೊಂಡುಬಂದಿತು. ಅದೇ ಭಾಗವತ ಧರ್ಮ ಇದನ್ನು ಸ್ವಾತಂತ್ರ ಧರ್ಮವೆಂದೂ ಏಕಾಂತಿಕ ಧರ್ಮವೆಂದೂ ಕರೆಯುವುದುಂಟು ಈ ಧರ್ಮದ ಸ್ಥಾಪಕ ಕ್ಷತ್ರೀಯನಾದ ಕೃಷ್ಣವಾಸುದೇವ. ಧರ್ಮದ ಮುಖ್ಯ ಲಕ್ಷಣವೆಂದರೆ ಏಕದೇವೋಪಾಸನೆ ದೈವಸಾಕ್ಷಾತ್ಕಾರಕ್ಕೆ ಭಕ್ತಿಯು ಮುಖ್ಯ ಈ ಏಕದೇವೋಪಾಸನೆ ಮತ್ತು ನಿರ್ಹೇತುಕವಾದ ಭಕ್ತಿ ಇವೆರೆಡೂ ಧರ್ಮದ ವೈಶಿಷ್ಟ್ಯಗಳಾಗಿವೆ.

ಭಾಗವತ ಧರ್ಮ ದಕ್ಷಿಣ ಭಾರತವನ್ನು ಕ್ರಿಸ್ತಶಕಕ್ಕಿಂತ ಪೂರ್ವದಲ್ಲಿಯೇ ಪ್ರವೇಶ ಮಾಡಿತ್ತೆಂದೂ ನಾನಘಾಟ್ ಶಾಸನದಿಂದ ತಿಳಿದುಬರುತ್ತದೆ. ಇದು ತಮಿಳುನಾಡಿನ ಆದಿಭಾಗದಲ್ಲಿದ್ದ ಆಳ್ವಾರರ ಪ್ರಭಾವವು ಕನ್ನಡ ನಾಡಿನ ಮೇಲೆ ಎಷ್ಟರಮಟ್ಟಿಗೆ ಪರಿಣಾಮ ಬೀರಿತು ಎಂದು ತಿಳಿಯದು. ಕ್ರಿಸ್ತಶಕದ ಮೊದಲ ಹತ್ತು ಅಥವಾ ಹನ್ನೊಂದನೆ ಶತಕಗಳಲ್ಲಿ ವೈದಿಕಗೊಳಿಸಲ್ಪಟ್ಟ ಭಾಗವತ ಧರ್ಮ ಕರ್ನಾಟಕದಲ್ಲಿ ಪ್ರಚಾರಕ್ಕೆ ಬಂದಿರಬೇಕು ಈ ಧರ್ಮದ ಕುರಿತಾದ ಭಾಗವತ ವೈಷ್ಣವ' ಎಂಬ ಉಲ್ಲೇಖ ಇರುವ ಕನ್ನಡದ ಅತ್ಯಂತ ಪ್ರಾಚೀನ ಶಾಸನವಾದ ಹಲ್ಮಿಡಿ (ಸು.೪೫೦) ಶಾಸನವು ವಿಷ್ಣುವಿನ ಪ್ರಾರ್ಥನೆಯೊಂದಿಗೆ ಆರಂಭವಾಗುತ್ತದೆ. ಕ್ರಿ.ಶ. ೬ನೇ ಶತಮಾನದಲ್ಲಿ "ಮಹಾಭಾಗವತ'ನಾದ ಚಾಳುಕ್ಯ ರಾಜ ಮಂಗಳೇಶನು ಕ್ರಿ.ಶ. ೫೯೬–೬೦೯ ಬಾದಾಮಿಯಲ್ಲಿ ಪ್ರಸಿದ್ಧವಾದ ವೈಷ್ಣವ ಗುಹಾಂತರ ದೇವಾಲಯವನ್ನು ಕೊರೆಸಿದನು. ಅನಂತರ ಬಾಗಲಕೋಟೆ ಜಿಲ್ಲೆಯಲ್ಲಿ ವಿಜಯನಗರ ಕಾಲದ ವೈಷ್ಣವ ಧರ್ಮ ಉಲ್ಲೇಖಿಸುವ ಒಟ್ಟು ೨ ಶಾಸನಗಳು ಈವರೆಗೆ ಪ್ರಕಟವಾಗಿವೆ. ಈ ಎರಡು ಶಾಸನಗಳಲ್ಲಿ ಅರಸರ ಹೆಸರುಗಳ ಉಲ್ಲೇಖವಿಲ್ಲದ ಸಂಕೀರ್ಣವಾಗಿರುವ ಕ್ರಿ.ಶ. ೧೫೫೪ ಮತ್ತು ೧೫ನೇಯ ಶತಮಾನಕ್ಕೆ ಸೇರಿದಾಗಿದೆ. ದೇವಾಲಯಗಳು ರಚನೆ ಅವುಗಳಿಗೆ ನೀಡಿರುವ ದಾನ ದತ್ತಿಗಳು ವಿಷಯಗಳನ್ನು ಶಾಸನಗಳು ಉಲ್ಲೇಖಿಸುತ್ತವೆ.

ಬಾಗಲಕೋಟೆ ತಾಲೂಕಿನ ಸೀತಿಮನಿ ಗ್ರಾಮದ ಗುಡದಲ್ಲಿರುವ ಶಾಸನ ಕ್ರಿ.ಶ.೧೫ನೇ ಶತಮಾನದ್ದು ಇದರಲ್ಲಿ ಅರಸನ ಹೆಸರು ಉಲ್ಲೇಖವಿಲ್ಲ. ಯೂರೊಭಕ್ತನೊಬ್ಬ ರಾಮನಾಥದೇವರ ಪಾದಗಳಿಗೆ ಮಾನ್ಯವನ್ನು ನೀಡಿರುವುದನ್ನು ಹೇಳುತ್ತದೆ. ಎರಡನೆಯ ಶಾಸನಗಳು ಬಾದಾಮಿ ತಾಲೂಕಿನ ಬಾದಾಮಿಯಲ್ಲಿದ್ದು, ಕ್ರಿ.ಶ. ೧೫೫೪ಕ್ಕೆ ಸೇರಿದ್ದಾಗಿದೆ. ಇದು ತ್ರುಟಿತವಾಗಿದ್ದು ಬಾದಾಮಿ ವಿಠಲ್‌ನ ಸನ್ನಿಧಿಯಲ್ಲಿ ಹರಿಟದ ವೆಂಕಟಯ್ಯ ಎಂಬುವನನ್ನು ವಿಗ್ರಹವೊಂದನ್ನು ಪ್ರತಿಷ್ಠ ಮಾಡಿದನ್ನು ಉಲ್ಲೇಖಿಸುತ್ತದೆ.

**ಜೈನ ಧರ್ಮ:**

ಜೈನಧರ್ಮ ಹಿಂದೂಧರ್ಮದಿಂದ ಭಿನ್ನವಾಗಿದ್ದು ಬೌದ್ಧಧರ್ಮದಂತೆ ಒಂದು ಪ್ರಾಚೀನ ಸ್ವತಂತ್ರಧರ್ಮವಾಗಿರುವುದು. ಇದರ ಉಗಮ ಭಾರತದಲ್ಲಿಯೇ ಆದರೂ ಭಾರತವನ್ನು ಬಿಟ್ಟು ಹೊರಗಡೆ ಈ ಧರ್ಮದ ಪ್ರಸಾರವಾಗಲಿಲ್ಲ ಇದು ಬೌದ್ಧಧರ್ಮಕ್ಕಿಂತಲೂ ಹಳೆಯದು ಜೈನರು ತಮ್ಮ ಧರ್ಮವು ಬಹುಪ್ರಾಚೀನವಾದುದೆಂದು

ಭಾವಿಸುತ್ತಾರೆ. ಅವರ ಮೊತ್ತಮೊದಲಿನ ಧರ್ಮ ಪ್ರವರ್ತಕ ಋಷಭದೇವ, ವಿಷ್ಣು ಮತ್ತು ಭಾಗವತ ಪುರಾಣಗಳಲ್ಲಿ ಅವನು ಬಹುಪ್ರಾಚೀನ ಕಾಲಕ್ಕೆ ಸೇರಿದವನೆಂದು ಉಲ್ಲೇಖವಿದೆ.

ಜೈನ ಸಂಪ್ರದಾಯದ ಪ್ರಕಾರ ಮಹಾಭಾರತ ಯುದ್ಧಕಾಲದಲ್ಲಿ ಕೃಷ್ಣನಂತೆ ಯಾದವ ಕುಲಕ್ಕೆ ಸೇರಿದವನೆಂದು ಹೇಳಲಾದ ಇಪ್ಪತ್ತೆರಡನೆಯ ತೀರ್ಥಂಕರನೆಂದು ಕರೆಯಲಾಗುವ ದಾನೇಮಿನಾಥನು ಈ ಧರ್ಮ ನಾಯಕನಾಗಿದ್ದನು. ಈ ಪಂಥವು ವಾರಣಾಸಿಯಲ್ಲಿ ಜನಿಸಿದ ಇಪ್ಪತ್ತ ಮೂರನೆಯ ತೀರ್ಥಂಕರನಾದ ಪಾರ್ಶ್ವನಾಥನ ಮುಂದಾಳುತ್ವದಲ್ಲಿ ಕ್ರಿ.ಪೂ.ಎಂಟನೆಯ ಶತಮಾನದಲ್ಲಿ ಪ್ರಾಬಲ್ಯಕ್ಕೆ ಬಂದಿತು. ಮುಂದೆ ಈ ಪಂಥವನ್ನು ಮಹಾವೀರನ ನೇತೃತ್ವದಲ್ಲಿ ಕ್ರಮೇಣವಾಗಿ ಜೈನ ಧರ್ಮವಾಗಿ ಬೆಳೆಯಿತು. ಜೈನಧರ್ಮ ಕ್ರಿಸ್ತ ಶಕ ಪೂರ್ವದಿಂದಲೂ ಕರ್ನಾಟಕದಲ್ಲಿ ಪ್ರಚಲಿತವಿತ್ತು. ಈ ಪ್ರಾಂತವು ದಿಗಂಬರ ಸಂಪ್ರದಾಯಕ್ಕೆ ಪ್ರಾಚೀನ ಕಾಲದಿಂದಲೂ ಮುಖ್ಯಸ್ಥಾನವನ್ನು ಹೊಂದಿದೆ. ಶ್ರವಣಬೆಳಗೊಳದ ಒಂದು ಶಾಸನದಲ್ಲಿ ಉತ್ತರದಿಂದ ದಕ್ಷಿಣ ದೇಶಕ್ಕೆ ಸಂಘದೊಂದಿಗೆ ಅಗಮಿಸಿದ ಭದ್ರಬಾಹುಸ್ವಾಮಿಗಳೂ ಅವರ ಶಿಷ್ಯನಾದ ಚಂದ್ರಗುಪ್ತ ಮೌರ್ಯ ಚಂದ್ರಗಿರಿ ಎಂಬ ಬೆಟ್ಟದಲ್ಲಿ ಸಲ್ಲೇಖನ ವ್ರತದಿಂದ ಸಮಾಧಿಯನ್ನು ಹೊಂದಿದ್ದರೆಂದು ತಿಳಿದುಬರುತ್ತದೆ.
ಕರ್ನಾಟಕದಲ್ಲಿ ಕದಂಬರ ಕಾಲದ ಅನೇಕ ಶಿಲಾ ಶಾಸನಗಳು ದೊರತಿವೆ. ಅವುಗಳಲ್ಲಿ ಜೈನರಿಗೆ ದಾನ ನೀಡಿರುವ ವಿಷಯವನ್ನು ವಿವರಿಸುತ್ತದೆ. ಕದಂಬರ ನಂತರ ಬಾದಾಮಿ ಚಾಲುಕ್ಯರು, ಜೈನಧರ್ಮಕ್ಕೆ ಆಶ್ರಯವನ್ನು ನೀಡಿರುವುದು ಮತ್ತು ಬಾದಾಮಿ, ಐಹೊಳೆ, ಹಳ್ಳೂರು (ಬಾಗಲಕೋಟೆ ಜಿಲ್ಲೆ) ಇವರ ಕಾಲದ ಮಹತ್ವದ ಜೈನ ಕೇಂದ್ರಗಳಾಗಿದ್ದವು. ಹೀಗೆ ಕಲ್ಯಾಣ ಚಾಲುಕ್ಯರ ಕಾಲದಲ್ಲಿ ಬಾದಾಮಿ ಮತ್ತು ಅದರ ಪರಿಸರವು ಜೈನ ಧರ್ಮದ ಪ್ರಭಾವಕ್ಕೆ ಒಳಗಾಗಿತ್ತೆಂದು ತಿಳಿದುಬರುತ್ತದೆ. ವಿಜಯನಗರ ಸಾಮ್ರಾಜ್ಯ ಕಾಲಕ್ಕೆ ಸಂಬಂಧಿಸಿದ ಜೈನ ಧರ್ಮವನ್ನು ಉಲ್ಲೇಖಿಸುವ ಒಂದು ಶಾಸನ ದೊರೆತ್ತಿದ್ದು ಅದು ಜಮಖಂಡಿ ತಾಲೂಕಿನ ಅಲಗೂರು ಗ್ರಾಮದಲ್ಲಿರುವ ಕ್ರಿ.ಶ.೧೪೪೫ರ ಶಾಸನ ಅಲಗೂರುದಲ್ಲಿ ಆದಿನಾಥನ ಮೂರ್ತಿಯನ್ನು ಮಾಡಿಸಿರುವುದನ್ನು ಉಲ್ಲೇಖಿಸುತ್ತದೆ. ವಿಜಯನಗರ ಅರಸರ ಅವಧಿಯಲ್ಲಿ ಈ ಜೈನಧರ್ಮದ ಪ್ರಭಾವವು ಕುಗ್ಗಿತ್ತೆಂದು ಗುರುತಿಸಬಹುದಾಗಿದೆ.

**ವೀರಗಲ್ಲು ಶಾಸನಗಳು**

ಬಾಗಲಕೋಟೆ ಜಿಲ್ಲೆಯ ಬಾದಾಮಿ ತಾಲೂಕಿನ ಚೋಳಚಗುಡ ಗ್ರಾಮದ ಕಲ್ಮೇಶ್ವರ ದೇವಾಲಯದ ಮುಂಭಾಗದಲ್ಲಿ ನಿಲ್ಲಿಸಿರುವ ಕಲ್ಲಿನ ಮೇಲೆ ಇರುವ ವೀರಗಲ್ಲು ಶಾಸನವು ಕ್ರಿ.ಶ.೧೪ನೆಯ ಶತಮಾನಕ್ಕೆ ಸೇರಿದ್ದಾಗಿದೆ. ಈ ಶಾಸನದಲ್ಲಿ ಭುವನಾಧೀಶ್ವರಿ (ಬನಶಂಕರಿ)ಯ ಮೂರು ಗೊರವರು ಮತ್ತು ಜಂಗಮ ಮೋಜಿಗಳ ಅಡಿಕೆ ಫಲವನ್ನು ಕೊಂಡು ಸರ್ವಮಾನ್ಯವಾಗಿ ದಾನ ನೀಡಿದ ವಿಷಯವಿದೆ. ಬಹುಶಃ ಈ ದಾನವನ್ನು ಹೋರಾಟದಲ್ಲಿ ಮಡಿದ ವೀರನ ಕುಟುಂಬಕ್ಕೆ ನೀಡಿರಬಹುದು, ಹೆಚ್ಚಿನ ವಿವರಗಳು ತ್ರುಟಿತವಾಗಿದೆ. ಈ ವೀರಗಲ್ಲು ಮೂರು ಹಂತದ ಸುಂದರವಾದ ಶಿಲ್ಪಗಳಿಂದ ಕೂಡಿದ್ದು, ಮೊದಲನೆಯ ಹಂತದಲ್ಲಿ ಬಲಭಾಗದಲ್ಲಿ ದನಗಳನ್ನು ಎಡಭಾಗದಲ್ಲಿ ಶತ್ರುವಿನೊಂದಿಗೆ ಹೋರಾಡುತ್ತಿರುವ ವೀರನನ್ನು ಚಿತ್ರಿಸಲಾಗಿದೆ. ಎರಡನೆಯ ಹಂತದಲ್ಲಿ ವೀರನನ್ನು ಹೊತ್ತುಕೊಂಡು ಹೋಗುತ್ತಿರುವ ಅಪ್ಸರೆಯರು ಶಿಲ್ಪವನ್ನು ಮೂರನೆಯ ಹಂತದಲ್ಲಿ



ಶಿವಲಿಂಗದ ಬಳಿ ಕುಳಿತಿರುವ ವೀರನನ್ನು ಚಿತ್ರಿಸಲಾಗಿದೆ. ಇಲ್ಲಿ ವೀರನ ಶೌರ್ಯಭಂಗಿ ಅವನ ಆಭರಣಗಳು, ಉಡುಪುಗಳು ಮತ್ತು ಆಯುಧಗಳು ಸ್ಪಷ್ಟವಾಗಿ ಮತ್ತು ಸುಂದರವಾಗಿ ಎದ್ದುಕಾಣುವಂತೆ ಚಿತ್ರಿಸಲಾಗಿದೆ. ಒಟ್ಟಿನಲ್ಲಿ ಈ ವೀರಗಲ್ಲು ಅತ್ಯಂತ ಸುಂದರವಾದ ಶಿಲ್ಪವಿನ್ಯಾಸದಿಂದ ಕೂಡಿದೆ. ಅದೇ ತಾಲೂಕಿನ ಬೇವೂರು ಗಾಮದ ಪರ್ವತಪ್ಪನ ದೇವಾಲಯದ ಗೋಡೆಗೆ ಸೇರಿಸಿರುವ ವೀರಗಲ್ಲು ಶಾಸನ ಕ್ರಿ.ಶ.೧೪ನೇ ಶತಮಾನಕ್ಕೆ ಸೇರಿದ್ದು ಇದರಲ್ಲಿ 'ನಾಗಂಣ' ಎಂಬುವನನ್ನು ಹೋರಾಡಿ ಮಡಿದಂತೆ ತಿಳಿದುಬರುತ್ತದೆ. ಆದರೆ ಯಾರೊಂದಿಗೆ ಹೋರಾಡಿದರು ಎಂಬುದು ಇಲ್ಲ ಮತ್ತು ಶಾಸನವು ತುಂಬಾ ತ್ರುಟಿತವಾಗಿದೆ.

**ಕೆರೆಗಳು :**

ಬಾಗಲಕೋಟೆ ಜಿಲ್ಲೆಯಲ್ಲಿ ಕೆರೆಯನ್ನು ನಿರ್ಮಿಸಿದ ಕುರಿತು ಉಲ್ಲೇಖಿಸುವ ವಿಜಯನಗರ ಸಾಮ್ರಾಜ್ಯದ ೧ ಶಾಸನ ಈವರೆಗೆ ಪ್ರಕಟಿತವಾಗಿದೆ. ಅದು ಕ್ರಿ.ಶ. ೧೪-೧೫ನೆಯ ಶತಮಾನಕ್ಕೆ ಸೇರಿದ್ದಾಗಿದ್ದು ಗದ್ದನಕೇರಿಯಿಂದ ಬಾಗಲಕೋಟೆಗೆ ಹೋಗುವ ಉದು ತ್ರುಟಿತವಾಗಿದೆ. ರಸ್ತೆ ಬದಿಯಲ್ಲಿದ್ದು ಮಾಳಿಗಪ್ಪನ ಮಗನಾದ ಮೋನಹಪತ್ಯೆಯನಿಗೆ ಕರೆಕಟ್ಟಿದ್ದಕ್ಕೆ ಮಾನ್ಯ ನೀಡಿದನ್ನು ಉಲ್ಲೇಖಿಸುತ್ತದೆ.

**ಆರ್ಥಿಕ ವ್ಯವಸ್ಥೆ:**

ಬಾಗಲಕೋಟೆ ಜಿಲ್ಲೆಯಲ್ಲಿರುವ ವಿಜಯನಗರ ಸಾಮ್ರಾಜ್ಯ ಅರಸರ ಕಾಲದ ೨೪ ಶಾಸನಗಳಲ್ಲಿ ಆರ್ಥಿಕ ವ್ಯವಸ್ಥೆ ಕುರಿತು ಹೇಳುವ ಈವರೆಗೆ ೪ ಶಾಸನಗಳು ಪ್ರಕಟವಾಗಿವೆ. ೨೧ ಶಾಸನಗಳು ವಿವಿಧ ಧರ್ಮಗಳಿಗೆ ಕೆರೆಗಳ ನಿರ್ಮಿಸುವುದಕ್ಕೆ ದೇವರ ಮೂರ್ತಿ ಸ್ಥಾಪಿಸಲು, ವೀರಮರಣ ಹೊಂದಿದದವರ ಕುಟುಂಬಕ್ಕೆ ದಾನ ನೀಡಿರುವ ದೇವಾಲಯಗಳ ಜೀರ್ಣೋದ್ಧಾರ ಮಾಡುವುದಕ್ಕೆ ದೇವಾಲಯದ ಅಂಗ-ರಂಗ ಭೋಗ್ಯಕ್ಕೆ ವೈಯಕ್ತಿಕವಾಗಿ ದೇವಾಲಯಗಳನ್ನು ಕಟ್ಟಿಸಿ ದಾನ ದತ್ತಿಗಳನ್ನು ಬಿಟ್ಟಿರುವ ವಿಷಯ ಈ ಶಾಸನಗಳಲ್ಲಿದೆ. ವಿಜಯನಗರ ಅರಸರು ತೆರಿಗೆ ಸಂಗ್ರಹಿಸುತ್ತಿದ್ದರು ಎನ್ನುವುದಕ್ಕೆ ಬಾದಾಮಿ ತಾಲೂಕಿನ ಬಾದಾಮಿಯಲ್ಲಿರುವ ಸದಾಶಿವದೇವರಾಯನ ಕ್ರಿ.ಶ.೧೫೪೭ರ ಶಾಸನವು ಎಳಬಿಯ ನಾವಿದರು ತೆರಿಗೆಯನ್ನು ಕಟ್ಟುತ್ತಿದ್ದರು ಎಂದು ತಿಳಿದುಬರುತ್ತದೆ. ಹುನುಗುಂದ ತಾಲೂಕಿನ ಕರಡಿ ಎಂಬ ಗ್ರಾಮದ ಶಾಸನವು ಸದಾಶಿವರಾಯನ ಕ್ರಿ.ಶ. ೧೫೫೩ರ ಶಾಸನದಲ್ಲಿ ರಾಮರಾಯವೆಂಬುವನ್ನು ಮುದುಗಲ್ಲು ಸೀಮೆಗೆ ಸೇರಿದ ಕರಡಾಯಿ ಸಮಿತಿಯು ನಾವಿದರ ಮೇಲಿನ ಸಮಸ್ತ ತೆರಿಗೆಯನ್ನು ತೆಗೆದು ಹಾಕಿರುವ ವಿಷಯವನ್ನು ತಿಳಿಸುತ್ತದೆ. ಈ ಮೇಲಿನ ಎರಡು ಶಾಸನಗಳನ್ನು ಗಮನಿಸಿದರೆ ವಿಜಯನಗರ ಕಾಲದಲ್ಲಿ ನಾವಿದ ಮೇಲೆ ತೆರಿಗೆಯನ್ನು ಹಾಕುತ್ತಿದ್ದರೆಂದು ಅದನ್ನು ಸಾಶಿವರಾಯನು ರದ್ದುಗೊಳಿಸಿದನೆಂದು ತಿಳಿದುಬರುತ್ತದೆ. ಹೀಗಾಗಿ ಈ ಕಾಲದಲ್ಲಿ ನಾವಿದರ ಆರ್ಥಿಕ ಸ್ಥಿತಿಗತಿಗಳ ಬಗ್ಗೆ ಅರಿಯಬಹುದು.

**ಕಲೆ ಮತ್ತು ವಾಸ್ತುಶಿಲ್ಪ:**

ಬಾಗಲಕೋಟೆ ಜಿಲ್ಲೆಯಲ್ಲಿ ವಿಜಯನಗರ ಕಾಲದಲ್ಲಿ ನಿರ್ಮಿತವಾದ ದೇವಾಲಯಗಳ ಜೀರ್ಣೋದ್ಧಾರ ದೇವರಗಳ ಮೂರ್ತಿಗಳ ಪ್ರತಿಷ್ಠಾಪಿಸಿದ್ದು ಜಿನಾಲಯವನ್ನು ಕಟ್ಟಿಸಿದ್ದು ಬಸವದೇವರಿಗೆ ದಾನ ನೀಡಿರುವುದು. ಹಾಗೇ ಅಚ್ಯುತದೇವರಾಯನು ಕ್ರಿ.ಶ. ೧೫೩೨ರ ಶಾಸನದಲ್ಲಿ ಮುಸಲ್ಮಾನರಿಂದ ನಾಶವಾಗಿದ್ದ

ಬಾದಾಮಿಯ ಬನಶಂಕರಿ ದೇವಾಲಯವನ್ನು ಮತ್ತು ಅನೇಕ ದೇವಾಲಯಗಳನ್ನು ಜೀರ್ಣೋದ್ಧಾರ ಮಾಡಬೇಕೆಂದು ಅರಸನು ತನ್ನ ಸೇನಾಪತಿಗೆ ಹೇಳುತ್ತಾನೆ. ಅದಕ್ಕೆ ಸೇನಾಪತಿ ತನ್ನ ಮಗನಾದ ಚಿಕ್ಕ ಚೆನ್ನಪ್ಪನಾಯಕನಿಂದ ದೇವಾಲಯಗಳ ಜೀರ್ಣೋದ್ಧಾರ ಮಾಡಿಸುತ್ತಾನೆ. ಅವನು ಅಚ್ಯುತದೇವರಾಯನಿಗೂ ತನ್ನ ತಂದೆಗೂ "ಆಯುರಾರೋಗ್ಯ ಆಯಶ್ವಯಾಭಿವೃದ್ಧಿಯಾಗಬೇಕೋಯಂ:" ಎಂದು ಹೇಳಿಕೊಳ್ಳುತ್ತಾನೆ. ಕೊಂಡರಾಜನು ಬಾದಾಮಿಯಲ್ಲಿ ಕೊತ್ತಲವನ್ನು ಕಟ್ಟಿಸಿದನು ಎಂದು ಬಾದಾಮಿ ಶಾಸನದಿಂದ ತಿಳಿದುಬರುವುದು. ಅದೇ ರೀತಿಯಲ್ಲಿ ಸದಾಶಿವರಾಯನ ಕಾಲದಲ್ಲಿನ ಕ್ರಿ.ಶ.೧೫೪೩ರ ಶಾಸನದಲ್ಲಿ ಹಡಪದ ವಿಕ್ರಕೃಷ್ಣಪ್ಪನಾಯಕನು ಕೊತ್ತಳವನ್ನು ಕಟ್ಟಿಸಿದಂತೆ ಬಾದಾಮಿ ಕ್ರಿ.ಶ.೧೫೪೫ರ ಶಾಸನದಲ್ಲಿ ಕೃಷ್ಣಭೂಪನ ಕೋಟೆಯನ್ನು ನಿರ್ಮಿಸಿದನು. ಹೇಳಿದರೆ ಮತ್ತೊಂದು ಕ್ರಿ.ಶ.೧೫೫೪ರ ಶಾಸನದಲ್ಲಿ ಹರಿಟರ ವೆಂಕಟಯ್ಯ ಎಂಬುವವನು ಬಾದಾಮಿ ವಿಠ್ಠಲನ ಸಮ್ಮುಖದಲ್ಲಿ ವಿಗ್ರಹವೊಂದನ್ನು ಪ್ರತಿಷ್ಠೆ ಮಾಡಿದಂತೆ ಹೇಳುತ್ತದೆ. ಕೊಣ್ಣೂರಿನ ಶಾಸನದಲ್ಲಿ ಭೂಸಣ್ಣಗೌಡನ ಮಗ ನಾಗಣ್ಣಗೌಡನು ಬೀರದೇವರ ದೇವಾಲಯದ ಚಂದ್ರಶಾಲೆಯನ್ನು ನಿರ್ಮಿಸಿದನ್ನು ತಿಳಿಸುತ್ತದೆ. 'ಬೀಳಗಿಯಲ್ಲಿ ಖಂಡೇರಾವ್ ತಿಮ್ಮಾಜಿ ಬೀಳಗಿಯಲ್ಲಿ ಪೂರ್ವದ್ವಾರವನ್ನು ಮಾಡಿಸಿದನೆಂದು ಹೇಳಿದರೆ ಚಿರಾಳಕೊಪ್ಪ ಶಾಸನದಲ್ಲಿ ಲಿಂಗ ಮುದ್ರೆಕಲ್ಲಿನಲ್ಲಿ ಸೂರ್ಯಚಂದ್ರ ಮತ್ತು ಶಿವಲಿಂಗದ ರೇಖಾಚಿತ್ರವನ್ನು ಸುಂದರವಾಗಿ ಚಿತ್ರಿಸಲಾಗಿದ್ದು, ಅಲಗೂರ ಶಾಸನದಲ್ಲಿ (ಕ್ರಿ.ಶ.೧೪೪೫) ತೀರ್ಥಂಕರನಾದ ಆದಿನಾಥ ಪ್ರತಿಮೆಯನ್ನು ಪ್ರತಿಷ್ಠಾಪನೆ ಮಾಡಿರಬಹುದು ಎಂದು ತರ್ಕಿಸುತ್ತದೆ. ಈ ಮೇಲಿನ ಎಲ್ಲ ಶಾಸನಗಳನ್ನು ಅವಲೋಕಿಸಿದಾಗ ವಿಜಯನಗರ ಕಾಲದಲ್ಲಿ ಬಾಗಲಕೋಟೆ ಜಿಲ್ಲೆಯಲ್ಲಿ ಕಲೆ ಮತ್ತು ವಾಸ್ತುಶಿಲ್ಪಗಳ ಬೆಳವಣಿಗೆಗೆ ಅನೇಕ ರೀತಿಯಲ್ಲಿ ಪ್ರೋತ್ಸಾಹ ನೀಡಿದ್ದರು.

**ಕೋಟೆಗಳು:**

ಬಾಗಲಕೋಟೆ ಜಿಲ್ಲೆಯಲ್ಲಿ ಕೋಟೆಯನ್ನು ನಿರ್ಮಿಸಿದ್ದು ಜೀರ್ಣೋದ್ಧಾರ ಮಾಡಿರುವ ಕುರಿತು ಉಲ್ಲೇಖಿಸುವ ಒಟ್ಟು ೦೩ ಶಾಸನಗಳು ಈವರೆಗೆ ಪ್ರಕಟವಾಗಿದೆ. ಇವುಗಳಲ್ಲಿ ಸದಾಶಿವರಾಯನ ೧, ವಿಜಯನಗರ ಸಾಮಂತನಾದ ಕೊಂಡರಾಜನ ೧, ಕೃಷ್ಣಭೂಪಾಳನ ೧, ಶಾಸನಗಳು ಈ ಜಿಲ್ಲೆಯಲ್ಲಿ ಇವೆ. ಇವುಗಳಲ್ಲಿ ಮೊದಲನೆಯ ಶಾಸನವು ಕ್ರಿ.ಶ.೧೫೪೩ ಕಾಲಕ್ಕೆ ಸೇರಿದ ಬಾದಾಮಿ ತಾಲೂಕಿನ ಬಾದಾಮಿ ಶಾಸನವಾಗಿದ್ದು ಇದು ತ್ರುಟಿತವಾಗಿದ್ದು ಸದಾಶಿವರಾಯನ ಆಳ್ವಿಕೆಯಲ್ಲಿ ಹಡಪದ ಎರ್ರಕೃಷ್ಣಪ್ಪನಾಯಕ ಎಂಬುವನ್ನು ಕೊತ್ತಳವನ್ನು ಕಟ್ಟಿಸಿದನೆಂದು ಉಲ್ಲೇಖಿಸುತ್ತದೆ. ಆದರೆ ಎಲ್ಲಿ ನಿರ್ಮಿಸಿದನ್ನು ಎಂಬುವುದು ತಿಳಿದುಬರುವುದಿಲ್ಲ.

ಎರಡನೆಯ ಶಾಸನವು ಅದೇ ತಾಲೂಕಿನ ಬಾದಾಮಿಯಲ್ಲಿದ್ದು ಕ್ರಿ.ಶ.೧೫೪೩ಕ್ಕೆ ಸೇರಿದ್ದಾಗಿದೆ. ಶಾಸನವು ತ್ರುಟಿತವಾಗಿದ್ದು ವಿಜಯನಗರ ಸಾಮಂತನಾದ ಕೊಂಡರಾಜನ ಆಳ್ವಿಕೆಯಲ್ಲಿ ಈ ಕೊಂಡರಾಜನ ಮಹಾ ಅರಸನು ಕೊತ್ತಲವನ್ನು ಕಟ್ಟಿಸಿದಂತೆ ಉಲ್ಲೇಖಿಸುತ್ತದೆ. ಮೂರನೆಯ ಶಾಸನವು ಅದೇ ತಾಲೂಕಿನ ಬಾದಾಮಿಯ ಉತ್ತರಕೋಟೆಗೆ ಹೋಗುವ ದಾರಿಯಲ್ಲಿರುವ ಈ ಶಾಸನವು ಕ್ರಿ.ಶ.೧೫೪೫ಕ್ಕೆ ಸೇರಿದ್ದಾಗಿದ್ದು ತ್ರುಟಿತವಾಗಿದೆ. ಕೃಷ್ಣಭೂಪಾಳನನ್ನು ಉಲ್ಲೇಖಿಸುತ್ತದೆ. (ಆದರೆ ಇದನ್ನು ಕೃಷ್ಣದೇವರಾಯನಾಗಿರಲಾರ) ಕೃಷ್ಣ ಭೂಪಾಳನ ಕಾಲದಲ್ಲಿ ಬೈಯಪೇದ್ರನು ಬಾದಾಮಿ ಕೋಟೆಯನ್ನು ಮಾಡಿದಂತೆ ತಿಳಿಯಬಹುದಾಗಿದೆ.



**ಸಾಮಾಜಿಕ ವ್ಯವಸ್ಥೆ:**

ಬಾಗಲಕೋಟೆ ಜಿಲ್ಲೆಯಲ್ಲಿರುವ ವಿಜಯನಗರ ಸಾಮ್ರಾಜ್ಯದ ಶಾಸನಗಳಲ್ಲಿ ಸಾಮಾಜಿಕ ವ್ಯವಸ್ಥೆಯ ಕುರಿತಾಗಿ ಅನೇಕ ಮಾಹಿತಿಗಳನ್ನು ನೀಡುತ್ತದೆ. ಬ್ರಾಹ್ಮಣ, ವೈಶ್ಯರ ಉಲ್ಲೇಖ ಶಾಸನಗಳಲ್ಲಿವೆ ಅಷ್ಟೇ ಅಲ್ಲದೇ ಸ್ಥಾನಾಚಾರ್ಯರು ಶ್ರೀಮಂತರು, ನಾವಿದರು, ಗೊರವರು, ಮುಸಲ್ಮಾನರು, ಹಡಪದರು ಮುಂತಾದ ವೃತ್ತಿ ಆಧಾರಿತ ಜಾತಿಗಳು ಶಾಸನಗಳಲ್ಲಿವೆ ಸಂಪ್ರದಾಯ ನಂಬಿಕೆಗಳನ್ನು ಶಾಸನಗಳ ಸ್ಪಷ್ಟವಾದ ಉಲ್ಲೇಖಿಸಿದ್ದು ದಾನ, ವೃತ, ಶ್ರದ್ಧೆ, ಪಾಪ–ಪುಣ್ಯ ಮುಂತಾದ ಮಾಹಿತಿಯನ್ನು ವಿಜಯನಗರ ಅರಸರ ಶಾಸನಗಳಲ್ಲಿ ಕಂಡುಬರುತ್ತದೆ. ಈ ಪ್ರದೇಶದ ಮಠಗಳಲ್ಲಿ ಮಹಾನಾಯಕಾಚಾರ್ಯವೆಂಬ ಆಚಾರ್ಯರು ಬಾದಾಮಿ ಮಹಾಜನಗಳಿಗೆ ದಾನದತ್ತಿ ನೀಡಿರುವುದು ಸಾಮಾಜಿಕವಾಗಿ ಜೀವನ ನಡೆಸಲು ಸಹಕಾರ ನೀಡುತ್ತಿದ್ದರು ಎಂದು ತಿಳಿದುಬರುತ್ತದೆ.  ಈ ಪ್ರದೇಶದ ಶಾಸನಗಳಲ್ಲಿ ಮಹಾಜನರ ಉಲ್ಲೇಖವಿದ್ದು, ಅವು ಕೊಣ್ಣೂರು, ಶಾಸನದಲ್ಲಿ ಮಹಾಜನರ ಉಲ್ಲೇಖವಿದೆ. ಇವನು ಊರಿನ ಸಾರ್ವಜನಿಕ ಕಾರ್ಯಗಳಲ್ಲಿ ತಮ್ಮನ್ನು ತೊಡಗಿಸಿಕೊಂಡು ದೇವಾಲಯ ಕೆರೆ–ಕಟ್ಟೆ ಬಾವಿಗಳ ರಚನೆಯಲ್ಲಿ ಭಾಗವಹಿಸಿ, ಗ್ರಾಮದ ಸಂಪೂರ್ಣ ಸಾಂಸ್ಕೃತಿಯ ಬೆಳವಣಿಗೆಗೆ ಕಾರ್ಯನಿರ್ವರಾಗಿದ್ದರು. ವೀರಗಲ್ಲುಗಳು ಶಿಲ್ಪ ಕಲಾತ್ಮಕವಾಗಿದ್ದು ವೀರರು, ಕಲಾಳುಗಳು ಅಪ್ಸರೆಯರು ಅವರ ಉಡುಗೆ–ತೊಡುಗೆಗಳು, ಆಯುಧಗಳು ಗಮನವನ್ನು ಸೆಳೆಯುತ್ತವೆ. ಒಟ್ಟಿನಲ್ಲಿ ಜಿಲ್ಲೆಯಲ್ಲಿರುವ ವಿಜಯನಗರ ಅರಸರ ಶಾಸನವನ್ನು ಅಧ್ಯಯನ ಮಾಡಿದ್ದಾಗ ಇಲ್ಲಿನ ಅವರ ಕಾಲದ ಸಾಮಾಜಿಕ ವ್ಯವಸ್ಥೆಯ ಚಿತ್ರಣವನ್ನು ಅರಿತುಕೊಳ್ಳಲು ತುಂಬಾ ಸಹಾಯಕವಾಗುತ್ತವೆ.

**ಇತರೆ ಶಾಸನಗಳು**

ಬಾಗಲಕೋಟೆ ಜಿಲ್ಲೆಯಲ್ಲಿ ವಿಜಯನಗರ ಸಾಮ್ರಾಜ್ಯಕ್ಕೆ ಸೇರಿದ ಈವರೆಗೆ ೪ ಶಾಸನಗಳು ಪ್ರಕಟವಾಗಿವೆ. ಇವುಗಳಲ್ಲಿ ಅಚ್ಯುತದೇವರಾಯನ ೧, ಕ್ರಿ.ಶ.೧೫ ಮತ್ತು ೧೬ನೆಯ ಶತಮಾನದ ೨, ಕಾಲದ ಉಲ್ಲೇಖವಿರದ ನರಸರಾಜನ ೧, ಸೇರಿದವಾಗಿವೆ.ಈಶಾಸನಗಳಲ್ಲಿರುವ ಯಾವದೇ ಫಿಷಯವನ್ನು ಸ್ಪಷ್ಟವಾಗಿ ತಿಳಿದು ಬರುವದಿಲ್ಲ.

**ಉಪಸಂಹಾರ:**

ಬಾಗಲಕೋಟೆ ಜಿಲ್ಲೆಯಲ್ಲಿರುವ ವಿಜಯನಗರ ಸಾಮ್ರಾಜ್ಯದ ಶಾಸನಗಳನ್ನು ಅವಲೋಕನ ಮಾಡಿದಾಗ ಅವುಗಳಲ್ಲಿ ವಿವಿಧ ಧರ್ಮಗಳಿಗೆ ದಾನ–ದತ್ತಿ ನೀಡಿ ಸಾಮಾಜಿಕವಾಗಿ, ಆರ್ಥಿಕವಾಗಿ, ಧಾರ್ಮಿಕವಾಗಿ, ಮತ್ತು ಕಲೆ ಮತ್ತು ವಾಸ್ತುಶಿಲ್ಪಗಳಿಗೆ ಬೆಳವಣಿಗೆಗೆ ಪ್ರೋತ್ಸಾಹ ನೀಡಿರುವುದು ತಿಳಿದುಬರುತ್ತದೆ. ವೀರ ಮರಣ ಹೊಂದಿದ ಕುಟುಂಬದವರಿಗೆ ದಾನ ನೀಡಿ ಅವರ ಕುಟುಂಬಕ್ಕೆ ಸಹಕಾರಿಯಾಗಿದ್ದಾರೆ.

**ಕೊನೆಟಿಪ್ಪಣಿಗಳು:**

೧. ಮುನಿಸ್ವಾಮಿ ಆರ್. ವಿಜಾಪುರ ಗೆಜೆಟಿಯರ್ (ಬಾಗಲಕೋಟೆ ಒಳಗೊಂಡು), ಪು–೧೯–೨೦
೨. ಗೋಪಾಲರಾವ್ ವಿಚ್,ಎಸ್, ಕಲ್ಯಾಣ ಚಾಲುಕ್ಯ ದೇವಾಲಯಗಳು ಒಂದು ಸಾಂಸ್ಕೃತಿಕ ಅಧ್ಯಯನ, ಪುಟ– ೧೭೭
೩. ಚಿದಾನಂದ ಮೂರ್ತಿ–ಎಂ, ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ ಪುಟ–೧೩೮

೪. ಮುರಿಗೆಪ್ಪ ,ಎ, (ಪ್ರ,ಸಂ) ಬಾದಾಮಿಚಾಲುಕ್ಯರು, (ಲೇಖಕ ಸಂಪುಟ ಪು–೨೦೦)
೫. ದೇವರಕೊಂಡಾರೆಡ್ಡಿ (ಪ್ರ.ಸಂ.) ಕನನ್ಡ ವಿಶ್ವವಿದ್ಯಾಲಯ, ಶಾಸನ ಸಂಪುಟ–೯ ಬಾಗಲಕೋಟೆ ಜಿಲ್ಲೆ, ಶಾಸನ ನಂ.೩೫೦)
೬. ಅದೇ ಶಾಸನ ನಂ.೧೭
೭. ಅದೇ ಶಾಸನ ನಂ.೧೯
೮. ಅದೇ ಶಾಸನ ನಂ.೦೪
೯. ಅದೇ ಶಾಸನ ನಂ. ೩೮೪
೧೦. ಅದೇ ಶಾಸನ ನಂ.೩೮೮
೧೧. ಅದೇ ಶಾಸನ ನಂ.೩೪.
೧೨. ಚಿದಾನಂದಮೂರ್ತಿ ಎಂ. ಕನ್ನಡ ಶಾಸನಗಳ ಸಾಂಸ್ಕೃತಿ ಅಧ್ಯಯನ, ಪುಟ ೧೭೯
೧೩. ಅದೇ ಪುಟ ೧೮೦
೧೪. ಅದೇ ಪುಟ ೧೮೪
೧೫. ನಂದಿಮಠ ಏಸ್.ಸಿ. ಕರ್ನಾಟಕದ ದರ್ಮಗಳು, ಪು–೨೯೨
೧೬. ಅದೇ ಶಾಸನ ನಂ.೨೮
೧೭. ಭಟ್ಟಾಚಾರ್ಯ ಹಿರಿದಾಸ (ಸಂ) ಯುಗಯಾಕ್ತಿ ಭಾರತೀಯ ಸಂಸ್ಕೃತಿ, ಪುಟ ೩೦೨
೧೮. ಅಣಾರಾಯರು ಮಿರ್ಜಿ ಪಾಟೀಲ ಟಿ.ಕೆ (ಸಂ). ಜೈನಧರ್ಮ ಪುಟ ೧೧೦
೧೯. ಮುರಿಗೆಪ್ಪ ಎ. (ಪ್ರ.ಸಂ)ಬಾದಾಮಿ ಚಾಲುಕ್ಯರು ಲೇಖನ ಸಂ. ಪುಟ ೨೦೦
೨೦. ಅದೇ ಶಾಸನ ನಂ.೩೪
೨೧. ಅದೇ ಶಾಸನ ನಂ.೩೫
೨೨. ಅದೇ ಶಾಸನ ನಂ.೩೦
೨೩. ಅದೇ ಶಾಸನ ಸಂ.೩೭೯
೨೪. ಅದೇ ಶಾಸನ ಸಂ.೨೨೬
೨೫. ಅದೇ ಶಾಸನ ಸಂ.೨೯೮

**ಆಧಾರಗ್ರಂಥಗಳು :**

೧. ಮುನಿಸ್ವಾಮಿ ಆರ್. (ಸಂ) – ವಿಜಾಪುರ ಜಿಲ್ಲಾ ಗೆಜೆಟಿಯರ್, (ಬಾಗಲಕೋಟೆ ಜಿಲ್ಲೆ ಸೇರಿದಂತೆ) ಬೆಂಗಳೂರು, ೧೯೯೯
೨. ಹುಲಗಬಾಳಿ ಮಲ್ಲಿಕಾರ್ಜುನ (ಸಂ) – ಬಾಗಲಕೋಟೆ ಜಿಲ್ಲಾದರ್ಶನ (ಜಿಲ್ಲೆಯ ಪರಿಚಯ) ಶ್ರೀ.ಬಿ.ವಿ. ಸಂಘದ ೨೦೦೦ ಬಸವಲಿಂಗ ಆಫ್‌ಸೆಟ್ ಪ್ರಿಂಟರ್ಸ್ (ಬಾಗಲಕೋಟ–೨೦೦೯)
೩. ಗೋಪಾಲ್ ಆರ್. (ಸಂ.) – ಬಾಗಲಕೋಟೆ ಜಿಲ್ಲೆಯ ಇತಿಹಾಸ ಪ್ರಜಾ ಮತ್ತು ಪುರಾತತ್ವ ಪ್ರಾಚ್ಯವಸ್ತು ಸಂಗ್ರಹಾಲಗಳ ನಿರ್ದೇಶನಾಯ, ವಸ್ತು ಪ್ರದರ್ಶನ, ಅಮರಣ, ಮೈಸೂರು–೫೭೦೦೧೦, ೨೦೧೧
೪. ದೇವರಕೊಂಡಾರೆಡ್ಡಿ (ಸಂ) – ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ–೯ ಬಾಗಲಕೋಟೆ ಜಿಲ್ಲೆ, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ–೨೦೦೯
೫. ಕಟಗಿಹಳ್ಳಿಮಠ ವಿಜಯಕುಮಾರ (ಸಂ) – ಬಾಗಲಕೋಟೆ ಜಿಲ್ಲಾ ಸಂಸ್ಕೃತಿ ಬಾಗಲಕೋಟೆ ಜಿಲ್ಲಾ ೪ನೇ ಕನ್ನಡ ಸಾಹಿತ್ಯ ಸಮ್ಮೇಳನ ಸ್ವಾಗತ ಸಮಿತಿ ಮುದೋಳ, ಬಾಗಲಕೋಟೆ ಜಿಲ್ಲೆ.
೬. ಚಿದಾನಂದಮೂರ್ತಿ ಎಂ. – ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ ಸಪ್ನ ಬುಕ್ ಹೌಸ್, ೩ನೇ ಮುಖ್ಯ ರಸ್ತೆ, ಗಾಂಧಿನಗರ ಬೆಂಗಳೂರು, ೨೦೧೧
೭. ನಂದಿಮಠ ಎಸ್.ಸಿ. – ಕರ್ನಾಟಕ ಧರ್ಮಗಳು ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು–೧೯೫೭
೮. ಪಾಟೀಲ ಟಿ.ಕೆ. ಅಣ್ಣಾರಾಯರು – ಜೈನಧರ್ಮ ಮಿರ್ಜಿ (ಸಂ) ಶ್ರೀ ಮಿರ್ಜಿ ಅಣ್ಣಾರಾಯರು ಶಾಂತಿ ಸೇವಾ ಸದನ ಸೇಡಬಾಳ
೯. ಗೋಪಾಲರಾವ್ ಎಚ್.ಎಸ್. – ಶಾಸನಗಳ ಹಿನ್ನಲೆಯಲ್ಲಿ ಕಲ್ಯಾಣ ಚಾಲುಕ್ಯ ದೇವಾಲಯಗಳು ಒಂದು ಸಾಂಸ್ಕೃತಿಕ ಅಧ್ಯಯನ
೧೦. ಮುರಿಗೆಪ್ಪ ಎ. (ಪ್ರ.ಸಂ) – ಬಾದಾಮಿ ಚಾಲುಕ್ಯರು ಲೇಖನ ಸಂಪುಟ–ಕನ್ನಡ ವಿ.ವಿ. ಹಂಪಿ



## –:ಲೇಖಕರ ವಿಳಾಸಗಳು:–

**ಗುರುದೇವಿ ಪಡಸಾಲಿ**
ಸಂಶೋಧನಾ ವಿದ್ಯಾರ್ಥಿನಿ,
ಡಾ. ಆರ್. ಸಿ. ಹಿರೇಮಠ
ಕನ್ನಡ ಅಧ್ಯಯನ ಪೀಠ,
ಕ. ವಿ. ವಿ., ಧಾರವಾಡ.

**ನೇಮಿನಾಥ ತಪಕೀರೆ**
ಲಕ್ಷ್ಮೀನಗರ, ಬೆಳಕೂಡ,
ಚಿಕ್ಕೋಡಿ,
ಬೆಳಗಾವಿ ಜಿಲ್ಲೆ–೫೯೧೨೨೨

**ಗಣೇಶ ಹೆಗಡೆ**
ಸಂಶೋಧನಾ ವಿದ್ಯಾರ್ಥಿ,
ಅಭಿವೃದ್ಧಿ ಅಧ್ಯಯನ ವಿಭಾಗ,
ಕನ್ನಡ ವಿಶ್ವವಿದ್ಯಾಲಯ, ಹಂಪಿ.

**ಅರುಣ ಕೆ. ಆರ್.**
ಪಿಎಚ್.ಡಿ. ಸಂಶೋಧನಾ ವಿದ್ಯಾರ್ಥಿನಿ
ಸಾಂಸ್ಕೃತಿಕ ಅಧ್ಯಯನ ವಿಭಾಗ
(ಜೈನ ಅಧ್ಯಯನ), ಮಾನವಿಕ ಮತ್ತು
ಸಾಮಾಜಿಕ ವಿಜ್ಞಾನಗಳ ನಿಕಾಯ,
(ಡೀಮ್ಡ್–ಟು–ಬಿ ಯೂನಿವರ್ಸಿಟಿ),
ಬೆಂಗಳೂರು.

**ಆಶಿಕಾ ಎಚ್. ಸಿ.**
ಸಹಾಯಕ ಪ್ರಾಧ್ಯಾಪಕರು,
ಸ. ಪ್ರ. ದ. ಕಾಲೇಜು, ಕನಕಗಿರಿ.

**ಯಲ್ಲಜ್ಜರ ಪಕೀರಪ್ಪ**
ಪಿಎಚ್.ಡಿ ಸಂಶೋಧನಾ ವಿದ್ಯಾರ್ಥಿ,
ಹಸ್ತಪ್ರತಿಶಾಸ್ತ್ರ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ಮೊಬೈಲ್ ನಂ:– ೯೭೪೩೭೯೫೪೪೮೫

**ಡಾ. ಎಚ್ .ಎ. ಭೋಗಲೆ**
ಗಿರಗಾಂವ ತಾಲೂಕ: ಚಿಕ್ಕೋಡಿ
ಜಿಲ್ಲೆ: ಬೆಳಗಾವಿ–೫೯೧೨೧೪

**ಲಕ್ಷ್ಮೀಕಾಂತ ಹೂಗಾರ**
ಸಂಶೋಧನಾ ವಿದ್ಯಾರ್ಥಿ,
ಡಾ. ಆರ್. ಸಿ. ಹಿರೇಮಠ
ಕನ್ನಡ ಅಧ್ಯಯನ ಪೀಠ,
ಕ. ವಿ. ವಿ., ಧಾರವಾಡ.

**ಅಶ್ವಥ.ಕೆ**
ಸಂಶೋಧನಾ ವಿದ್ಯಾರ್ಥಿ
ಜಾನಪದ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ.

**ನಾಗೇಶ ಎಸ್. ಜಿ.**
ಪಿಎಚ್.ಡಿ ಸಂಶೋಧನ ವಿದ್ಯಾರ್ಥಿ
ಭಾಷಾಂತರ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ ಹಂಪಿ–583276

**ಜಗದೀಶಗೌಡ ಚನ್ನಪ್ಪಗೌಡ ಶಿದ್ದನಗೌಡ್ರ**
ಪೋಸ್ಟ ಆಫೀಸ ಹತ್ತಿರ, ಅಂಕದಖಣ,
ಬಂಕಾಪೂರ
ತಾ: ಶಿಗ್ಗಾಂವ ಜಿ: ಹಾವೇರಿ.

**ಬಸವರಾಜ ಎಂ.**
ಸಂಶೋಧನಾ ವಿದ್ಯಾರ್ಥಿ,
ಅಭಿವೃದ್ಧಿ ಅಧ್ಯಯನ ವಿಭಾಗ,
ಕನ್ನಡ ವಿಶ್ವವಿದ್ಯಾಲಯ, ಹಂಪಿ.

**ನಾಗರಾಜ ಪಿ. ಕುರ್ಕಿ**
ಅಂಚೆ: ಕುರ್ಕಿ
ತಾ/ಜಿ:ದಾವಣಗೆರೆ–೫೭೭೫೧೪

**ಪ್ರವೀಣ ಆರ್.**
ಸಂಶೋಧನ ವಿದ್ಯಾರ್ಥಿ
ಹಸ್ತಪ್ರತಿಶಾಸ್ತ್ರ ವಿಭಾಗ
ಕನ್ನಡ ವಿಶ್ವವಿದ್ಯಾಲಯ ಹಂಪಿ.
ವಿದ್ಯಾರಣ್ಯ–೫೮೩೨೭೬

**ಡಾ. ವಿದ್ಯಾ ರಾವ್.**
ನೃತ್ಯ ಸಂಶೋಧಕರು.
'ಘೃಣಿ', ೩/ಎಂ, ೩ನೇ ಅಡ್ಡರಸ್ತೆ,
೪ನೇ ಮುಖ್ಯರಸ್ತೆ, ಗಿರಿನಗರ,
ಬೆಂಗಳೂರು – ೫೬೦೦೮೫

**ಮಂಜುನಾಥ ಬಿ. ಟಿ.**
ಸಂಶೋಧನಾರ್ಥಿ
ಕನ್ನಡ ಭಾರತಿ,
ಕುವೆಂಪು ವಿಶ್ವವಿದ್ಯಾಲಯ,
ಶಂಕರಘಟ್ಟ, ಶಿವಮೊಗ್ಗ.

**ಅನಿತಾ ವೈ.**
ಸಂಶೊಧನ ವಿದ್ಯಾರ್ಥಿನಿ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩೨೭೬

**ಪ್ರಭುಗೌಡ ವೀ. ಸಂಕಾನಗೌಡಶಾನಿ**
ಸಾ/ಅಂಚೆ: ಇಂಗಳಗಿ
ತಾ; ಕುಂದಗೋಳ
ಜಿ: ಧಾರವಾಡ-೫೮೦೦೨೮

**ಜಗದೀಶ ಮುಗಳಿ**
ಭೆಂಡವಾಡ
ರಾಯಬಾಗ
ಬೆಳಗಾವಿ ಜಿಲ್ಲೆ-೫೯೧೨೨೨

**ಮಂಜುನಾಥ ಬಿ. ಟಿ.**
ಸಂಶೋಧನಾರ್ಥಿ
ಕನ್ನಡ ಭಾರತಿ,
ಕುವೆಂಪು ವಿಶ್ವವಿದ್ಯಾಲಯ,
ಶಂಕರಘಟ್ಟ, ಶಿವಮೊಗ್ಗ

**ಅರುಣ ಹೊಸಮಠ**
ಸಮೂಹ ಸಂವಹನ ಮತ್ತು
ಪತ್ರಿಕೋದ್ಯಮ ವಿಭಾಗ,
ಕರ್ನಾಟಕ ವಿಶ್ವವಿದ್ಯಾಲಯ. ಧಾರವಾಡ

**ಡಾ. ದಶರಥ ಹರಿಜನ**
ಅತಿಥಿ ಉಪನ್ಯಾಸಕರು
ಪ್ರಾಚೀನ ಭಾರತ ಇತಿಹಾಸ ಮತ್ತು
ಶಾಸನಶಾಸ್ತ್ರ ವಿಭಾಗ
ಕ.ವಿ.ವಿ. ಧಾರವಾಡ



## ಇಂದಣೀಲಮಣಿಂ ಪ್ರಕಾಶನದ ಇದುವರೆಗಿನ ಪ್ರಕಟಣೆಗಳು

| ಅ.ಸಂ. | ಕೃತಿಯ ಹೆಸರು | ಲೇಖಕರು/ಸಂಪಾದಕರು | ಬೆಲೆ |
|---|---|---|---|
| ೧) | ತೊದಲುಗವಿತೆಗಳು | ನೇಮಿನಾಥ ತಪಕೀರೆ | ೩೫ |
| ೨) | ಅಂತರ್ವಾಣಿ ಸಂ-೦೧ | ನೇಮಿನಾಥ ತಪಕೀರೆ (ಸಂ) | ೧೬೦ |
| ೩) | ಅಂತರ್ವಾಣಿ ಸಂ-೦೨ | ಭರಮಪ್ಪಾ ನಿಂ. ಭಾವಿ (ಸಂ) | ೧೯೦ |
| ೪) | ಅಂತರ್ವಾಣಿ ಸಂ-೦೩ | ಜಗದೀಶ ಮುಗಳಿ (ಸಂ) | ೧೯೦ |
| ೫) | ಬಸವದೀಪ್ತಿ | ಜಗದೀಶ ಮುಗಳಿ | ೧೩೦ |
| ೬) | ಶ್ರೀಗಂಧ | ಡಾ. ಭರಮಪ್ಪಾ ನಿಂ. ಭಾವಿ | ೧೫೦ |
| ೭) | ಅಂತರ್ವಾಣಿ ಸಂ-೦೪ | ನೇಮಿನಾಥ ತಪಕೀರೆ (ಸಂ) | ೧೫೦ |
| ೮) | ಹೊರೆಯಾಗುತ್ತಿರುವ ಶಾಲಾಬ್ಯಾಗ್ | ಸಾವಿತ್ರಿ ಹಿರೇಮಠ | ೧೫೦ |
| ೯) | ಖಗೇಂದ್ರಮಣಿ ದರ್ಪಣಂ ಎಂಬ ವಿಷವೈದ್ಯಶಾಸ್ತ್ರ | ನೇಮಿನಾಥ ತಪಕೀರೆ | ೧೫೦ |
| ೧೦) | ಅಂತರ್ವಾಣಿ ಸಂ-೦೫ | ಡಾ. ಭರಮಪ್ಪಾ ಭಾವಿ (ಸಂ) | ೧೫೦ |
| ೧೧) | ಪಂಪನ ವಂಶದ ಅಣ್ಣಿಗೆರೆ ದೇಶಪಾಂಡೆ ವಾಡೆ | ಡಾ. ನಾಗರಾಜ ನವಲಗುಂದ | ೧೨೦ |
| ೧೨) | ಹನಗಂಡಿ ಜೈನ ದೇಸಾಯಿಗಳ ರಾಜವಾಡೆ | ಡಾ. ನಾಗರಾಜ ನವಲಗುಂದ | ೧೨೦ |
| ೧೩) | ಅಂತರ್ವಾಣಿ ಸಂ-೦೬ | ಜಗದೀಶ ಮುಗಳಿ | ೧೫೦ |